# ಆರ್ ಎಸ್ ಎನ್

## ವ್ಯಕ್ತಿ ಮತ್ತು ಕಲೆ

ಸಂಪಾದಕರು

**ಪ್ರೊ|| ಎಂ.ಎಚ್. ಕೃಷ್ಣಯ್ಯ**



**ಕರ್ನಾಟಕ ಶಿಲ್ಪಕಲಾ ಅಕಾಡೆಮಿ**

ಬೆಂಗಳೂರು

**RSN - Vyakthi Mattu Kale**
a collection of articles on R.S. Naidu and his art.
Edited by Prof. M.H. Krishnaiah

*Published by*
**Smt. Padmaja Kumari. N.**
Registrar
Karnataka Shilpakala Academy
Kannada Bhavana, J.C. Road
Bengalooru- 560 002

First Edition : 2008
Pages : vi + 168 + x (colour plates)
Price : Rs. 100/-



*Printed at :*
**Advaitha Enterprises**
Bengalooru- 560 085

# ಅಧ್ಯಕ್ಷರ ಮಾತು

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು ಇದುವರೆವಿಗೂ ಶಿಲ್ಪಕಲೆಗೆ ಸಂಬಂಧಿಸಿದ, ಶಿಲ್ಪಕಲಾವಿದರಿಗೆ ಸಂಬಂಧಿಸಿದ, ಶಾಸ್ತ್ರಗ್ರಂಥಗಳಲ್ಲದೆ, ಅವರ ಕಲಾ ಕೃತಿಗಳಿಗೆ ಸಂಬಂಧಿಸಿದ ಪುಸ್ತಕ ಪ್ರಕಟನೆ ಮಾಡುತ್ತಿದೆ. ಸಾಂಪ್ರದಾಯಿಕ, ಸಮಕಾಲೀನ ಶಿಲ್ಪಕಲೆಗಳಿಗೆ ಸಂಬಂಧಿಸಿದ ಪುಸ್ತಕಗಳು ಹೊರಬರುತ್ತಿದ್ದು, ಈ ಸಾಲಿನಲ್ಲಿ ಸಮಕಾಲೀನ ಶಿಲ್ಪಕಲೆಗೆ ಸಂಬಂಧಿಸಿದ ಕೆ.ವಿ.ಸುಬ್ರಹ್ಮಣ್ಯಂ ಅವರ ಕನ್ನಡ ಶಿಲ್ಪಕಲೆಯ ಸಮಕಾಲೀನ ದೃಶ್ಯ ವಿಮರ್ಶಾತ್ಮಕ ಪುಸ್ತಕ ಹೊರಬರುತ್ತಿದೆ. ಹಾಗೂ ಸಂಪ್ರಾದಯಿಕ ಶಿಲ್ಪಕಲೆಗೆ ಸಂಬಂಧಿಸಿದ ಕನಕಾಮೂರ್ತಿಯವರ "ನಮ್ಮ ದನಿ"ಸಾಂಪ್ರದಾಯಿಕ ಶಿಲ್ಪಿಗಳ ಯಶೋಗಾಥೆ ಈ ಕುರಿತಾದ ವಿಮರ್ಶಾತ್ಮಕ ಪುಸ್ತಕವಲ್ಲದೆ ಎಚ್.ಎಸ್.ಗೋಪಾಲರಾವ್ ಸಂಪಾದಕತ್ವದಲ್ಲಿ ಕರ್ನಾಟಕ ಶಿಲ್ಪ ಶೈಲಿಗಳ ಮಾಲಿಕೆಯಲ್ಲಿ, ಇತಿಹಾಸ ಪೂರ್ವದ ಶಿಲ್ಪಕಲೆ, ಕದಂಬರ ಶಿಲ್ಪಕಲೆ, ಗಂಗರಶಿಲ್ಪಕಲೆ, ಬಾದಾಮಿಯ ಚಾಲಕ್ಯರ ಶಿಲ್ಪಕಲೆ, ಕಲ್ಯಾಣಿ ಚಾಲುಕ್ಯರ ಶಿಲ್ಪಕಲೆ, ಹೊಯ್ಸಳರ ಶಿಲ್ಪಕಲೆ, ವಿಜಯ ನಗರದ ಶಿಲ್ಪಕಲೆ, ಹಾಗೂ ಚೋಳ-ಪಲ್ಲವರ ಶಿಲ್ಪಕಲೆ ಕುರಿತಾದ ಪುಸ್ತಕಗಳು ಶಿಲ್ಪ ಶೈಲಿಗಳನ್ನು ಅದರ ವಿಶೇಷತೆಗಳನ್ನು ಗುರಿತಿಸಿ ಶಿಲ್ಪಕಲಾವಿದರಿಗೆ ಅನುಕೂಲವಾಗುವಂತೆ ಪುಸ್ತಕಗಳು ಹೊರಬರುತ್ತಿವೆ. ಇದಲ್ಲದೆ ಶಿವಲಿಂಗಪ್ಪನವರ ಬಸವಯ್ಯ ಶಿಲ್ಪಿಯವರ ಕುರಿತಾದ ಪುಸ್ತಕ ಹೊರಬರುತ್ತಿದೆ. ಪ್ರಸ್ತುತ ಎಂ.ಎಚ್.ಕೃಷ್ಣಯ್ಯನವರು ಆರ್.ಎಸ್.ಎನ್. ಅವರ

ಕಲೆ ಮತ್ತು ಬದುಕು ಕುರಿತಾದ ಪುಸ್ತಕವನ್ನು ಹೆಚ್ಚಿನ ಶ್ರಮವಹಿಸಿ ಸಂಪಾದಿಸಿಕೊಟ್ಟಿದ್ದಾರೆ. ಕೆಲವು ಲೇಖಕರಿಂದ ಲೇಖನಗಳನ್ನು ಬರೆಸಿ ಈ ಕೃತಿಗೆ ಹೆಚ್ಚಿನ ಮೌಲ್ಯತಂದಿದ್ದಾರೆ. ಇದೀಗ ಈ ಗ್ರಂಥ ಹೊರ ಬರುತ್ತಿದೆ. ಆರ್.ಎಸ್.ಎನ್. ಇವರ ವ್ಯಕ್ತಿತ್ವ: ಕಲಾವಿದರಾಗಿ, ಶಿಲ್ಪಿಯಾಗಿ, ಮಹಾನ್ ಚಿಂತಕರಾಗಿ, ದೇಶ ಪ್ರೇಮಿಯಾಗಿ, ಸ್ವಾತಂತ್ರ್ಯಯೋಧರಾಗಿ, ಸಾಮಾಜಿಕ ಕಳಕಳಿ ಇರುವಂತಹ ಮಹಾನ್ ಸಾಧಕರು ಇವರ ಶತಮನೋತ್ಸವವನ್ನು ಕಳೆದವರ್ಷ (2007) ಆಚರಿಸಲಾಯಿತು. ಇಂತಹ ಅಪ್ರತಿಮ ಸೃಜನಶೀಲ ಕಲಾವಿದನ ಬಗ್ಗೆ ಅವರ ಕೃತಿಗಳ ಬಗ್ಗೆ ಅತಿ ಅವಶ್ಯ ಮಾಹಿತಿ ತಿಳಿಯಬಹುದು. ಅವರ ಪ್ರಸ್ತುತ ಇರುವ ಸೇರಾಮಿಕ್ ಶಿಲ್ಪಗಳು, ಹಾಗು ರೇಖಾ ಚಿತ್ರಗಳು ಶಿಲ್ಪಕಲಾ ವಿದ್ಯಾರ್ಥಿಗಳಿಗೆ ಮಾದರಿಯಾಗಬಲ್ಲದು. ಇವರ ಭಾವಶಿಲ್ಪಗಳಲ್ಲಿ ವ್ಯಕ್ತಿಯ ಆಂತರಿಕ ಲಕ್ಷಣಗಳನ್ನು ಬಿಂಬಿಸುವ ಶಿಲ್ಪಗಳು, ಕ್ರಿಯಾತ್ಮಕವಾಗಿ ಮಾಡಿದ ಶಿಲ್ಪಗಳಲ್ಲಿ ಹೆಚ್ಚಿನ ಸೃಜನಶೀಲತೆ ಹಾಗೂ ಕೌಶಲ್ಯ, ಭಾವಗಳು ತುಂಬಿ ಸಮಕಾಲೀನವಾಗಿ ರಚನೆಯಾಗಿವೆ. 60ರ ದಶಕದಲ್ಲಿ ಮೊದಲಿಗೆ ಇವರ ಪ್ರಯೋಗಗಳು, ಕ್ಯೂಬಿಸಂ ನೆಲೆಯಲ್ಲಿ ಬರ್ನ್‌ಡ್ ಷಾ ಅವರ ಶಿಲ್ಪ ನವ್ಯತೆಯ ಸಂಕೇತವಾಗಿದೆ.

ಇಂತಹ ಮಹಾನ್ ವ್ಯಕ್ತಿತ್ವದ ಆರ್.ಎಸ್.ಎನ್. ಬಗ್ಗೆ ಶ್ರೀ ಕಾ.ರಾ. ಕೃಷ್ಣಸ್ವಾಮಿಯವರಿಗಿದ್ದ ಅಭಿಮಾನ ಸ್ನೇಹಗಳಿಂದ ಆರ್.ಎಸ್.ಎನ್.ರ ಅನೇಕ ಶಿಲ್ಪ-ರೇಖಾಚಿತ್ರಗಳನ್ನು ಸಂಗ್ರಹಿಸಿಟ್ಟು ನಮಗೆ ಮಹದುಪಕಾರ ಮಾಡಿದ್ದಾರೆ. ಇವರನ್ನು ನೆನೆಯಲೇಬೇಕು. ಇದಲ್ಲದೆ ಸಂಗ್ರಹಿಸಿದ ಆರ್.ಎಸ್.ಎನ್.ರ ಲೇಖನಗಳನ್ನು ಸಹ ನೀಡಿ ಸಹಕರಿಸಿದ್ದಾರೆ. ಈ ಗ್ರಂಥ ಹೊರಬರಲು ಸಹಕರಿಸಿದ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಎಲ್ಲ ಸದಸ್ಯರಿಗೂ ವಂದನೆಗಳು. ಅಕಾಡೆಮಿಯ ರಿಜಿಸ್ಟಾರ್‌ರಾದ ಶ್ರೀಮತಿ ಪದ್ಮಜಾಕುಮಾರಿಯವರಿಗೂ ಸಿಬ್ಬಂದಿ ವರ್ಗದ ಎಲ್ಲರಿಗೂ ವಂದನೆಗಳು. ಈ ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟ ಅದ್ವೈತ ಎಂಟರ್‌ಪ್ರೈಸಸ್‌ನವರಿಗೂ ವಂದನೆಗಳು. ಶಿಲ್ಪಕಲಾವಿದರಿಗೂ ಕಲಾರಸಿಕರಿಗೂ ಇದು ಒಂದು ಉಪಯುಕ್ತ ಪುಸ್ತಕವಾಗುತ್ತದೆಂದು ಆಶಿಸುತ್ತೇವೆ.

*-ವೆಂಕಟಾಚಲಪತಿ*

# ಕೃತಜ್ಞತೆ

**ಒಂ**ದು ಕಾಲ, ಒಂದು ಅವಧಿಯ ಎಲ್ಲ ಬಗೆಯ ಸ್ಥಿತ್ಯಂತರಗಳ ಪ್ರತೀಕವಾದ ಕಲಾವಿದ ಆರ್. ಎಸ್. ನಾಯ್ಡು ಅವರನ್ನು, ಅವರ ವ್ಯಕ್ತಿತ್ವ ಮತ್ತು ಕಲೆಯನ್ನು ಕುರಿತ ಲೇಖನಗಳ ಸಂಗ್ರಹ ತರುವ ಬಹುವರ್ಷಗಳ ಆಸೆ ಇಂದು ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ವತಿಯಿಂದ ಪೂರೈಸಿದೆ. ಅಧ್ಯಕ್ಷರಾದ ಶ್ರೀ ವೆಂಕಟಾಚಲಪತಿಯವರು ಸ್ವತಃ ಶಿಲ್ಪಿಗಳು, ಸೂಕ್ಷ್ಮ ಸಂವೇದನೆಯ ಮೆಲುಮಾತಿನ ಸರಳ ವ್ಯಕ್ತಿ. ಹಲವರನ್ನು ಕಂಡು ಒಪ್ಪಿಸಿ ಹಲವು ರೀತಿಯಲ್ಲಿ ಸಹಕಾರ ಪಡೆದವರು ಅವರು, ಅವರ ಒತ್ತಾಸೆ ಇಲ್ಲದಿದ್ದರೆ ಈ ಕಾರ್ಯವಾಗುತ್ತಿರಲಿಲ್ಲ. ದಶಕಗಳಿಂದ ಆರ್.ಎಸ್.ಎನ್. ಬಗೆಗಿನ ಗೌರವ ಸ್ನೇಹಗಳ ಕಾರಣವಾಗಿ ದಾಖಲೆಗಳನ್ನು ಚಿತ್ರಗಳನ್ನು ಛಾಯಾಚಿತ್ರಗಳನ್ನು ಸಂಗ್ರಹಿಸಿ ರಕ್ಷಿಸಿಟ್ಟಿರುವವರು ಶ್ರೀ ಕ.ರಾ.ಕೃಷ್ಣಸ್ವಾಮಿಯವರು. ಇಂತಹ ಒಂದು ಗ್ರಂಥ ಬರಬೇಕೆಂದು ಅವರು ಹೇಳಿ ಇಪ್ಪತ್ತು ಇಪ್ಪತ್ತೈದು ವರ್ಷಗಳೇ ಕಳೆದುವು. ಬಹುಶಃ ಅವರಿಗಾಗುವ ಸಂತೋಷವನ್ನು ಊಹಿಸಲು ಸಾಧ್ಯವಿಲ್ಲ. ಬಹುಪಾಲು ಲೇಖನಗಳು ಆರ್.ಎಸ್.ಎನ್. ನಿಧನಾನಂತರ ಪ್ರಕಟವಾದುವು. ದಿ.ಕೆ.ಸಿ.ಚೌಡಪ್ಪರೆಡ್ಡಿಯವರು ಲೇಖನ ಮತ್ತು ಪತ್ರಗಳನ್ನು ಸಂಗ್ರಹಿಸಿದ್ದರು. ನಿಧನಕ್ಕೆ ಸ್ವಲ್ಪ ಮೊದಲು ಇಂತಹ ಒಂದು ಕೆಲಸದ ಬಗ್ಗೆ ಪ್ರಸ್ತಾಪಿಸಿದ್ದರು. ಅದು ಆಗ ಕೈಗೂಡಲಿಲ್ಲ. ಇಲ್ಲಿನ ಕೊರತೆಗಳು ಹಲವು ಬಗೆಯವು. ಅದರ ಪ್ರಸ್ತಾಪ ಮಾಡಿದಾಗ ಶ್ರೀ ಸಿ.ಆರ್.ಕೃಷ್ಣರಾವ್ ಮತ್ತು ಶ್ರೀಮತಿ ಕನಕಾಮೂರ್ತಿಯವರು ತಮ್ಮ ನೆನಪುಗಳನ್ನು ಬರೆದುಕೊಟ್ಟರು. ಅವರಿಗೆ ಕೃತಜ್ಞತೆಗಳು. ಶ್ರೀ ಕೆ.ಎಲ್. ಗೋಪಾಲಕೃಷ್ಣರಾವ್ ಅದರ ಮುನ್ನುಡಿಯಿಂದ ಆರ್.ಎಸ್.ಎನ್. ನೆನಪಿನ ಭಾಗವನ್ನು ಬಳಸಿಕೊಂಡಿದೆ. ಅವರಿಗೆ ಕೃತಜ್ಞತೆಗಳು. ಹಾಗೇ ಕೆಲವು ಮಿತ್ರರೂ ತಮ್ಮಲ್ಲಿದ್ದ ಚಿತ್ರಗಳನ್ನು ಒದಗಿಸಿದ್ದಾರೆ. ಅವರ ನೆರವಿಗೆ ವಂದನೆಗಳು. ಇತ್ತೀಚೆಗೆ ಆರ್.ಎಸ್.ಎನ್. ಜನ್ಮ ಶತಾಬ್ದಿಯನ್ನು ಆಚರಿಸಲಾಯಿತು. ಅವರನ್ನು ಕುರಿತು ಬರೆದ ಲೇಖಕರ ಬಗ್ಗೆ ಯೋಚಿಸಿದಾಗ, ಬಿ.ವಿ.ಕೆ. ಶಾಸ್ತ್ರಿಗಳು, ಎಸ್.ಕೆ. ರಾಮಚಂದ್ರರಾಯರು, ಪಿ. ಆರ್. ತಿಪ್ಪೇಸ್ವಾಮಿ, ಕೆ.ವಿ. ಸುಬ್ಬಣ್ಣ, ಹಾ.ಮಾ.ನಾಯಕ್ ಹೀಗೆ ಬಹುಮಂದಿ ಈಗ ನಮ್ಮೊಡನಿಲ್ಲ. ಆಗ್ಗೆ ಅವರು ಬರೆದು ಮಾಡಿದ ಉಪಕಾರ ದೊಡ್ಡದು. ಲೇಖನಗಳಲ್ಲಿ ಪುನರಾವರ್ತನೆ ಇವೆ. ಆ ಕಾರಣವೇ ಅಲ್ಪ ಸ್ವಲ್ಪ ವ್ಯತ್ಯಾಸವುಳ್ಳ ಲೇಖನಗಳನ್ನು ಕೈಬಿಟ್ಟಿದೆ. ಅನೇಕ ಪತ್ರಿಕೆಗಳವರು ಲೇಖನಗಳನ್ನು ಬರೆಸಿ ಪ್ರಕಟಿಸಿ, ಆರ್.ಎಸ್.ಎನ್. ನೆನಪು ಸದಾ ಹಸಿರಾಗಿರುವಂತೆ ಮಾಡಿದ್ದಾರೆ. ಆ ಲೇಖನಗಳೊಡನೆ ವಿವರ ನೀಡಿದೆ. ಅವರಿಗೆ ಕೃತಜ್ಞತೆ ಸಲ್ಲಿಸುತ್ತೇನೆ.

ಅದ್ವೈತ ಎಂಟರ್‌ಪ್ರೈಸಸ್‌ನ ಮಾಲೀಕರು ಹಾಗೂ ಸಿಬ್ಬಂದಿಯವರು ಅತ್ಯಲ್ಪ ಕಾಲಾವಧಿಯಲ್ಲಿ, ಒತ್ತಡಗಳ ನಡುವೆಯೂ ಪುಸ್ತಕದ ವಿನ್ಯಾಸ ಮೊದಲ್ಗೊಂಡು ಹಲವು ಬಗೆಯಲ್ಲಿ ವೈಯಕ್ತಿಕ ಆಸಕ್ತಿ ತೋರಿದ್ದಾರೆ. ಅವರಿಗೆ ಕೃತಜ್ಞತೆಗಳು.

*– ಎಂ.ಎಚ್. ಕೃಷ್ಣಯ್ಯ*

# ಪರಿವಿಡಿ

೧. **ಪ್ರಕಾಶಕರ ಮಾತು**
೨. **ಕೃತಜ್ಞತೆ**
೩. **ಪ್ರವೇಶ : ವ್ಯಕ್ತಿ–ಕಲೆ** / *ಪ್ರೊ॥ ಎಂ.ಎಚ್.ಕೃಷ್ಣಯ್ಯ* / ೧
೪. **ಅವಧೂತ ಕಲಾವಿದ ಆರ್.ಎಸ್.ನಾಯ್ಡು** / *ಪ್ರೊ॥ ಸಾ.ಕೃ. ರಾಮಚಂದ್ರರಾವ್* / ೧೩
೫. **ಕರ್ನಾಟಕ ಕಂಡ ವಿಚಿತ್ರ ಚಿತ್ರಕಾರ** / *ಪ್ರೊ. ಸಾ.ಕೃ. ರಾಮಚಂದ್ರರಾವ್* / ೧೮
೬. **ಆರೆಸ್ಸೆನ್ ಶಿಲ್ಪ** / *ಪ್ರೊ. ಸಾ.ಕೃ. ರಾಮಚಂದ್ರರಾವ್* / ೨೪
೭. **ದೈತ್ಯಶಕ್ತಿ, ಅದಮ್ಯ ಚೇತನದ ಆರ್.ಎಸ್.ಎನ್.** / ಎಚ್ಚೆಸ್ಕೆ / ೨೮
೮. **ಆರ್.ಎಸ್.ನಾಯ್ಡು** / *ಪಿ.ಆರ್.ತಿಪ್ಪೇಸ್ವಾಮಿ* / ೩೨
೯. **ಬ್ಯಾಲೆಗೆ ಭ್ರಮಿಸಿದ ಆರ್.ಎಸ್.ಎನ್.** / *ಬಿ.ವಿ.ಕೆ.ಶಾಸ್ತ್ರೀ* / ೩೮
ಅನುಬಂಧ ೧ : ಮೆಚ್ಚುಗೆ / *ಐ.ಎಂ.ವಿಠಲಮೂರ್ತಿ*
ಅನುಬಂಧ ೨ : ನನ್ನ ಮಾತು / *ಬಿ.ವಿ.ಕೆ.ಶಾಸ್ತ್ರೀ*
೧೦. **ಕಲಾವಿದ ಆರ್.ಎಸ್.ಎನ್. ನಾನು ಕಂಡಂತೆ** / ಸಿ.ಆರ್.ಕೃಷ್ಣರಾವ್ / ೫೭
೧೧. **ನಾವೇ ದೇವರಾಗುತ್ತೇವೆ** / *ಕೆ.ಎಲ್.ಗೋಪಾಲಕೃಷ್ಣರಾವ್* / ೬೦
೧೨. **ಆರ್.ಎಸ್.ಎನ್.ನೆನಪು** / *ಕನಕಾಮೂರ್ತಿ* / ೬೧
೧೩. **ಕುಂಚಬ್ರಹ್ಮ ಆರ್.ಎಸ್.ಎನ್.** / *ರವೀಂದ್ರನಾಥ್ ಅನಕೃ* / ೬೩
೧೪. **ಆರ್.ಎಸ್.ಎನ್.** / ಹಾಮಾ ನಾಯಕ / ೬೯
೧೫. **ಕಲಾಯೋಗಿ ಆರ್.ಎಸ್.ನಾಯ್ಡು** / *ಎಚ್.ಜಿ. ಸೋಮಶೇಖರರಾವ್* / ೭೨
೧೬. **ಆರ್.ಸೀತಾಪತಿ ನಾಯ್ಡು** / *ಕೆ.ವಿ.ಸುಬ್ಬಣ್ಣ* / ೭೫
೧೭. **ವಿಶಾಲ ಮನಸ್ಸಿನ ವಿಕ್ಷಿಪ್ತಕಲಾವಿದ** / *ಬಿ.ಎಸ್. ವೆಂಕಟಲಕ್ಷ್ಮೀ* / ೭೮
೧೮. **ಕಲೋಪಾಸಕ ಆರ್.ಎಸ್.ನಾಯ್ಡು** / *ಪಿ.ಆರ್.ತಿಪ್ಪೇಸ್ವಾಮಿ* / ೮೩
೧೯. **ಆರ್.ಎಸ್.ನಾಯ್ಡು** / *ಕೆ.ವಿ. ಸುಬ್ರಹ್ಮಣ್ಯಂ* / ೮೭
೨೦. **ಅನನ್ಯ ಶೈಲಿಯ ಕಲಾವಿದ** / *ರವಿಕುಮಾರ್ ಕಾಶಿ* / ೮೯
೨೧. **ಕುವೆಂಪು ಜನ್ಮದಿನದಂದು ಆರ್.ಎಸ್.ಎನ್.ನೆನಪು** / *ಲಂಕೇಶ್ ಪತ್ರಿಕೆ* / ೯೦
೨೨. **R.S.N. The Brilliant Caricaturist** / *K. Ravindranath* / ೯೨
೨೩. **Between You and Me** / C.H. Prahlada Rao / ೯೪

**ಆರ್.ಎಸ್.ಎನ್. ಲೇಖನಗಳು**

೨೪. **ಸೆರೆಮನೆಯ ನೆನಪು** / ೯೭
೨೫. **Pre-eminence of Form** / ೧೦೦

**ಪ್ರಶಸ್ತಿ ವಾಚಿಕೆಗಳು**

೨೬. **ಆರ್.ಎಸ್.ನಾಯ್ಡು** / *ಕರ್ನಾಟಕ ಲಲಿತಕಲಾ ಅಕಾಡೆಮಿ* / ೧೦೨
೨೭. **ಕಲೆಗಾರ ಆರ್.ಸೀತಾಪತಿನಾಯ್ಡು** / *೪೭ನೇ ಕನ್ನಡ ಸಾಹಿತ್ಯ ಸಮ್ಮೇಳನ* / ೧೦೪
೨೮. **ಕ್ರಾಂತಿಕಾರಿಯ ಒಡಲಾಳ** / *ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕೆ.ವಿ. ಸುಬ್ರಹ್ಮಣ್ಯಂ* / ೧೦೫

**ಎರಡು ಪತ್ರಗಳು**

೨೯. **ಕೆ.ಸಿ.ಚೌಡಪ್ಪರೆಡ್ಡಿಯವರಿಗೆ** / ೧೦೯
೩೦. **ಕ.ರಾ.ಕೃ ಅವರಿಗೆ** / ೧೧೦

**ಚಿತ್ರಗಳು, ಶಿಲ್ಪಗಳ ಛಾಯಾ ಚಿತ್ರಗಳು**



# ಪ್ರವೇಶ : ವ್ಯಕ್ತಿ – ಕಲೆ

■ *ಎಂ.ಎಚ್. ಕೃಷ್ಣಯ್ಯ*

**ಒಂ**ದು ಅನನ್ಯ ಪ್ರತಿಭೆಯನ್ನು ಇನ್ನೊಂದು ಅನನ್ಯ ಪ್ರತಿಭೆ ಮೆಚ್ಚಿ ಗೌರವ ಸಲ್ಲಿಸಿದ ಪ್ರಸಂಗ ಅಪೂರ್ವ, ಅನನ್ಯವಾದದ್ದು. ಆರ್.ಎಸ್.ಎನ್. ವರಕವಿ ದ.ರಾ.ಬೇಂದ್ರೆಯವರ, ಈಗ ಚಿರಪರಿಚಿತವಾಗಿರುವ ಲಾಲಿತ್ಯಪೂರ್ಣ ಶಿಲ್ಪವನ್ನು ರಚಿಸಿದಾಗ ಅದರ ಬಗ್ಗೆ ಬೇಂದ್ರೆಯವರು ಸ್ಪಂದಿಸಿದ ರೀತಿ ವಿಶಿಷ್ಟ. ಅದು ಆರ್.ಎಸ್.ಎನ್. ಅವರ ಕಲಾ ಸೃಷ್ಟಿಯ ಹಿಂದಿರುವ ಒಂದು ತಾತ್ವಿಕ ದೃಷ್ಟಿಯನ್ನು ವ್ಯಕ್ತಪಡಿಸುತ್ತದೆ. ಬೇಂದ್ರೆ ಹೇಳಿದರು:

*"ನಾನು ಇಷ್ಟೊಂದು ಸುಂದರವಾಗಿಲ್ಲ!"*

ಅದಕ್ಕೆ ಆರ್.ಎಸ್.ಎನ್. ಉತ್ತರ:

"ದೈವ ಸೃಷ್ಟಿಯನ್ನು ಸುಂದರಗೊಳಿಸುವುದೇ ನನ್ನ ಕಲಾಕೃತಿಗಳ ಉದ್ದೇಶ!" ಅನಂತರ ಬೇಂದ್ರೆಯವರು ಆರ್.ಎಸ್.ಎನ್. ಬಗ್ಗೆ ಪುಟ್ಟ ಕವನ ಬರೆದರು:

*ಓ!*
*ಯುಗದ ಕವಿ; ಜಗದ ಭವಿ*
*ಯುಗಾಂತರದ ರವಿ*
*ನೀ ಬರಿ ಬೆಳಗಲ್ಲೋ ಅಣ್ಣಾ!*
*ನೀ ಬರಿ ಬೆಳಗಲ್ಲ!!*
*ಬದುಕಿನಾ ಬೆಡಗಿಗೆ*
*ಅಲೌಕಿಕದಾ ಬೆಳಕಾ ಬಳಿದ*
*ನಿನ್ನ ಕಂಡು*
*ನಾ ಬರಿ ಬೆರಗಲ್ಲೋ ಅಣ್ಣಾ!*
*ನಾ ಬರಿ ಬೆರಗಲ್ಲೋ!!*

ಕಲೆಯನ್ನು ಕುರಿತ ಪಾರಂಪರಿಕ ಶಾಸ್ತ್ರಾಗಮ ಗ್ರಂಥಗಳ ಸಾರವನ್ನು ಕನ್ನಡಕ್ಕೆ ನೀಡಿದ ಕಲಾಚಿಂತಕ, ವಿಮರ್ಶಕ ಪ್ರೊ, ಎಸ್.ಕೆ. ರಾಮಚಂದ್ರರಾಯರು ಆರ್.ಎಸ್.ಎನ್. ಅವರನ್ನು 'ಅವಧೂತ ಕಲಾವಿದ' ಎಂದಿದ್ದಾರೆ. ಈ ಇಬ್ಬರ ಪ್ರತಿಕ್ರಿಯೆಯಲ್ಲೂ ಕಲಾ ಸಂಬಂಧಿತ ಅಂತರ್ಬೋಧೆಯ, ಅಂತಃಸ್ಫುರಣೆಯ ನಿಗೂಢತೆ ಅಡಗಿದೆ. ಹಾ.ಮಾ. ನಾಯಕರು 'A Genious', 'ಬುದ್ಧಿಜೀವಿ' ಎಂದರು. ಯಾವುದೇ

ಔಪಚಾರಿಕ ಕಲಾಭ್ಯಾಸವಿಲ್ಲದ ಸ್ವಯಂಭೂ, ಸ್ವಯಮಾಚಾರ್ಯ ಎಂಬಂತೆ ಮೂಡಿಬಂದ ಕಲೆಯಾಗಿದ್ದರಿಂದ, ಈ ಎಲ್ಲ ಶಬ್ದಗಳು ಅರ್ಥದಾಚೆಗಿನ ವ್ಯಕ್ತಿ ಮತ್ತು ಕಲೆಯ ಬಗ್ಗೆ ಕುತೂಹಲ ಕೆರಳಿಸುತ್ತವೆ. ಬೆಳಕು ಚೆಲ್ಲುತ್ತವೆ.

ಆರ್.ಎಸ್.ನಾಯ್ಡು ಎಂಬತ್ತು ವರ್ಷ (೨೨-೪-೧೯೦೬ ರಿಂದ ೬-೧೦-೧೯೮೫)ಬದುಕಿದ್ದರು, ಆ ಬದುಕೂ ಸರಳ ಆದರೆ ಸಂಕೀರ್ಣ, ಆ ಚೈತನ್ಯ ವೈರುಧ್ಯ ವೈಚಿತ್ರ್ಯಗಳ ನಡುವೆಯೇ ಹಲವು ದಿಕ್ಕುಗಳಲ್ಲಿ ಹರಡಿತು. ಉಳಿದಿರುವುದು, ಕಾಣಸಿಗುವುದು ಅವರ ಕಲಾಸೃಷ್ಟಿ. ಅವರು ಹುಟ್ಟಿದ್ದು ಬೆಂಗಳೂರಿನಲ್ಲಿ. ತಂದೆ ರಂಗಸ್ವಾಮಿನಾಯ್ಡು, ಅರಣ್ಯ ಇಲಾಖೆಯಲ್ಲಿ ಉದ್ಯೋಗದಲ್ಲಿದ್ದವರು. ತಾಯಿ ರಂಗನಾಯಕಮ್ಮನವರು. ಆರ್.ಎಸ್.ಎನ್. ಅಜ್ಜ ಸೈನ್ಯಾಧಿಕಾರಿಯಾಗಿ ನಿವೃತ್ತರಾಗಿ ತಿರುಚಿನಾಪಳ್ಳಿಯಲ್ಲಿ ನೆಲೆಸಿದ್ದರು. ಆರ್.ಎಸ್.ಎನ್. ಅವರ ಅಣ್ಣನವರು ಪ್ರೊ. ಜಗಪತಿನಾಯ್ಡು. ಚಂಡೀಗಡ, ಮೈಸೂರು ವಿಶ್ವ ವಿದ್ಯಾಲಯಗಳಲ್ಲಿ ಭೂವಿಜ್ಞಾನ ಪ್ರಾಧ್ಯಾಪಕರಾಗಿದ್ದವರು. ಆಗ್ಗೆ ಮೈಸೂರು ವಿಶ್ವವಿದ್ಯಾಲಯದಲ್ಲಿ ಮಾನವಿಕ ವಿಭಾಗಗಳು ಮಹಾರಾಜಾ ಕಾಲೇಜಿನಲ್ಲೂ ವಿಜ್ಞಾನ ವಿಭಾಗಗಳು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲೂ ಇದ್ದು ಜಗಪತಿನಾಯ್ಡು ಬೆಂಗಳೂರಿನಲ್ಲಿದ್ದರು. ಆರ್.ಎಸ್.ಎನ್. ಅವರ ಒಬ್ಬ ತಂಗಿ ಶ್ರೀಮತಿ ಸುಲೋಚನಮ್ಮ, ಭಾವ ಕೇಶವ ಗೋಪಾಲನಾಯ್ಡು ಅವರು. ಇದು ಅವರ ಮನೆತನದ ವಿವರ.

ಆರ್.ಎಸ್.ಎನ್. ಅವರ ಜನ್ಮ ದಿನಾಂಕವನ್ನು ಹಲವು ಲೇಖನಗಳಲ್ಲಿ ೨೭-೮-೧೯೦೬ ಎಂದು ದಾಖಲಿಸಿದೆ. ಆದರೆ ಕ.ರಾ.ಕೃ. ಅವರು ಇದು ತಪ್ಪು ಜನ್ಮದಿನಾಂಕ, ೨೭-೪-೧೯೦೬ ಸರಿಯಾದ ಜನ್ಮದಿನಾಂಕ ಎಂದು ಬರೆದು ತಿಳಿಸಿದರು. ದಾಖಲೆಗಳನ್ನು ಪರಿಶೀಲಿಸಿದಾಗ ಕ.ರಾ.ಕೃ. ದಿನದ ಅಂಕಿಗಳನ್ನು ತಪ್ಪಾಗಿ ಓದಿರುವುದು ತಿಳಿಯಿತು. ಸ್ವತಃ ಆರ್.ಎಸ್.ಎನ್. ಅವರು ದಿ.ಕೆ.ಸಿ. ಚೌಡಪ್ಪರೆಡ್ಡಿಯವರಿಗೆ ಬರೆದ ೬-೭-೧೯೭೩ರ ಪತ್ರದಲ್ಲಿ "My date of birth is 22nd April 1906'' ಎಂದು ಸ್ಪಷ್ಟವಾಗಿ ತಿಳಿಸಿರುವುದಲ್ಲದೆ, ಮುಂದುವರೆದು ನನಗೀಗ ೬೭ ವರ್ಷವಾಗಿದೆ; ಆದರೆ ದೈಹಿಕವಾಗಿ ಕೃಶವಾಗಿರುವ ಕಾರಣ ೭೫ ವರ್ಷದಾಟಿದೆ ಎಂದೂ ಹೇಳಬಹುದು-ಎಂದು ತಮಾಷೆ ಮಾಡಿಕೊಂಡಿದ್ದಾರೆ. ತಮ್ಮನ್ನು ಜೀವನದುದ್ದಕ್ಕೂ ಕಾಡುತ್ತಿದ್ದ ಮಾನಸಿಕ ತೊಂದರೆ ಬಗ್ಗೆಯೂ ಆ ಪತ್ರದಲ್ಲಿ ನೋವು ತೋಡಿಕೊಂಡಿದ್ದಾರೆ. "it is indeed painful to realize that nobody can know what is happening to me, particularly to my brain even today, every day. Only a Psychiatrist (endowed with probing hypnotic powers) can know the truth. We do have a few of them in our country, quite accessible too'' ಎಂದಿದ್ದಾರೆ. ಯಾವ ವೈದ್ಯರೂ ಗುಣಪಡಿಸಲಾಗದ ಒಂದು ಬಗೆಯ ಪರ್ಸೆಕ್ಯೂಷನ್ ಫೋಬಿಯ ಕಿರುಕುಳ ಪೀಡನೆಯ ಭೀತಿ. ಆ ಬಗ್ಗೆ ಹಲವರು ಬರೆದಿದ್ದಾರೆ.

ಅವರ ವಿದ್ಯಾಭ್ಯಾಸ ಹಲವು ನಗರಗಳಲ್ಲಿ ನಡೆಯಿತು. ತಿರುಚಿನಾಪಳ್ಳಿ, ಬೆಂಗಳೂರು, ಧಾರವಾಡದ ಕರ್ನಾಟಕ ಕಾಲೇಜು, ಪುಣೆಯ ಫರ್ಗ್ಯೂಸನ್ ಕಾಲೇಜಿನಲ್ಲಿ ಕಾನೂನು. ವಿಜ್ಞಾನದ ವಿದ್ಯಾರ್ಥಿಯಾಗಿದ್ದರೂ ಅವರ ಆಸಕ್ತಿ ಕಲೆ, ಸಾಹಿತ್ಯ, ಮನಃಶಾಸ್ತ್ರ, ಆತ್ಮವಿದ್ಯೆ (Metaphysics) ಕಡೆಗೆ, ಮೊದಲಿನಿಂದಲೂ ಸಹ.

ಪೂನಾದಲ್ಲಿದ್ದಾಗಲೇ ಅವರ ಬದುಕಿಗೆ ತಿರುವು ಬಂದದ್ದು. ಚಳವಳಿಗೆ ಧುಮುಕಿದ್ದು ಅಲ್ಲೆ, ಕಾಂಗ್ರೆಸ್ ಮಾತ್ರವಲ್ಲದೆ ಸಮಾಜವಾದಿ ಹಾಗೂ ಕಮ್ಯುನಿಸ್ಟರ ಸಂಪರ್ಕ. ಅದು ಮೂವತ್ತರ ದಶಕ ೧೯೩೦, ೧೯೩೪, ೧೯೩೯ರಲ್ಲಿ, ಮತ್ತೆ ೧೯೪೦-೪೫ರಲ್ಲಿ ಸೆರೆಮನೆವಾಸ. ಅವರ ಕಲಾಪ್ರತಿಭೆ ಪ್ರಕಟಗೊಂಡದ್ದೇ ಸೆರೆಮನೆಯಲ್ಲಿ, ಜೇಡಿಮಣ್ಣಿನಿಂದ ಲೆನಿನ್‌ರ ನಾಲ್ಕು ಅಡಿಯ ಶಿಲ್ಪ ರಚಿಸಿದಾಗ. ಅವರದು ನೆಲೆ ನಿಲ್ಲದ ಸುತ್ತಾಟ. ಬಡವರ, ತುಳಿತಕ್ಕೆ ಒಳಗಾದವರ ಸಂತ್ರಸ್ತರ ನೋವು ದುಃಖಗಳಿಗೆ ಸ್ಪಂದಿಸಿದ ಅವರು ಒಂದೆಡೆ ನಿಲ್ಲಲಿಲ್ಲ. "ರಾಜಕಾರಣದಲ್ಲಿ ಗಾಂಧೀಜಿಯವರೊಂದಿಗೆ ಸಂಪರ್ಕವಿದ್ದಿತು; ಸ್ವಾತಂತ್ರ್ಯ ಸಮರದಲ್ಲಿ ಪಾಲ್ಗೊಂಡಿದ್ದರು. ಆದರೆ ರಾಜಕಾರಣಿಯಾಗಿ ಮುಂದುವರೆಯಲಿಲ್ಲ. ಮಾರ್ಕ್ಸ್‌ವಾದವನ್ನು ನೆರೆನಂಬಿದರೂ ಕಮ್ಯುನಿಸ್ಟ್ ಆಗಲಿಲ್ಲ. ಪತ್ರಿಕಾ ವ್ಯವಸಾಯದಲ್ಲಿ ಅಡಿಯಿಟ್ಟರಾದರೂ ಅಲ್ಲಿಯೇ ಉಳಿದುಕೊಳ್ಳಲಿಲ್ಲ. ಅಶೋಕ ಮೆಹತಾ, ಮೀನೂ ಮಸಾನಿಯಂಥ ಹಿರಿಯರ ಪರಿಚಯವಿದ್ದಿತಾದರೂ ಸ್ವಾರ್ಥವನ್ನು ಸಂಪಾದಿಸಿಕೊಳ್ಳಲಿಲ್ಲ" ಎಸ್.ಕೆ. ರಾಮಚಂದ್ರರಾಯರ ಈ ವಸ್ತುನಿಷ್ಠ ವಿಶ್ಲೇಷಣೆ ಎಲ್ಲವನ್ನೂ ತಿಳಿಸುತ್ತದೆ. ಅವಿವಾಹಿತರಾಗೇ ಉಳಿದ ಅವರು

ಸ್ವಯಂ ಪಾಕದಿಂದ ಸಂತುಷ್ಟರಾದವರು; ಒಂಟಿಯಾಗೇ ಯಾರ ಹಂಗಿಗೂ ಒಳಗಾಗದೇ ಉಳಿದರು–ಅಸಂಖ್ಯ ಬಂಧುಗಳು, ಸ್ನೇಹಿತರು, ಅಭಿಮಾನಿಗಳ ನಡುವೆ ಇದ್ದರೂ ಸಹ.

ಇವರು ಇಂಗ್ಲೆಂಡಿಗೆ ಹೋಗಿದ್ದು ಎರಡನೇ ಮಹಾಯುದ್ಧದ ಸಂದರ್ಭದಲ್ಲಿ. ಸ್ಕಾಟ್ಲೆಂಡ್‌ಯಾರ್ಡ್ ಪೊಲೀಸರ ಕಿರುಕುಳ, ಬೆನ್ನುಹತ್ತಿದ್ದು ಮುಂತಾದುವು ಮುಂದೆ ಅವರ 'ಭೂತ' ಕಾಡುವ ಮನಃಸ್ಥಿತಿಗೆ ಕಾರಣ ಎಂದು ಹಲವರು ತಿಳಿಸುತ್ತಾರೆ. ಎಚ್.ಜಿ. ಸೋಮಶೇಖರ ರಾವ್ ಅವರು ಆ ಪೊಲೀಸರ ಬಗ್ಗೆ ಆರ್.ಎಸ್.ಎನ್.ಗೆ ತುಂಬ ಮೆಚ್ಚುಗೆ ಇತ್ತು. ಆಗಾಗ್ಗೆ ಹೇಳುತ್ತಿದ್ದರು ಎನ್ನುತ್ತಾರೆ. "They used diplomacy in extracting information." ಅದನ್ನು ಮೆಚ್ಚುತ್ತಿದ್ದರು. ಇಂಪೀರಿಯಲ್ ದಾಖಲೆಗಳಲ್ಲಿ "R.S.Naidu was incorruptible... he was not upto anything" ಎಂದಿದೆ ಎನ್ನಲಾಗಿದೆ. ಅಂದರೆ ಅವರು ರಷ್ಯಾದ ಸ್ಪೈ ಅಲ್ಲ ಎಂದು. ಆದರೂ ನ್ಯಾಯಾಲಯದಲ್ಲಿ ರಷ್ಯಾಕ್ಕೆ ಹೋಗಲು ಅನುಮತಿ ನಿರಾಕರಿಸಲಾಯಿತು. ನಾಯ್ಡು ಅವರಿಗೆ ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದಂತೆ ರಷ್ಯಾಕ್ಕೆ ಹೋಗುವ ಉದ್ದೇಶವಿತ್ತು. ಅದು ಕೈಗೂಡಲಿಲ್ಲ. ಮಾನಸಿಕವಾಗಿ ಈ ಎಲ್ಲ ಘಟನೆಗಳು ಆಘಾತ ಉಂಟುಮಾಡಿರಬೇಕು ಎಂದು ಹಲವರು ಹೇಳಿದ್ದಾರೆ.

ಅದಕ್ಕೂ ಮೊದಲು ಆರ್.ಎಸ್.ಎನ್. ಸೆರೆಮನೆಗಳಲ್ಲಿದ್ದಾಗಲೆ ಅನೂಹ್ಯ ದೌರ್ಜನ್ಯ, ಹಿಂಸೆ, ಕ್ರೌರ್ಯಗಳನ್ನು ಕಂಡಿದ್ದರು. ಸೆರೆಮನೆಯ ಅನುಭವಗಳ ಒಂದು ಲೇಖನ ಅವರೆ ಬರೆದದ್ದನ್ನು (ಪತ್ರವನ್ನು ಕನ್ನಡ ಲೇಖನವಾಗಿ ರೂಪಾಂತರಗೊಳಿಸಿದ್ದು) ಇಲ್ಲಿ ಸೇರಿಸಿದೆ. ಚೌಡಪ್ಪರೆಡ್ಡಿಯವರೊಂದಿಗೆ ನಾಯ್ಡು ಅವರದು ಹಲವು ದಶಕಗಳ ಸ್ನೇಹ. ೧೯೬೭ ಮಾರ್ಚ್ ೨೬ರ ಒಂದು ದೀರ್ಘಪತ್ರ, ಐದು ಪುಟಗಳಿಗೂ ಮೀರಿದ್ದು. ಅದರಲ್ಲಿ ಮನಸ್ಸನ್ನು ತೋಡಿಕೊಂಡಿದ್ದಾರೆ. ಸೂಕ್ಷ್ಮ ಮನಸ್ಸಿನ ಯುವಕನ ಮೇಲೆ ಆಘಾತಕಾರಿ ಪರಿಣಾಮ ಉಂಟುಮಾಡಿದ್ದರೂ ಆಶ್ಚರ್ಯವಿಲ್ಲ. "Long , long ago; it was in Yervada Central Jail, 1933. the skull of a Congress Volunteer, sathyagrahi, had been cracked open and the jailor responsible for it found himself our fellow prisoner. Lucky fellow, the Jailor. He was to have dangled at the loose end of a rope" ಎಂದು ಬರೆದಿದ್ದಾರೆ. ಒಬ್ಬ ಸೆರೆವಾಸಿ ಗೋಗಟೆಯ ಬಗೆಗೂ ಬರೆದಿದ್ದಾರೆ. "ಪಕ್ಕದ ಸೆಲ್‌ನಲ್ಲಿ ಗೋಗಟೆ ಎಂಬ ವ್ಯಕ್ತಿ ಇದ್ದ. ಅವನು ಬಾಂಬೆ ಗವರ್ನರ್ ಮೇಲೆ ಗುಂಡು ಹಾರಿಸಿದ್ದ. ಗಾಯವಾಗಿ ಗವರ್ನರ್ ಉಳಿದುಕೊಂಡರು, ರಕ್ಷಾಕವಚ ಒಳಗೆ ಹಾಕಿಕೊಂಡಿದ್ದರಿಂದ. ಗೋಗಟೆ ಬಹಳ ಒರಟ. ಹಿಂದೆ ಅಂಡಮಾನ್ ನಿಕೊಬಾರನಲ್ಲಿ ಇದ್ದವರು, ಅಲ್ಲಿಂದ ತಪ್ಪಿಸಿಕೊಂಡು ಬಂದವರು, ಅವರಿಗಿಂತ ಈತ ದೊಡ್ಡ ಮನುಷ್ಯ ಎಂದು ನಾಯ್ಡು ಅಭಿಪ್ರಾಯ. ಈತನಲ್ಲಿ ಫಿಯರ್‌ಲೆಸ್‌ನೆಸ್ ಎಂಬುದು ಅದ್ಭುತವಾಗಿತ್ತಂತೆ. ವಿಪರೀತ ಗಲಾಟೆ ಮಾಡುತ್ತಿದ್ದ ಈತನನ್ನು ಹೊಡೆಯಲು ಪೊಲೀಸರು ಬಂದಾಗ, ಬೀಸೋಕಲ್ಲಿನ ಎರಡೂ ಭಾಗಗಳನ್ನು ಅನಾಮತ್ತಾಗಿ ಎತ್ತಿ ಅವರ ಮೇಲೆ ಹಾಕಲು ಹೋದನಂತೆ, ಅವರು ಓಡಿ ತಪ್ಪಿಸಿಕೊಂಡರು. 'Those days the detenues used to be covered with blankets and beaten' ಗುರುತು ಉಳಿಯದ ಹಾಗೆ ಕಂಬಳಿ ಸುತ್ತಿ ಹೊಡೆಯುತ್ತಿದ್ದರು. ಆ ಮಾತನ್ನು ಹೇಳುವಾಗ ಇಡೀ ದೇಹವನ್ನು ನಾಯ್ಡು ಮುದುಡಿಕೊಳ್ಳುತ್ತಿದ್ದುದರಿಂದ ಇವರಿಗೂ ಆ ಅನುಭವ ಆಗಿತ್ತೆನ್ನಬೇಕು. ಆತ ಒಂದು ದಿನ ಇವರ ಕಡೆ ಗೋಡೆಯನ್ನು ಟ್ಯಾಪ್ ಮಾಡಿ ಮೆತ್ತಗೆ ಹೇಳಿದನಂತೆ" ಎಂದು ಆ ಘಟನೆಯನ್ನು ಸೋಮಶೇಖರರಾವ್ ವಿವರಿಸಿದರು. ಮೇಲೆ ಹೇಳಿದ ಪತ್ರದಲ್ಲಿ ಆ ಘಟನೆ ಬಗ್ಗೆ ನಾಯ್ಡು ಉಲ್ಲೇಖಿಸಿದ್ದಾರೆ. "He whispered: 'If any one tries to open your cell at night, only the Gaz officer has the right, yell out for all you are worth. I have already contacted other prisoners (a few 100s) across the walls (30'high) and by golly, we shall set the blooming place ablaze" ಎಂದ ಎಂದು ಬರೆದಿದ್ದಾರೆ, ಅದು ಹಾಗೇ ಆಯಿತು, ಎಂದರೆ, ಎಲ್ಲರೂ ಕಿರುಚಲು ಪ್ರಾರಂಭಿಸಿದಾಗ ದೊಡ್ಡ ಗೊಂದಲವಾಯಿತು. ಆರ್.ಎಸ್.ಎನ್. ನಡುರಾತ್ರಿ ಹೊಡೆತದಿಂದ ಉಳಿದುಕೊಂಡರು ಎನ್ನುತ್ತಾರೆ ಸೋಮಶೇಖರರಾವ್.

ಸೆರೆಮನೆಯಲ್ಲಿದ್ದ ಪ್ರಮುಖ ವ್ಯಕ್ತಿಗಳು, ನಾಯಕರು ಇವರ ಬಗ್ಗೆ ಕೆಲವು ಲೇಖಕರು ಬರೆದಿದ್ದಾರೆ. ಸೆರೆಮನೆಯ ದೌರ್ಜನ್ಯ ಕಾರಣ ಪ್ರತಿಭಟಿಸಲು ಮುಷ್ಕರ ಹೂಡಿದ್ದು, ನಾಯ್ಡು ಉಪವಾಸ ಮಾಡಿದ್ದು–ಈ ಪ್ರಸಂಗ ಇಂದು ದಂತಕಥೆಯಂತೆ ಎನಿಸಿದರೆ ಆಶ್ಚರ್ಯವಿಲ್ಲ. ಅದು ವಾಸ್ತವ ಸಂಗತಿ ಎಂಬುದನ್ನು, ಅದು ಬೀರಿದ ಪರಿಣಾಮವನ್ನು ಆರ್.ಎಸ್.ಎನ್.

ಪತ್ರದಲ್ಲಿ ವಿವರಿಸಿದ್ದಾರೆ. "A few days after Mahadevbhai Desai entered right into my cell and squatted beside the recumbent me on the bed. I was already weak, prostrate. He treated me to a disquisition on Gandhian Philosophy and ways of Satyagraha. He visited me thereafter for 4 or 5 days successively, Philosophise and return. It was of no avail.

A few days after, I found myself face to face with Bapuji himself. One thing stands out before my mind as green as ever, his utter, disarming humility and deep concern for the man.

The authorities (Lt. Col. Bhandari and the consistantly sympathetic Sri. Kateli, later Supdt, at Nasik) had placed just two chairs & were standing around. Bapuji took one and I hurried to squat at his feet when the great Bapu shot up from his chair & lifting me by the shoulder, said, If you dont sit on that chair, I shall have to sit down too!' I was overcome. Believe me, there were tears in his eyes when he ran his hands about my shoulder and chest and remarked: 'you should'nt waste your youthful strength. You must keep strong, for we have greater fights ahead...'

we won the fight (strike)."

ಇವು ನಾಯ್ಡು ಅವರ ಮಾತುಗಳಲ್ಲೇ ನಡೆದ ಘಟನೆಯ ವಿವರ. ಇತರರೂ ಈ ಬಗ್ಗೆ ಬರೆದಿದ್ದಾರೆ. ಸೆರೆಮನೆಯ ಈ ಎಲ್ಲ ಅನುಭವಗಳ ಸಂಚಿತ ಪರಿಣಾಮ, ಸ್ಕಾಟ್ಲೆಂಡ್‌ಯಾರ್ಡ್‌ನ ಘಟನೆಯ ನಂತರ ಆಘಾತಕಾರಿಯಾಯಿತೆನ್ನಬಹುದು.

-೨-

ಸಿ.ಆರ್. ಕೃಷ್ಣರಾವ್ ಅವರು ಆರ್.ಎಸ್.ಎನ್. ಅವರ ಎಡಪಂಥೀಯ ವ್ಯಕ್ತಿಗಳ, ಪಾರ್ಟಿ ಸಂಪರ್ಕದ ಬಗ್ಗೆ ಹೇಳಿದ್ದಾರೆ. ಜೊತೆಗೆ ಅವರ ಮುಗ್ಧತೆ, ಔದಾರ್ಯವನ್ನು, ಕಾಳಜಿಯನ್ನು ಹೇಳಿದ್ದಾರೆ. ಕಿರಿಯ ಮಿತ್ರ ಗೋಪಾಲಕೃಷ್ಣರಾವ್ ಅವರಿಗೆ, ಅಧ್ಯಾಪಕರಾದಾಗ, ತಾವೇ ಬಟ್ಟೆ ಆಯ್ಕೆ ಮಾಡಿ ಸೂಟ್ ಹೊಲಿಸಿದ ಪ್ರಸಂಗ. ಸೋಮಶೇಖರರಾವ್ ಅಂಗುಲಿಮಾಲ ನಾಟಕವಾಡಿದಾಗ ನಾಯ್ಡು ಅವರನ್ನು ಆಹ್ವಾನಿಸಿದರು. ಅವರು ಬಂದು ನೋಡಿ ಮೆಚ್ಚಿದ್ದನ್ನು ನೆನಪಿಸಿಕೊಳ್ಳುತ್ತಾರೆ. ಟ್ಯಾಕ್ಸಿ ಬೇಡ ಟಾಂಗ ಸಾಕು ಎಂದಿದ್ದ ನಾಯ್ಡು ಅವರನ್ನು ಕರೆತರಲು ಸೋಮಶೇಖರರೇ ಹೋದಾಗ ಸಿದ್ಧವಾಗಿ ನಿಂತಿದ್ದರು. ರಷ್ಯ ಮಾದರಿಯ ಉದ್ದನೆಯ ನಿಲುವಂಗಿ, ಅದಕ್ಕೆ ಹಲವು ಜೇಬುಗಳು, ಕೈಯಲ್ಲಿ ಒಂದು ಸ್ಟಿಕ್. ಬಂದು ನಾಟಕ ನೋಡಿ, ಕೆಲವು ದೃಶ್ಯಗಳಾದ ಮೇಲೆ, ರಂಗದ ಹಿಂಭಾಗಕ್ಕೆ ಬಂದು "I am going. You are a good actor" ಎಂದು, ಅಲ್ಲಿ ಆರೋಗ್ಯ ಕೆಟ್ಟಾಗ ಸುಧಾರಿಸಿಕೊಂಡ ನಂತರ ಒಬ್ಬರನ್ನು ಜೊತೆಮಾಡಿ ಕಳಿಸಿದರಂತೆ. good actor ಎಂದ ನಾಯ್ಡು ಅವರೆ ಒಳ್ಳೆಯ ನಟ, ಮಾತುಕತೆಯಲ್ಲೆ ಅಬಿನಯವಿರುತ್ತಿತ್ತು ಎನ್ನುತ್ತಾರೆ ಸೋಮಶೇಖರ್. ಸಿ.ಆರ್.ಕೆ. ಅವರು ನಾಯ್ಡು ಸದಾ ಖಾದಿ ಜುಬ್ಬ, ಪಾಯಜಾಮ ಧರಿಸುತ್ತಿದ್ದರು. ಅದು ಶುಭ್ರವಾಗಿರುತ್ತಿತ್ತು ಎಂದಿದ್ದಾರೆ. ಮೈಸೂರು ಮನೆಯಲ್ಲಿದ್ದಾಗಿನ ಉಡುಪು ಖಾದಿ ಅರ್ಧತೋಳಿನ ಒಳಬನಿಯನ್, ನಿಕ್ಕರ್ ಎಂದು ಸೋಮಶೇಖರ್ ವಿವರಿಸಿದ್ದಾರೆ. ಮಾತುಕತೆಯ ಸಂದರ್ಭದ ಗೆಶ್ಚರ್ಸ್ ಬಗ್ಗೆ ಗಮನ ಸೆಳೆದಾಗ ಅವರು ಹೇಳುತ್ತಿದ್ದುದು: "If I am not able to make use of my own body language, I am not an artist." ನಟರು ಶಿಲ್ಪಿಗಳ ಬಗೆಗೆ ಒಂದು ಒಳನೋಟ ಇಲ್ಲಿದೆ. ಫ್ರೆಂಚ್ ಶಿಲ್ಪಿ ರೊಡಿನ್ ಕೈ, ಕಣ್ಣು, ತುಟಿಗಳನ್ನು ಅಭಿವ್ಯಕ್ತಿಗೆ ಬಳಸಿಕೊಂಡ ಬಗೆ ನೆನಪಾಗುತ್ತದೆ.

"I had a rich Bohemian life" ಎಂದು ಒಮ್ಮೆ ಸೋಮಶೇಖರ್‌ಗೆ ಆರ್.ಎಸ್.ಎನ್. ಹೇಳಿದರಂತೆ ಮುಕ್ತ, ಸ್ವತಂತ್ರ ಸ್ವಇಚ್ಛಾನುಸಾರಿಯಾದ ಬದುಕು, ಕಟ್ಟುಪಾಡುಗಳಿಗೆ ಒಳಗಾಗದ ಬದುಕು. ಅವರ ಮನೆ (ಮೈಸೂರಿನ ಕೆಸರೆ ಅಥವಾ ರಾಜೇಂದ್ರ ನಗರದ ಬಳಿಯದು)ಯ ಬಗ್ಗೆ ಎಲ್ಲಾ ಅಸ್ತವ್ಯಸ್ತ ಎಂದು ಸೋಮಶೇಖರ್ ಅನುಭವವಾದರೆ, ಸಿ.ಆರ್.ಕೆ. ಅವರದು ಶಿಸ್ತಿನ ಬದುಕು ಎನ್ನುತ್ತಾರೆ. ಬೆಂಗಳೂರು ಮಾತ್ರವಲ್ಲ ಮೈಸೂರಿಗೆ ಆಗಾಗ್ಗೆ ಹೋದಾಗ ಕಂಡಿದ್ದು ಎಂಬ ಅಭಿಪ್ರಾಯ ಇವರದು.

ಬೊಹೀಮಿಯನ್ ಬದುಕು ಎಂದಾಗ ಕೈಲಾಸಂ ನೆನಪಾಗುತ್ತಾರೆ. ಆರ್.ಎಸ್.ಎನ್. ಮತ್ತು ಕೈಲಾಸಂ ಅವರಲ್ಲಿ ಹೋಲಿಕೆಯನ್ನು ಕೆಲವರು ಕಾಣುತ್ತಾರೆ. ಆದರೆ ಇದು ಎಷ್ಟು ಸರಿ ಹೇಳುವಂತಿಲ್ಲ. ನಾಯ್ಡು, ಕೈಲಾಸಂ, ಸಂಪದ್ಗಿರಿರಾವ್ ಬೆಂಗಳೂರಿನಲ್ಲಿದ್ದಾಗ ದಿನನಿತ್ಯ ವಾಕಿಂಗ್ ಹೋಗುತ್ತಿದ್ದರು. "ನೆನಪು ಇರೋ ಹಾಗೆ, ನಾವು ಲಾಂಗ್ ವಾಕ್ಸ್ ಹೋಗುತ್ತಿದ್ದೆವು. ಮನಸ್ಸಿಗೆ ಬಂದಂತೆ ಬೀದಿ ಬೀದಿ ತಿರುಗೋದೇ ನಮ್ಮ ವಾಕ್. Starting from White House (ಕೈಲಾಸಂ ಮನೆ), ಚಾಮರಾಜಪೇಟೆ, within minutes we would come to blows. ನಮ್ಮಿಬ್ಬರ ideas match ಆಗುತ್ತಿರಲಿಲ್ಲ." ಹೀಗೆ ಬೌದ್ಧಿಕ ಮಟ್ಟದಲ್ಲಿ ಆಗುತ್ತಿದ್ದ ಚರ್ಚೆ ಜಗಳದಲ್ಲಿ ಮುಕ್ತಾಯವಾಗುತ್ತಿತ್ತು. ನಾಯ್ಡು ಅವರ ದೃಷ್ಟಿಯಲ್ಲಿ ಮಾನವತಾವಾದಿಯಾಗುವುದರಿಂದ ಯಾವ ಉದ್ದೇಶವೂ ಸಾಧಿತವಾಗುವುದಿಲ್ಲ ಎಂಬುದೇ ಆಗಿತ್ತು. ಇದು ವಿಚಿತ್ರ. ಸ್ವತಃ ನಾಯ್ಡು ಅವರಲ್ಲೆ ಮಾನವೀಯ ಮೌಲ್ಯಗಳ ಬಗ್ಗೆ ಗೌರವವಿತ್ತು. ಎಡಪಂಥೀಯರಾಗಿದ್ದರೂ, ಮುಷ್ಕರ ಮೊದಲಾದುವುಗಳಿಂದ ಜನರಿಗೆ ತೊಂದರೆ ಎಂಬ ಭಾವನೆಯಿತ್ತು. ಕೈಲಾಸಂ ಅವರ ಶಿಲ್ಪ ಮಾಡಿದ್ದಾರೆ. ಸ್ಕೆಚ್ ಮಾಡಿದ್ದಾರೆ. ಸ್ಕೆಚ್‌ನ ಒಂದು ಭಾಗದಲ್ಲಿ a great monkey ಎಂದು ಬರೆದಿದ್ದರೂ ಅಡ್ಡಗೆರೆ ಹಾಕಿ ಪಕ್ಕದಲ್ಲಿ great humanist ಎಂದು ಬರೆದಿದ್ದಾರೆ. ನಾಯ್ಡು ಅವರಿಗೆ ಕೈಲಾಸಂ ತಮ್ಮ ನಾಟಕಗಳಲ್ಲಿ messages ಅಭಿವ್ಯಕ್ತಿಗೊಳಿಸಬೇಕು ಎಂದಿತ್ತು. "According to me what he has given through his plays are not messages" ಬಹುಶಃ ಅವರಿಗೆ ಫಿಲಾಸಫಿಕಲ್ ಆಗಿದ್ದಿರಬೇಕು ಎಂಬ ದೃಷ್ಟಿ ಇತ್ತೋ ಏನೋ. ಒಮ್ಮೆ ಕೈಲಾಸಂ, ಬಹುಶಃ ಹೊಟೇಲೊಂದರಲ್ಲಿ ಇದ್ದಿರಬಹುದು, ಸಿಗರೇಟ್ ಸೇದಿ ತುಂಡನ್ನು ಕೆಳಗಿನ ಕಾರ್ಪೆಟ್‌ಗೆ ಹೊಸಕಿದಾಗ ನಾಯ್ಡು ಅವರಿಗೆ ಅಸಾಧ್ಯ ಸಿಟ್ಟು ಬಂದಿತಂತೆ. ಎಂತಹ ಸುಂದರ ಕಾರ್ಪೆಟ್ ಹಾಳುಮಾಡಿದೆ. ಅದರ ಬಗ್ಗೆ ಕಾಳಜಿ ಇಲ್ಲ. "You are insulting the craftsman, who has spent his life on it. You call yourself an artist, and a humanist" ಎಂದು ಕೋಪ.

ಆರ್.ಎಸ್.ಎನ್. ಅವರಿಗೆ ಕಲೆಯೆ ಬದುಕು, ಚೈತನ್ಯ, ಸರ್ವಸ್ವ. ಅದು ಅವರಿಗೆ ಮಾರಾಟದ ವಸ್ತುವಲ್ಲ. ತಾವು ರಚಿಸಿದ ಚಿತ್ರ, ಶಿಲ್ಪಗಳನ್ನು ಸ್ನೇಹಿತರಿಗೆ ಕೊಟ್ಟಿದ್ದಾರೆ. ಕಲೆಗೆ ಬೆಲೆ ಕಟ್ಟಿದವರ ಬಗ್ಗೆ ಅಸಾಧ್ಯ ಸಿಟ್ಟು. ಸಿಟ್ಟಿನಲ್ಲಿ ಶಿಲ್ಪಗಳನ್ನು ಒಡೆದು ಪುಡಿಮಾಡಿದ್ದುಂಟು. ಸೋಮಶೇಖರರಾವ್ ತಮಗಾದ ಮೊದಲ ಅನುಭವ ಆ ಬಗೆಯದೇ ಎನ್ನುತ್ತಾರೆ. ಆರ್.ಎಸ್.ಎನ್. ಮನೆಯಲ್ಲಿ, ಚಿತ್ರಶಿಲ್ಪ ನೋಡುತ್ತಿದ್ದಾಗ, ಒಂದು ಶಿಲ್ಪ ನೋಡಿ, ಜೊತೆಯಲ್ಲಿದ್ದ ರೂಪರಾಜ್‌ರನ್ನು (ಆರ್.ಎಸ್.ಎನ್. ಪರಿಚಯವಾದದ್ದು ಇವರ ಮೂಲಕವೇ) ಇದು ಯಾರದು ಎಂದರಂತೆ. ಅಷ್ಟರಲ್ಲಿ ಅಲ್ಲಿಗೆ ಬಂದ ನಾಯ್ಡು ಅವರು "What is that? can't you make out who it is?" ಎಂದರಂತೆ. "No" ಎಂದಾಗ, ಆ ಶಿಲ್ಪವನ್ನು ಅನಾಮತ್ತು ಎತ್ತಿ ಪಟಾರ್ ಎಂದು ನೆಲಕ್ಕೆ ಒಗೆದರಂತೆ. "I am very sorry" ಎಂದಾಗ, "Sorry for what? sorry for my work?" ಸೋಮಶೇಖರ್ ಈಗ ನೆನಪು ಮಾಡಿಕೊಳ್ಳುತ್ತಾರೆ, ಬಹುಶಃ ಅದು ಗಾರ್ಕಿಯ ಶಿಲ್ಪ ಇರಬೇಕು. ಆಗ ನನಗೆ ಗಾರ್ಕಿಯ ಫೋಟೊ ನೋಡಿ ಪರಿಚಯವಿರಲಿಲ್ಲ ಎನ್ನುತ್ತಾರೆ. ಸುಪ್ರಸಿದ್ಧ ವ್ಯಕ್ತಿಗಳ ಫೋಟೊ ನೋಡಿ ಪರಿಚಯವಿರುತ್ತೆ. ಹಾಗೆ ನೋಡಿಲ್ಲದಾಗ ಅವರು ನೋಡುಗರ ಪಾಲಿಗೆ ಅನಾಮಿಕರೆ, ಅಪರಿಚಿತರೆ, ನಾಯ್ಡು ಅವರ ಶಿಲ್ಪಗಳಲ್ಲಿ ಒಂದು ವಿಶಿಷ್ಟ ಗುಣ ರಿಸೆಂಬ್ಲೆನ್ಸ್‌ನದು. ಶೈಲಿ ಇತ್ಯಾದಿ ಇದ್ದೂ ಸಾದೃಶ್ಯವಿಲ್ಲದಿರುತ್ತಿರಲಿಲ್ಲ. ಅದು ಗೊತ್ತಾಗದಿದ್ದ ಮೇಲೆ ಶಿಲ್ಪ ಮಾಡಿ ಪ್ರಯೋಜನವಿಲ್ಲ ಎನಿಸಿರಬೇಕು, "I have failed as an artist" ಎಂದರಂತೆ.

ಸಿಟ್ಟಿನ ಇನ್ನೊಂದು ಪ್ರಸಂಗ. ಅವರ ಅತ್ತಿಗೆಯವರಿಗೆ ಬುದ್ಧನ ಒಂದು ಪ್ಲಾಸ್ಟರ್ ಆಫ್ ಪ್ಯಾರಿಸ್ ಶಿಲ್ಪವನ್ನು ಅರ್ಪಿಸಿದರು. ಅತ್ತಿಗೆಯವರು ಅದನ್ನು ನೋಡಿ ತುಂಬ ಸಂತೋಷಪಟ್ಟು–ಮುಗ್ಧವಾಗಿ– "ಬಹಳ ಚೆನ್ನಾಗಿದೆಯಪ್ಪ, ಇದರ ಬೆಲೆ ಎಷ್ಟು?" ಎಂದರು. "ಇದರ ಬೆಲೆ ಎಷ್ಟು ಎಂದು ವ್ಯಾಪಾರೀ ದೃಷ್ಟಿಯಿಂದ ನೋಡುತ್ತೀರಾ, ಕ್ರಯ ನಿರ್ಣಯ ಮಾಡುತ್ತೀರಾ, ಕೊಡಿ" ಎಂದು, ಶಿಲ್ಪ ತೆಗೆದುಕೊಂಡು ಕ್ಷಣಾರ್ಧದಲ್ಲಿ ನೆಲಕ್ಕೆ ಅಪ್ಪಳಿಸಿ ಚೂರುಚೂರು ಮಾಡಿದರು. ಆಗ ಅತ್ತಿಗೆ ಹೇಳಿದ ಮಾತು–"ನನಗೆ ಗೊತ್ತಿತ್ತು ಇವನ ಸ್ವಭಾವ. ಅದು ಗೊತ್ತಿದ್ದು ಈ ತರಾ ಮಾಡಿಬಿಟ್ಟೆ. ಹೀಗೆ ಆಗದ ಹಾಗೆ ನೋಡಿಕೊಳ್ಳೋಕೆ ನನಗೆ ಆಗಲಿಲ್ಲ" ಎಂದು ದುಃಖಪಟ್ಟರು. ಸ್ವತಃ ನಾಯ್ಡು ಅವರೇ ಹೇಳಿದ ಬಹುಶಃ ಹಾಗೆ ಮಾಡಬಾರದಿತ್ತು ಎಂಬ ಮರುಚಿಂತನೆಯಿಂದಲೇನೋ ಎಂಬಂತೆ ನುಡಿದ ಮಾತನ್ನು ಸೋಮಶೇಖರ್ ಮತ್ತು ಇತರರೂ ದಾಖಲಿಸಿದ್ದಾರೆ.

ಆರ್.ಎಸ್.ಎನ್. ನೆನಪಿನೊಂದಿಗೆ ಕೈಲಾಸರಂತೆ ಕನ್ನಡದ ಪ್ರಸಿದ್ಧ ಇನ್ನೊಬ್ಬ ನಾಟಕಕಾರ ಸಂಸ ಅವರೂ ನೆನಪಾಗುತ್ತಾರೆ. ಸಂಸ ಅವರಿಗೂ ಬೇಹುಗಾರರ 'ಭೂತ' ಕಾಡುತ್ತಿತ್ತು. ಆದ್ದರಿಂದ ಅವರು ಎಲ್ಲರನ್ನು ಸಂಶಯ ದೃಷ್ಟಿಯಿಂದ ಕಾಣುತ್ತಿದ್ದರು. ಜನವಿದೂರವಾಗಿಯೇ ಇರುತ್ತಿದ್ದರು. ಆದರೆ ಆರ್.ಎಸ್.ಎನ್. ಅವರಿಗಿಂತ ಭಿನ್ನ. my brain, my brain ಎಂದು ಹಣೆ ಚಚ್ಚಿಕೊಳ್ಳುತ್ತಿದ್ದರೂ. ಅದೊಂದು ಅನಿಷ್ಟ ಬೆನ್ನು ಹತ್ತಿದೆ ಎಂಬಂತೆ ವರ್ತಿಸಿದರೂ ಸ್ನೇಹಪರರು. ಪ್ರಸಿದ್ಧ ವ್ಯಕ್ತಿಗಳಂತೆ ಕಿರಿಯ ವಯಸ್ಸಿನವರಲ್ಲೂ ಅತೀವ ಸ್ನೇಹಪರತೆ. ಕಿರಿಯ ಕ.ರಾ.ಕೃ. ಬಗ್ಗೆ ಆತ್ಮೀಯರಾಗೇ ಇದ್ದರು.

ಹಲವು ಬಾರಿ ಹೀಗೆ ತಲೆ ಹಿಡಿದು ಗೊಣಗುತ್ತಾ ಒರಗಿಕೊಳ್ಳುವುದನ್ನು ಗಮನಿಸಿ ಒಮ್ಮೆ ಸೋಮಶೇಖರ್ "Do you get into meditation when your brain is being bashed" ಎಂದು ಅವರೆ ಬಳಸುತ್ತಿದ್ದ ಶಬ್ದ ಬಳಸಿ ಕೇಳಿದಾಗ, meditation ಎಂದು ವಿಚಿತ್ರವಾಗಿ ನಕ್ಕು ನಿಮಗೆ ಅರ್ಥವಾಗುವುದು ಕಷ್ಟ ಎನ್ನುತ್ತಿದ್ದರಂತೆ. ಒಮ್ಮೆ "please believe me, when I say I often go to samadhi" ಎಂದಾಗ, meditation, ಸಮಾಧಿ ಎಂದರೇನು ಎಂಬ ಪ್ರಶ್ನೆಗೆ – "ನನ್ನ ದೃಷ್ಟಿಯಲ್ಲಿ ಸಮಾಧಿ ಎಂದರೆ ವ್ಯಕ್ತಿಗೆ ತನ್ನ ಕೆಲಸದಲ್ಲಿ ಇರಬೇಕಾದ ಉಗ್ರಬದ್ಧತೆ, most committed. ಧ್ಯಾನ ಸ್ಥಿತಿಯಲ್ಲಿ ನಾನಿದ್ದು, ನಾನು ಹಿಡಿದ ಕೆಲಸ, ಕೃತಿಗೆ ನನ್ನ ಎಲ್ಲವನ್ನು ತುಂಬುವಂತಹುದು. I call it as samadhi" ಎಂದರು. ಕಲಾವಿದರು, ಕವಿಗಳ ಬಗ್ಗೆ ಏಕಾಗ್ರತೆ ಎನ್ನುತ್ತೇವೆ. ಕೆ.ವೆಂಕಟಪ್ಪನವರೂ ಹೀಗೆ ಹೇಳುತ್ತಿದ್ದರಲ್ಲವೆ. ಮೈಸೂರಿನ ಬಿ. ಬಸವಯ್ಯನವರೂ ಹೀಗೆ, ಒಮ್ಮೊಮ್ಮೆ ಎದುರಿಗಿನ ಇನ್ನೂ ಮಾಡುತ್ತಿರುವ ಶಿಲ್ಪವನ್ನೇ ನೋಡುತ್ತ ಮೈಮರೆತು ಹೋಗುತ್ತಿದ್ದರು.

ಇದನ್ನು ಮುಂದುವರಿಸಿ ಹೇಳುವುದಾದರೆ, empathy ಎಂಬುದು, ನಮ್ಮ ಭಾರತೀಯ ಕಾವ್ಯಮೀಮಾಂಸೆಯಲ್ಲಿ, ಹೇಳುವ ತಾದಾತ್ಮ್ಯ ಕವಿ–ಸಹೃದಯ ಇಬ್ಬರಲ್ಲೂ ಇರಬೇಕು ಎಂಬುದು ನೆನಪಾಗುತ್ತದೆ. ಆರ್.ಎಸ್.ಎನ್. ಅವರು ತುಂಬ ಓದುತ್ತಿದ್ದರು. ಮನೆಯಲ್ಲಿ ಕಲಾ ಸಂಬಂಧಿತ ಪರಿಕರ ಮಾತ್ರವಲ್ಲ, ಪುಸ್ತಕಗಳ ರಾಶಿ ಇದ್ದಿತೆಂದು ಸೋಮಶೇಖರ್ ಹೇಳುತ್ತಾರೆ. ನಾಯ್ಡು ಅವರು ಇಂಗ್ಲಿಷ್ ಕಾವ್ಯದ ಸಾಲುಗಳನ್ನು, ಗ್ರೇ ಕೀಟ್ಸ್ ವರ್ಡ್ಸ್‌ವರ್ತ್ ಮೊದಲಾದವರದು ಹಾಗೇ ಷೇಕ್ಸ್‌ಪಿಯರನ ನಾಟಕಗಳ ಸಾಲುಗಳನ್ನು–ನೆನಪಿನಿಂದ ಹೇಳುತ್ತಿದ್ದರು. ಅವರಿಗೆ ವಿಲ್‌ಡುರಾಂಟ್‌ನ ಸ್ಟೋರಿ ಆಫ್ ಸಿವಿಲಿಜೇಷನ್ ಮೆಚ್ಚಿನ ಗ್ರಂಥವಾಗಿತ್ತು. ವಿಲ್ ಡುರಾಂಟ್ ಭಾರತೀಯರ ಬಗ್ಗೆ ಬರೆಯುವಾಗ ಭಾರತೀಯನಾಗುತ್ತಾನೆ, ಭಾರತೀಯ ತತ್ತ್ವಗಳ ಚರ್ಚೆಯಲ್ಲಿ, ಹಾಗೇ ಚೀನಾದ ತತ್ತ್ವಶಾಸ್ತ್ರಗಳು ಚಿಂತನೆಗಳನ್ನು ವಿವರಿಸುವಾಗ ಚೀನೀಯನೇ ಆಗುತ್ತಾನೆ ಎನ್ನುತ್ತಿದ್ದರು. ತುಂಬ ಮೆಚ್ಚುಕೆಯಿಂದ Empathy with culture ಎಂದು ನಾವು ಹೇಳಬಹುದೇನೊ. ಕಲಾವಿದ ಶಿಲ್ಪಿಗಳಿಗೂ ಈ ಗುಣ, ಈ ಸಾಮರ್ಥ್ಯ, ಇಂತಹ ಪ್ರತಿಭೆ ಅಗತ್ಯ ಎಂಬುದು ನಾಯ್ಡು ಅವರ ಇಂಗಿತ ಇರಬಹುದು.

ಆರ್.ಎಸ್.ಎನ್. ತಮ್ಮ ೨೨ನೇ ವಯಸ್ಸಿನ ನೆನಪುಗಳನ್ನು ಆಗಾಗ್ಗೆ ಹೇಳುತ್ತಿದ್ದರೆನ್ನುತ್ತಾರೆ ಸೋಮಶೇಖರ್. ಮುಂಬೈನಲ್ಲಿ ಭೂಗತ ಹೋರಾಟಗಾರರ ಸಂಪರ್ಕವಿತ್ತು. ಮುದ್ರಿತ ಪತ್ರಿಕೆಗಳನ್ನು ಹಂಚುವ ಕೆಲಸ ಮಾಡುತ್ತಿದ್ದೆ ಎಂದಿದ್ದಾರೆ. ಆಗಲೇ ಅಶೋಕ ಮೆಹತಾ ಅವರು ನಡೆಸುತ್ತಿದ್ದ ಪತ್ರಿಕೆಗೆ ಸಹಾಯಕರಾಗಿ ಪಠ್ಯ ಸಂಪಾದನಾ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಹೀಗಾಗಿ ತಮ್ಮನ್ನು ನಾನೂ ಒಂದು ರೀತಿಯಲ್ಲಿ ಪತ್ರಕರ್ತನಾಗಿದ್ದೆ ಎನ್ನುತ್ತಿದ್ದರಂತೆ. ಜಯಪ್ರಕಾಶ್ ನಾರಾಯಣ್ ಅವರು ಲೇಖನಗಳನ್ನು ಬರೆದಾಗ ಏನೆಲ್ಲ ವಿಷಯಗಳೂ ಬಂದು ಹೋಗುತ್ತಿದ್ದುವು. ಕೆಲವೊಮ್ಮೆ ವಿಷಯದಿಂದ ಎತ್ತೆತ್ತಲೊ ಹೋಗುವುದನ್ನು ಗಮನಿಸಿ. ಟೆಕ್ಸ್ಟ್ ಎಡಿಟರ್ ಆದ ಇವರಿಗೆ ಪೇಚು ಉಂಟಾಗುತ್ತಿತ್ತು. ಪತ್ರಿಕೆಗೆ ಬರೆದಾಗ ವಿಷಯ ಬಿಟ್ಟುಹೋಗಬಾರದೆಂದು ಕಾಗದ ಬರೆದು ತಿಳಿಸಿದರಂತೆ. ಅದಕ್ಕೆ ಜೆ.ಪಿ.ಯವರು ಮೆಹತಾ ಅವರೊಡನೆ "Who is this Naidu who wrote this letter to me" ಎಂದು ಕೇಳಿದರಂತೆ. ಇದೂ ಆ ಇಬ್ಬರ ಸಂಬಂಧ ಬೆಳೆಯಲು ಕಾರಣವಾಯಿತು.

ಇಂಗ್ಲೆಂಡಿನಿಂದ ಹಿಂದುರಿಗಿದ್ದ ಪೊತಾನ್ ಜೋಸೆಫ್ ಅವರು ಮುಂಬಯಿಯಲ್ಲಿ ಕೆಲ ಕಾಲ ಇದ್ದರು. ಆಗಿನ್ನೂ ಅವರಿಗೆ ಯಾವುದೇ ಕೆಲಸವಿರಲಿಲ್ಲ. ಅವರು ಬೆಂಗಳೂರಿಗೆ ಬಂದ ಮೇಲೆ ಡೆಕನ್ ಹೆರಾಲ್ಡ್‌ಗೆ ಸೇರಿದ್ದು. ಮುಂಬಯಿಯಲ್ಲಿದ್ದಾಗ ನಾಯ್ಡು ಜೋಸೆಫ್‌ರಿಗೆ ಕವನ ಬರೆಯಲು ಸೂಚಿಸಿದರು. ಕೆಲವು ಕವನ ಬರೆದ ನಂತರ ಇದು ನನ್ನಿಂದ ಸಾಧ್ಯವಿಲ್ಲ ಎಂದು ಕೈಚೆಲ್ಲಿದರು. ಆಗ ಅವರಿಗೆ ಲೇಖನಗಳನ್ನು ಬರೆಯಲು ಸಂಪಾದಕೀಯ ಬರೆಯಲು ಹೇಳಿ, ಅಭ್ಯಾಸಮಾಡಿಸಿದರಂತೆ. ಪೊತಾನ್ ಜೋಸೆಫ್ ಮುಂದೆ ಪ್ರಸಿದ್ಧ ಪತ್ರಕರ್ತರಾದುದು ತಿಳಿದ ವಿಷಯ.

ನಾಯ್ಡು ಅವರನ್ನು ವಿಕ್ಷಿಪ್ತ ವ್ಯಕ್ತಿತ್ವದವರು, ವಿಚಿತ್ರ ಎಂದೆಲ್ಲ ಹೇಳಿದರೂ ಈ ವ್ಯಕ್ತಿಗೆ ಮಕ್ಕಳನ್ನು ಕಂಡರೆ ಬಹಳ ಇಷ್ಟ. ಮೈಸೂರು ಮನೆಯ ನೆರೆಹೊರೆಯ ಮಕ್ಕಳು ಇವರಿಗೆ ಬಿಡ್ಡ. ಸಣ್ಣ ಪುಟ್ಟ ಸಹಾಯ ಮಾಡುತ್ತಿದ್ದರು. ಅವರು ನಿಧನರಾದಾಗ ಆಗ್ಗೆ ದೊಡ್ಡವರಾಗಿದ್ದ ಆ ಬಿಡ್ಡಗಳೂ ಅಲ್ಲಿ ಬಂದು ಕಣ್ಣಲ್ಲಿ ನೀರು ತುಂಬಿಕೊಂಡಿದ್ದನ್ನು ಪಿ.ಆರ್.ತಿಪ್ಪೇಸ್ವಾಮಿ ಹೇಳಿದ್ದಾರೆ. ರಸ್ತೆಯಲ್ಲಿ ಹೋಗುತ್ತಿದ್ದರೂ ಮಕ್ಕಳನ್ನು ನಿಲ್ಲಿಸಿ, ಇಂಗ್ಲಿಷಿನಲ್ಲೊ ತೆಲುಗು ಕನ್ನಡದಲ್ಲೊ ಮಾತನಾಡಿ ಕಳಿಸುತ್ತಿದ್ದರು. ನಿಸರ್ಗದಲ್ಲಿ ಮತ್ತು ಜೀವನದಲ್ಲಿ ಸೌಂದರ್ಯವನ್ನು ಮೆಚ್ಚುತ್ತಿದ್ದ ವ್ಯಕ್ತಿಗೆ, ದಾರಿಯಲ್ಲಿ ಗಾಡಿಯಲ್ಲಿ ಹಣ್ಣು ಮಾರುವ ವ್ಯಕ್ತಿ, ಹಣ್ಣನ್ನು ಜೋಡಿಸಿರುವ ಬಗೆ, ಹಣ್ಣುಗಳ ಬಣ್ಣ ಎಲ್ಲ ಆಕರ್ಷಕ, ಸುಂದರ ಎನಿಸುತ್ತಿತ್ತು. "See these colours. Orange. God has created colours, we only imitate, and it should be pleasant".

–೩–

ಆರ್.ಎಸ್.ನಾಯ್ಡು ಅವರು ರೇಖಾಚಿತ್ರಕಾರರೆಂದೇ ಪ್ರಸಿದ್ಧರು. ಎಲ್ಲರ ಮನಸ್ಸಿನಲ್ಲೂ ಅವರದೇ ಆದ ವಿಶಿಷ್ಟ ಶೈಲಿಯ, ಆರ್.ಎಸ್.ಎನ್. ಛಾಪಿನ, ತಟಕ್ಕನೆ ಗುರುತಿಸಬಹುದಾದ ಚಿತ್ರಗಳು ನೆನಪಿಗೆ ಬರುತ್ತವೆ. ಅವರು ಮುಂಬಯಿಯಲ್ಲಿದ್ದಾಗಲೇ ಯುವಜನ ಸಂಸ್ಥೆ ಕಟ್ಟಿದರು. ಆಗಲೇ ಅವರಿಗೆ ಮುಲ್ಕ್‌ರಾಜ್ ಆನಂದ್ ಪರಿಚಯವಾದದು. ಅಶೋಕ ಮೆಹತಾ, ಮೀನೂ ಮಸಾನಿ, ಮೆಹರಾಲಿ ಮೊದಲಾದವರ ಜೊತೆ ಸಮಾಜವಾದಿ ಪಕ್ಷ ಸಂಘಟನಾ ಕಾರ್ಯ. Pictorial Economics ವಾರಪತ್ರಿಕೆಗೆ ಇವರದೇ ವ್ಯಂಗ್ಯಚಿತ್ರಗಳು. ಎಡಪಂಥೀಯ ಬಲವಿದ್ದ ಇವರಿಗೆ ನ್ಯಾಷನಲ್ ಫ್ರಂಟ್, ಪೀಪಲ್ಸ್ ವಾರ್ ಪತ್ರಿಕೆಗಳಿಗೆ ವ್ಯಂಗ್ಯಚಿತ್ರ ಬರೆಯುವ ಜವಾಬ್ದಾರಿ. ಆ ಕಾಲದಲ್ಲೆ ಇವರ ಚಿತ್ರಗಳು ಲಂಡನ್ನಿನ ಮ್ಯಾಂಚೆಸ್ಟರ್ ಗಾರ್ಡಿಯನ್‌ನಲ್ಲೂ ಪ್ರಕಟವಾಗುತ್ತಿದ್ದುವು.

ಕಲೆ ಅವರಿಗೆ ಜೀವ, ಒಂದು ಬಗೆಯಲ್ಲಿ ಗೀಳು, ಅಬ್ಸೆಷನ್. ಬಹುಶಃ ಅವರನ್ನು ಉಳಿಸಿದ್ದೂ ಅದೆ. ಕಲೆಯನ್ನು ಅವರು ಕಲಿಯಲಿಲ್ಲ ಅದು ತಾನಾಗಿ ಬಂದದ್ದು. ಸ್ವಭಾವಸಿದ್ಧ ಪ್ರತಿಭೆ ಅವರದು. ಅಪೂರ್ವ ಬುದ್ಧಿಶಕ್ತಿ, ತಿಳಿವಳಿಕೆ ಓದು ಅಧ್ಯಯನಗಳಿಂದ ಪಡೆದ ಜ್ಞಾನ. ಜೊತೆಗೆ ಹಲವು ಬಗೆಯ ಜೀವನಾನುಭವ. ಅವರಿಗೆ ಒದಗಿದ ಉಂಟಾದ ಒತ್ತಡಗಳೂ ಆವೇಶ ಉದ್ರೇಕಗಳೂ ಕಲಾಸೃಷ್ಟಿಗೆ ಕಾರಣವಾದುವು. ಆದರೂ ಕಲೆ ಅವರಿಗೆ ಒಂದು ಆಟದಂತೆ ಆಯಿತೇನೋ ಎಂದು ಒಮ್ಮೊಮ್ಮೆ ಎನಿಸುತ್ತದೆ. ಏಕೆಂದರೆ ವಾಣಿಜ್ಯ ದೃಷ್ಟಿಯಿಂದ ಎಂದೂ ಕಲಾರಚನೆ ಮಾಡಲಿಲ್ಲ.

ಕೆಲವು ವಿಮರ್ಶಕರಿಗೆ ಅವರ ಚಿತ್ರಗಳು ಗೀಚುಚಿತ್ರಗಳು. ರವೀಂದ್ರನಾಥರು ರಚಿಸಿದ ಗೀಚುಚಿತ್ರಗಳನ್ನು ಆಧುನಿಕ ಕಲೆ, ಎಕ್ಸ್‌ಪ್ರೆಷನಿಸಂ ಎಂದುದನ್ನು ಅವರೇ ಮರೆಯುತ್ತಾರೆ. ಈ ಡೂಡ್ಲಿಂಗ್ ಬಗ್ಗೆ ಎಸ್.ಕೆ. ರಾಮಚಂದ್ರರಾಯರು ಚೆನ್ನಾಗಿ ವಿವರಿಸಿದ್ದಾರೆ, ಹಿನ್ನೆಲೆ ತಿಳಿಸಿದ್ದಾರೆ. ಆದರೆ ನನಗೆ ಮೆಚ್ಚುಗೆಯಾದ ಕೆಲವು ಮಾತುಗಳನ್ನು ಆ ರಚನಾ ವಿಧಾನದ ವೈಶಿಷ್ಟ್ಯವನ್ನು ಇಲ್ಲಿ ಉದ್ಧರಿಸಬೇಕು. "ಆರೆಸ್ಸೆನ್ ಚಿತ್ರಗಳಲ್ಲಿ 'ಸ್ಥಿರ'ವೆಂಬ ವಿಷಯಕ್ಕಿಂತ 'ಚಲ'ವೆಂಬುದರ ಕಡೆಗೇ ಹೆಚ್ಚು ಗಮನ. ಓಟ, ಜಿಗಿತ, ಕುಣಿತ ಇಂಥವೆಂದರೆ ಅವರಿಗೆ ಅದೇನೋ ಒಲವು, ಹುರುಪು. ರೇಖೆಗಳು ನೇರಾಗಿ ಬರುವುದಕ್ಕಿಂತ ಸಲೀಸಾಗಿ ಹಾವಿನಂತೆ, ಹೊಳೆಯಂತೆ, ಅಲೆಯಲೆಯಾಗಿ ಬಳಸಿ ಮೇಲೇರಿ ಮಸೆದು ಬೀಸುತ್ತಾ ಇರುವುದೇ ಹೆಚ್ಚು. ಮನಸ್ಸಿನ ಕಾವು, ಕಲ್ಪನೆ, ದುಗಡ, ದುಮ್ಮಾನ, ಏರು ಬೀಳುಗಳೆಲ್ಲ ಗೆರೆಗಳಲ್ಲಿ ಮೂಡಿಕೊಳ್ಳುವುವು" ಈ ಮಾತುಗಳು ಆರ್.ಎಸ್.ಎನ್. ಹೊರತು ಮತ್ತಾವ ಕಲಾವಿದರಿಗೂ ಅನ್ವಯವಾಗಲಾರವು.

ಅವರ ಚಿತ್ರಗಳನ್ನು ಹಲವು ಗುಂಪಾಗಿ ವಿಂಗಡಿಸಲು ಸಾಧ್ಯ. ವ್ಯಕ್ತಿಚಿತ್ರಗಳು, ಅವುಗಳಲ್ಲೂ ವಿವಿಧ ಶೈಲಿ ವಿಧಾನಗಳು, ನೃತ್ಯ ಭಂಗಿಗಳು, ಜಾನಪದ ಜೀವನ ದೃಶ್ಯಗಳು, ಬಿ.ವಿ.ಕೆ. ಶಾಸ್ತ್ರಿಯವರು ವಿವರಿಸಿರುವ ಬ್ಯಾಲೆ ದೃಶ್ಯಗಳು ಇತ್ಯಾದಿ. ಅವರ ರೇಖಾಚಿತ್ರಗಳ ಕೆಲವೊಂದು ವಿಶೇಷ ಗುಣಾಂಶಗಳನ್ನು ಗುರುತಿಸಬಹುದು.

ಜೀವಂತಿಕೆ ಒಂದು ವಿಶಿಷ್ಟಗುಣ. ಎಂದರೆ ವಿಶೇಷವಾಗಿ Expressive quality ಹೊಂದಿರುವುವು. ಭಾವಸ್ಪಂದನ ಗುಣ ಎನ್ನಬಹುದು, ಇದು ಅಭಿವ್ಯಕ್ತಿ ಎಕ್ಸ್‌ಪ್ರೆಷನ್‌ಗಿಂತ ಬೇರೆಯಾದುದು. ಅವರ ಚಿತ್ರಗಳಲ್ಲಿ ಒಂದು ಬಗೆಯ vibration ಭಾವಕಂಪನ ಇರುತ್ತದೆ. ದಶಕಗಳು ಕಳೆದುಹೋಗಿವೆ. ಆದರೆ ಇಂದಿಗೂ ಆ ಚಿತ್ರಗಳನ್ನು ನಾನು ಮರೆಯಲಾರೆ.

ಶಾ. ಬಾಲೂರಾವ್ ಅವರು ಐವತ್ತರ ದಶಕದಲ್ಲಿ ಲೇಖಕ ಎಂಬ ಮಾಸಪತ್ರಿಕೆ ಪ್ರಕಟಿಸುತ್ತಿದ್ದರು. ಅದು ಸ್ವಲ್ಪಕಾಲದಲ್ಲೇ ನಿಂತುಹೋದರೂ ಎಲ್ಲರ ಮೇಲೂ ಪ್ರಭಾವ ಬೀರಿತ್ತು. ಪತ್ರಿಕೆಯ ಪೂರ್ಣ ಆರ್.ಎಸ್.ಎನ್. ರೇಖಾಚಿತ್ರಗಳು. ಕುಂಚದ ದಟ್ಟಗೆರೆಯ ಲವಲವಿಕೆಯ ಚಿತ್ರಗಳು. ಆಗ್ಗೆ ಪ್ರಗತಿಶೀಲ ಚಳವಳಿ ತೀವ್ರವಾಗಿತ್ತು. ಅನಕೃ ಲೇಖಕರನ್ನು ದಂತಗೋಪುರದಿಂದ ಇಳಿದು ಜನರ ನಡುವೆ ಬನ್ನಿ ಎಂದು ಸಾರಿದ್ದರು. ಲೇಖನಿ ಖಡ್ಗವಾಗಿ ಅನ್ಯಾಯದ ವಿರುದ್ಧ ಹೋರಾಡಿ ಎಂದು ಘೋಷಿಸಿದ್ದರು. ಆರ್.ಎಸ್.ಎನ್. ರಚಿಸಿದ ರೂಪಕ ಮಾದರಿ ಚಿತ್ರಗಳಲ್ಲಿ ಹೆಣ್ಣು, ಗಂಡು ವ್ಯಕ್ತಿಗಳ ಕೈಯಲ್ಲಿ ಲೇಖನಿ ಈಟಿಯಂತೆ ಯೋಧರ ಭಂಗಿಗಳಲ್ಲಿ ಮೂಡಿ ಬರುತ್ತಿದ್ದವು. ಇವು ಪೂರಕ ಚಿತ್ರಗಳಾದರೂ ಸ್ವತಂತ್ರ ಕಲ್ಪನೆಯ ರಚನೆಗಳು. ಸಾಂದರ್ಭಿಕ ಎನಿಸಿದರೂ ಚಳವಳಿ ಸಂದರ್ಭದ ಅನುಭವಗಳ, ಘರ್ಷಣೆಗಳ ಸ್ವತಂತ್ರ ರಚನೆಗಳೂ ಆಗಿರುತ್ತಿದ್ದುವು. ಇದೊಂದು ದೃಷ್ಟಾಂತ ಅಷ್ಟೇ. ಅವರ ಎಲ್ಲ ರಚನೆಗಳಲ್ಲಿ ಈ ಸ್ಪಂದನ ಗುಣ ಇರುತ್ತಿತ್ತು.

ಸಾದೃಶ್ಯ ಗುಣವನ್ನು ಅವರ ವ್ಯಕ್ತಿಚಿತ್ರಗಳಲ್ಲಿ ಗುರುತಿಸಬಹುದು. ಇದು ವಾಸ್ತವತಾ ಮಾದರಿಯ, ರಿಯಲಿಸ್ಟಿಕ್ ಬಗೆಯದಲ್ಲ. ಇವು ಕಲಾತ್ಮಕವಾದುವು, ಶೈಲೀಕೃತವಾದುವು, ಲಯ ಲಾಲಿತ್ಯ ಹರಿಯುವಂತಹವು. ಒಂದೊಂದು ವ್ಯಕ್ತಿಚಿತ್ರವೂ ಒಂದೊಂದು ಬಗೆಯ ರೇಖಾಲಯದಿಂದ ಕೂಡಿದುವು. ಷೇಕ್ಸ್‌ಪಿಯರನಿಗೆ ನಮಸ್ಕಾರಕ್ಕಾಗಿ ಬರೆದ ಷೇಕ್ಸ್‌ಪಿಯರನ ಚಿತ್ರ ಡೂಡ್ಲ್ ಸುರಳಿಸುರಳಿ ಗೆರೆಗಳ ಮಾದರಿಯದು. ಆದರೂ ಸಾದೃಶ್ಯ ಎದ್ದು ಕಾಣುತ್ತದೆ. ಮೋತಿಲಾಲ್ ನೆಹರು ಚಿತ್ರದಲ್ಲಿ ಬೆಳಕು ಛಾಯೆಗಳನ್ನು ಗೀಚುರೇಖೆಗಳಲ್ಲಿ ಮೂಡಿಸಿದ್ದಾರೆ. ಪೂರ್ಣ ಡೂಡ್ಲ್ ಅಲ್ಲ. ಕುಂಚದ ದಟ್ಟ ಎಳೆಗಳ ಲಯಬದ್ಧ ಬಳುಕುಗಳ ಸ್ವಯಂ ಚಿತ್ರ ಒಂದು ಬಗೆ. ಅತ್ಯಂತ ಕಡಿಮೆ ರೇಖೆಗಳ ದಪ್ಪ ಬಳುಕುವ ಕುಂಚರೇಖೆಗಳದು ಕುವೆಂಪು ಚಿತ್ರ. ಒಂದು ಚಿತ್ರ ಜವಹರಲಾಲ್ ನೆಹರೂ ಅವರದು ಡೂಡ್ಲ್ ಮಾದರಿಯದೆ. ಟಾಗೂರರ ಎದುರು ಮುಖ ನೋಟದ ಚಿತ್ರ ಸಣ್ಣಗೆರೆಗಳ ಆಲಂಕಾರಿಕ, ವಿನ್ಯಾಸವುಳ್ಳದ್ದು. ಅಲ್ಲಿ ಹೆಗಲಮೇಲೆ ಹೊದೆದಿರುವ ಉಡುಪಿನ ಅಂಚೂ ಆಲಂಕಾರಿಕ. ಪ್ಯಾಬ್ಲೊನೆರೂಡನ ಚಿತ್ರ ನಾಲ್ಕಾರು ಗುಂಗುರು ಗೆರೆಗಳಿಂದಲೇ ಮೂಡಿಬಂದಿದೆ. ಮಿಕ್ಕ ಚಿತ್ರಗಳ ರೇಖಾ ಲಯಕ್ಕಿಂತ ಇದು ಭಿನ್ನ. ಪಾಶ್ಚಾತ್ಯ ಸಂಗೀತರಚನಕಾರ ಬಿಥೋವನ್ನನ ಚಿತ್ರದ ತಲೆಗೂದಲು ಹಿಂದಕ್ಕೆ ಕೆದರಿರುವ ಬೀಸು ಗಮನ ಸೆಳೆಯುತ್ತದೆ. ಶೈಲಿ, ವಿಧಾನಗಳನ್ನು ವ್ಯಕ್ತಿತ್ವ ಪ್ರಕಾಶನಕ್ಕೆ ಬಳಸಿಕೊಳ್ಳುವ ಹೀಗಿದ್ದೂ ಸಾದೃಶ್ಯ ಸಾಧಿಸುವ ಅಂತಃಸ್ಫುರಣೆಯ ರೇಖಾಪ್ರತಿಭೆ ಆರ್.ಎಸ್.ಎನ್. ಅವರದು.

ಗತಿ, ಚಲನೆ, ಚೈತನ್ಯ ಅವರ ಚಿತ್ರಗಳಲ್ಲಿ ವಿಶಿಷ್ಟ. ರಾಮಚಂದ್ರರಾಯರು 'ಸ್ಥಿರವಲ್ಲ, ಚಲನೆಯ ಕಡೆಗೆ ಒಲವು' ಎಂದದ್ದು ಇದನ್ನೆ. ಅಂಗಾಂಗಗಳ ಚಲನೆಯ ಕಣ್ಣೋಟ ಬೆರಳು ಕುಂಚ–ಲೇಖನಿಗಳಲ್ಲಿ ಹರಿಯುವ ಬಗೆ. ಚಲನೆಗಳ ಅರಿವು ಕುಂಚದ ಬೀಸು, ಅದು ದಿಕ್ಕು ಕೋನಗಳಲ್ಲಿ ಹರಿವ ಬಗೆ ಚೈತನ್ಯ ನೀಡುತ್ತದೆ.

ಆರ್.ಎಸ್.ಎನ್. ಸಾಂದರ್ಭಿಕ, ಪೂರಕ ಚಿತ್ರಗಳನ್ನು ರಚಿಸಿದ್ದಾರೆ. ಆದರೆ ನಿರೂಪಣಾತ್ಮಕವಾಗದೆ ಪ್ರತಿಪಾದನಾತ್ಮಕವಾಗುತ್ತವೆ, ಅದು representation, ಕೆಲವೊಮ್ಮೆ ಸಾಂಕೇತಿಕ. ಕರಾಕೃ ಅವರ ಪ್ರಕಟನೆಗಳಿಗೆ ಅನೇಕ ಚಿತ್ರಗಳನ್ನು ರಚಿಸಿ ಕೊಟ್ಟಿದ್ದಾರೆ. ಅದರಲ್ಲೂ ಜನಪದ ಕವನ, ಕಥನ ಕವನ, ಕಥಾಸಂಗ್ರಹಗಳಿಗೆ ಪಠ್ಯ ಓದಿ ಬರೆದವಲ್ಲ, ತಾವು ಕಂಡ ಜನಜೀವನದ ನೋಟಗಳನ್ನು ಜಾನಪದ ಬದುಕನ್ನು ಚಿತ್ರಿಸಿದ್ದಾರೆ. ಪಠ್ಯ, ಚಿತ್ರ ಸಮಾನಾಂತರವಾಗಿ ಪ್ರತ್ಯೇಕವಾಗಿ ಕೃತಿಗಳಾಗುತ್ತವೆ. ಸ್ವತಂತ್ರ ರಚನೆಗಳಾಗುತ್ತವೆ. ವೆರಿಯರ್ ಎಲ್ವಿನ್ ಬಗೆಗಿನ ಗ್ರಂಥದಲ್ಲಿ ಗಿರಿಜನರ ಗುಡ್ಡಗಾಡಿನ ಜನರ ಜೀವನಚಿತ್ರಗಳಿವೆ. ಕರಾಕೃಗಾಗಿ ಬರೆದುಕೊಟ್ಟವು. ಇಲ್ಲಿ ಅಥವಾ ಲೇಖಕಕ್ಕೆ ಬರೆದ ಕೃತಿಗಳಲ್ಲಿ ಕಾಲ್ಪನಿಕ ಅಂಶಗಳು, ಸಂಕೇತಗಳೂ ಸೇರಿರುತ್ತವೆ. ಅವೆಲ್ಲ ಕೂಡಿ ಒಂದು ದೃಶ್ಯಾನುಭವವನ್ನು ಕಟ್ಟಿಕೊಡುತ್ತವೆ. ಅವು ಕಥನವಲ್ಲ ಪ್ರತಿಪಾದನೆ; ಅರ್ಥ ಅನುಭವಗಳ ಪ್ರತಿಪಾದನೆ.

ಅವರ ಯಾವುದೇ ರೇಖಾಚಿತ್ರ, ಶಿಲ್ಪವಿರಲಿ ಲಯ ಮತ್ತು ವಿನ್ಯಾಸ ಅವಿನಾಅಂಶಗಳಾಗಿ ಮೂಡಿಬರುತ್ತವೆ. ಆಲಂಕಾರಿಕ ಎನಿಸಿದರೂ ಸುಂದರ, ಕಲಾತ್ಮಕ. ಎಂದರೆ ಆಲಂಕಾರಿಕ ರೇಖೆಗಳು ಪ್ರತ್ಯೇಕವಾಗಿ ನಿಲ್ಲುವುದಿಲ್ಲ. ಸೌಂದರ್ಯಾನುಭವದ ಮೂಲದಲ್ಲೆ ಲಯವಿದೆ. ಗ್ರಹಣೇಂದ್ರಿಯಗಳು ಗ್ರಹಿಸುವಲ್ಲೆ, ಸಂವೇದಿಸುವಲ್ಲೆ ಲಯಗ್ರಾಹಿ. ಆ ಅಂತಃಸ್ಫುರಣೆ, ಆ ಪ್ರಜ್ಞೆಯ ಅರಿವಿದ್ದಾಗ ಅದಕ್ಕೊಂದು ಒತ್ತು, ಸ್ಫುಟತೆ, ಪ್ರಾಧ್ಯಾನ್ಯ ಒದಗುತ್ತದೆ. ಅವರ ಚಿತ್ರಗಳು ಆ ಬಗೆಯವು. ಎಂದರೆ ಅಲಂಕಾರಕ್ಕಾಗಿ ಅಲಂಕಾರವಲ್ಲ, ಲಯಾನುಭವದ ಭಾಗ.

ಕೊನೆಯ ಒಂದು ವಿಶೇಷಗುಣ, ಡೂಡ್ಲ್ ಬಗೆಯ ಸುರುಳಿ ರೇಖಾಚಿತ್ರಗಳನ್ನು ಹೊರತು ಪಡಿಸಿದರೆ, ಮಿತರೇಖಾಭಿವ್ಯಕ್ತಿ, ರೂಪ(form) ಮತ್ತು ಸಂರಚನೆಗಳ ವೈಶಿಷ್ಟ್ಯ. ಅತ್ಯಂತ ಕಡಿಮೆ ರೇಖೆಗಳಲ್ಲಿ ಚಲನೆ, ಚೈತನ್ಯ, ನಿಲುವು, ಭಂಗಿ, ವ್ಯಕ್ತಿ ಮುಖರಚನೆ, ಭಾವ ತರಬಲ್ಲರು. ಕೆಲವೊಮ್ಮೆ ಅವರ ಪೂರಕ ಕಾಲ್ಪನಿಕ ಚಿತ್ರಗಳಲ್ಲಿ ಕಾಣಬರುವ ಬಾಣದ ಗುರುತು ಮುಂತಾದವೂ ಸಂರಚನೆಯ (structure) ಸಾರೂಪ್ಯ ಸಮತೋಲಗಳ, ಒಟ್ಟು ರೂಪದ (form) ಭಾಗವಾಗುತ್ತವೆ. ಕೆಲವೊಮ್ಮೆ ಸಾಂಕೇತಿಕವೂ ಆಗಬಹುದು. ರೂಪ (form)ವನ್ನು ಕುರಿತ ಅವರ ಲೇಖನವನ್ನು ಇಲ್ಲಿ ಸೇರಿಸಿದೆ. "...to say that form is irrelevant is to say that life is irrelevant and as a direct consequence art is irrelevant" ಎಂದು ಟೀಕಿಸಿದ್ದಾರೆ. "Man through successive generations has improved upon nature's form to suit his specific needs and created those myriads of artifacts. Now and then we take off into the realm of pure aesthetics and there we have fused forms, abstractions, in a sense that in their totality, give us sensed, shared aesthetic pleasure ..Life is form and form is life; and separated they are inconceivable." ಪ್ರಾರಂಭದಲ್ಲಿ, ಉದ್ಧರಿಸಿದ ಮಾತು "ದೈವ ಸೃಷ್ಟಿಯನ್ನು ಸುಂದರಗೊಳಿಸುವುದೇ ನನ್ನ ಕಲಾಕೃತಿಗಳ ಉದ್ದೇಶ" ಎಂಬುದು ನೆನಪಾಗುತ್ತದೆ. ಆರ್.ಎಸ್.ಎನ್. ಹೇಗೆ ಕಲೆಯ ಬಗ್ಗೆ ಆಳವಾಗಿ ಚಿಂತಿಸಿದ್ದರು ಎಂಬುದನ್ನು ಈ ಚಿಕ್ಕ ಲೇಖನ ತಿಳಿಸುತ್ತದೆ.

ರೇಖಾಚಿತ್ರಗಳ ವಸ್ತು ವೈವಿಧ್ಯ ಬೆರಗುಗೊಳಿಸುತ್ತೆ. ಗೀಚು ರೇಖಾಚಿತ್ರಗಳ ಬಗ್ಗೆ ಹೇಳುತ್ತ, ಎರಿಕ್‌ಗಿಲ್‌ನನ್ನು ಹೋಲಿಸಿ, ಆರ್.ಎಸ್.ಎನ್. ಅವರದು ಆಶುಚಿತ್ರಣ, ಅವನದು ಶ್ರಮ ಸಿದ್ಧವಾದುದು, ಈ ವೈವಿಧ್ಯ ಅವನಲ್ಲಿಲ್ಲ ಎಂದಿದ್ದಾರೆ ರಾಮಚಂದ್ರರಾಯರು. ಜಾನಪದ ನೃತ್ಯ, ಬ್ಯಾಲೆ, ಭರತನಾಟ್ಯ, ಬಯಲಾಟ, ಹಳ್ಳಿಯ ಕುಣಿತ ಎಷ್ಟೊಂದು ಬಗೆ. ಅವರು ಲೇಖಕಕ್ಕೆ ಬರೆಯುತ್ತಿದ್ದ ವ್ಯಂಗ್ಯ ಚಿತ್ರಗಳದೇ ಪ್ರತ್ಯೇಕ ಪ್ರಪಂಚವಾಗುತ್ತದೆ. ಎಲ್ಲರಿಗೂ ಕಾರ್ಡುಗಳ ಒಂದು ಪಕ್ಕದಲ್ಲಿ ಬರೆಯುತ್ತಿದ್ದವೂ, ಪಥ್ಯಸಮೇತ, ಸ್ವಾರಸ್ಯವಾದುವೆ. ಅವರು ರೂಪರಾಜ್ ಅವರ ವೈಜ್ಞಾನಿಕ ಕಾಮಶಾಸ್ತ್ರಗ್ರಂಥಕ್ಕೂ ಚಿತ್ರ ರಚಿಸಿದ್ದರು, ಕಾಮ-ಶೃಂಗಾರ ಚಿತ್ರಗಳಾದರೂ ಅಶ್ಲೀಲ ಎಸಿಸುವುದಿಲ್ಲ ಎಂಬುದು ಸೋಮಶೇಖರ್ ಅಭಿಪ್ರಾಯ. ಅವರ ಇತರ ರೇಖಾಚಿತ್ರಗಳೂ ಎಷ್ಟೋ ವೇಳೆ ಅಶ್ಲೀಲದ ಅಂಚಿನಲ್ಲಿರುತ್ತವೆ ಎಂದು ಕೆಲವರ ಅಭಿಪ್ರಾಯ ಒಪ್ಪುವಂಥದಲ್ಲ. ನಾಯ್ಡು ಅವರ ರೇಖೆಗಳು ಶಕ್ತಿಯುತವಾದುವು. ಅಂಗಾಂಗಗಳ ಖಚಿತ ಒತ್ತು ಉಬ್ಬು ತಗ್ಗುಗಳಿಗೆ ಒತ್ತು, ರೇಖೆಯಲ್ಲೇ ತೆಳು-ದಟ್ಟ, ಸಣ್ಣ-ದಪ್ಪಗಳ ಹೊರಳು ಕೆಲವೊಮ್ಮೆ ಲೈಂಗಿಕತೆಯ ಭ್ರಮೆ ಮೂಡಿಸಬಹುದು. ಆದರೆ ಅವೆಲ್ಲ ಅತ್ಯಂತ ಸಹಜ ಭಂಗಿ-ವಿನ್ಯಾಸಗಳು. ಅವರು ಚೌಡಪ್ಪರೆಡ್ಡಿಯವರ 'ಧರ್ಮಭೂಮಿ' ನಾಟಕಕ್ಕೆ ಮುಖಪುಟ ಒಳಚಿತ್ರಗಳನ್ನು ರಚಿಸಿಕೊಟ್ಟಿದ್ದಾರೆ, ಅವು ಅಮೂರ್ತ-ವಿನ್ಯಾಸಗಳಿಗೆ ಹತ್ತಿರವಾಗುತ್ತವೆ.

ಆರ್.ಎಸ್.ಎನ್. ಮೊದಲು ರಚಿಸಿದ ಲೆನಿನ್ ಶಿಲ್ಪ ನಾಲ್ಕು ಅಡಿಯದಾದರೂ ಮುಂದೆ ಅವರು ರಚಿಸಿದ ಶಿಲ್ಪಗಳು, ಉಬ್ಬುಶಿಲ್ಪ ಫಲಕಗಳು ಚಿಕ್ಕವೆ. ಅವರು ಸಮಕಾಲೀನ ವ್ಯಕ್ತಿಗಳ portraits ವ್ಯಕ್ತಿಶಿಲ್ಪಗಳನ್ನು ರಚಿಸಿದ್ದಾರೆ, ಬುದ್ಧ ಶಿವ ಮೊದಲಾದ ಶಿಲ್ಪ, ಫಲಕಗಳನ್ನು ರಚಿಸಿದ್ದಾರೆ.

ವ್ಯಕ್ತಿಶಿಲ್ಪ ಎಂಬುದು ವ್ಯಕ್ತಿಯ ಆಕೃತಿ ಮತ್ತು ವ್ಯಕ್ತಿತ್ವವನ್ನು ಪ್ರತಿಪಾದಿಸುವಂತಹುದು. ವ್ಯಕ್ತಿಯ ಸಾದೃಶ್ಯ, ಹೋಲಿಕೆಯಂತೆ ಆತನ ಸ್ವಭಾವವೂ ವ್ಯಕ್ತವಾಗುವಂತಿರಬೇಕು ಎಂಬುದು ಗ್ರಹಿಕೆ. ಒಮ್ಮೊಮ್ಮೆ ಶಿಲ್ಪ ತುಂಬ ವಾಸ್ತವ, ಸಹಜ, ನಿಜರೂಪದ್ದೇ ಆಗಿರಬಹುದು, ಅಥವಾ ಇಂಪ್ರೆಷನಿಸ್ಟಿಕ್ ಆಗಿರಬಹುದು. ವ್ಯಕ್ತಿಯ ಅನನ್ಯ ವ್ಯಕ್ತಿತ್ವ, ಗುಣಶೀಲಗಳ ಸಾರ ಎಂಬುದು ಆಕೃತಿಯ ಪ್ರತಿಪಾದನೆಯಿಂದಲೋ ಅಥವಾ ಅಮೂರ್ತಾಂಶಗಳ ಮೂಲಕವೊ ಅಥವಾ ಅವುಗಳ ಕೂಡಿಕೆಯಿಂದಲೊ ಬೇರೆ ಬೇರೆ ಪ್ರಮಾಣದಲ್ಲಿ ಮೂಡಿಬರಬಹುದು.

ಆರ್.ಎಸ್.ಎನ್. ಅವರು ಅಭಿಜಾತ ಮಾದರಿಯ ಶಿಲ್ಪಗಳನ್ನು ರಚಿಸಿದ್ದಾರೆ. ಆಧುನಿಕ ಶೈಲಿಯವನ್ನೂ ನಿರ್ಮಿಸಿದ್ದಾರೆ. ಮುಖ್ಯವಾಗಿ ವ್ಯಕ್ತಿಶಿಲ್ಪ ಎಂದಾಗ ಹೋಲುವ ಗುಣ, ವ್ಯಕ್ತಿಸಾದೃಶ್ಯ, a good likeness ಎಂಬುದು ನಮ್ಮ ಗ್ರಹಿಕೆ. ಅಭಿಜಾತ ಶಿಲ್ಪಕಲೆಯಲ್ಲಿ ಇದು ಆದರ್ಶೀಕೃತವಾಗಿಯೂ ಇರುತ್ತದೆ. Idealized ಎಂಬುದು ಹಲವು ಕಾರಣಗಳಿಂದಿರಬಹುದು.

ವ್ಯಕ್ತಿಯನ್ನು ಸುಂದರವಾಗಿ ರೂಪಿಸುವ ಕಾಲವೂ ಇತ್ತು. ಆದರೆ ಈಗ ರೂಪ (form) ಮತ್ತು ಕಲಾತ್ಮಕ ದೃಷ್ಟಿಯ ಆದರ್ಶೀಕರಣ ಮುಖ್ಯವಾಗುತ್ತದೆ. ನಾಯ್ಡು ಅವರದು ಈ ಬಗೆ. ಜೊತೆಗೆ ವ್ಯಕ್ತಿತ್ವ, ಮನೋವೈಜ್ಞಾನಿಕ ದೃಷ್ಟಿಯೂ ಇರುತ್ತವೆ. ಪ್ರಸಿದ್ಧ ಶಿಲ್ಪಿ ರೊಡಿನ್ (ರೊದ್ವಾಂ) ರೂಪ ಸಂಬಂಧಿತ ಶೈಲೀಕರಣಕ್ಕೆ ಒಲವು ತೋರಿದ್ದ, realismಗಿಂತ naturalismಗೆ ಒತ್ತು. ಶಿಲ್ಪತಲದ ತೆರಪು, ರಾಶಿ, ತಲದ ನಯ ಅಥವಾ ಒಡೆದಂತಹ ಮೈವಳಿಕೆಗಳು ಇತ್ಯಾದಿ. ಅವನ ಬಗೆಯನ್ನು psychological realism ಎನ್ನುತ್ತಾರೆ, physical realism ಎಂಬುದಕ್ಕಿಂತ. ಆರ್.ಎಸ್.ಎನ್. ಶಿಲ್ಪಗಳು ಒಂದೇ ಬಗೆಯವಲ್ಲ, ಅಪೂರ್ವ ಪ್ರಯೋಗಗಳನ್ನು ಮಾಡಿದ್ದಾರೆ. ಅವರ ಶಿಲ್ಪಗಳಲ್ಲಿ ಕಂಡು ಬರುವ ಲಯಪ್ರಜ್ಞೆ ಗಮನಾರ್ಹ. ಆ ಲಯ ಶಿಲ್ಪದ ರಾಶಿ, ಗಾತ್ರ, ಸ್ಥಳಗಳ ತೆರಪುಗಳ ನಿರ್ವಹಣೆಯಲ್ಲಿ ಅನುಭವಕ್ಕೆ ಬರುತ್ತವೆ. ಅಲ್ಲದೆ ರೇಖಾಚಿತ್ರಗಳ ಲಯವಿನ್ಯಾಸಗಳ ಪ್ರಭಾವವನ್ನು ಇಲ್ಲಿ ಕಾಣಬಹುದು. ಆ ಬೀಸು, ಆ ಬಳುಕುಗಳು ಇಲ್ಲೂ ಕಾಣಬರುತ್ತವೆ. ಅವರ ಶಿಲ್ಪಗಳಲ್ಲೂ expressive ಗುಣ ಪ್ರಾಧಾನ್ಯ ಪಡೆಯುತ್ತದೆ, ಲಿರಿಕಲ್ ಗುಣದ ಜೊತೆ ಜೊತೆಗೆ.

ಆರ್.ಎಸ್.ಎನ್.ಗೆ ಜೇಡಿಮಣ್ಣೆ ರಚನೆಯ ಮಾಧ್ಯಮ. ಅನಂತರ ಅದರಿಂದ ಪ್ಲಾಸ್ಟರ್ ಅಚ್ಚು ಸಿದ್ಧಪಡಿಸುವುದು. ದಿ.ಡಿ.ವಾದಿರಾಜ್ ಅವರು ಪ್ಲಾಸ್ಟರ್ ಆಫ್ ಪ್ಯಾರಿಸ್ ಅಚ್ಚು ತೆಗೆಯುವಲ್ಲಿ ನೆರವಾಗುತ್ತಿದ್ದರು. ಅವರ ಶಿಲ್ಪಗಳ ಬಗೆಗೂ ಎಸ್.ಕೆ.ರಾಮಚಂದ್ರರಾಯರು ಬರೆದಿದ್ದಾರೆ. ಕೆಲವೊಂದು ಶಿಲ್ಪಗಳ ವೈಶಿಷ್ಟ್ಯವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಿದೆ.

ಅವರು ಹಲವು ಬುದ್ಧ ಶಿಲ್ಪಗಳನ್ನು ರಚಿಸಿದ್ದರು. ಬಹುವಾಗಿ ಪೀಠದ ಮೇಲಿನ ಶಿರಗಳು. ಲಾಲಿತ್ಯ ಪ್ರಾಧಾನ್ಯವಾದುವು. ನೀಳನಾಸಿಕದ ರೇಖಾವಿನ್ಯಾಸ ಹುಬ್ಬಿಗೂ ಹಬ್ಬಿ ಇಡೀ ಮುಖವನ್ನು ಸ್ಫುಟಗೊಳಿಸುತ್ತದೆ. ಬುದ್ಧಚಕ್ಷುಗಳು ವಿಶಿಷ್ಟ ಅರ್ಧನಿಮೀಲಿತ ನಯನ ಗೀತಾತ್ಮಕ ಲಯವನ್ನು ಹೊಂದಿದೆ. ಅಲೆಯಲೆಯಾಗಿ ಬಳುಕುವ ಸುರುಳಿಯಾಗಿ ಎತ್ತಿ ಕಟ್ಟಿರುವ ಶಿಖೆಯೂ ಸುಂದರ. ತುಟಿ ಮುಖದ ಶಾಂತ, ಮುಗ್ಧತೆಗೆ ಹೊಂದುವಂತಿದೆ. ಒಂದರಲ್ಲಿ ಶಿರ ಬಾಗಿರುವುದೂ ಭಾವಪೂರ್ಣವಾಗಿದೆ. ಕಿವಿಗಳ ದೀರ್ಘಹಾಲೆಗಳು ಒಟ್ಟುರೂಪಕ್ಕೆ ಹೊಂದುವಂತಿವೆ. ವಿವರಗಳು ಕಡಿಮೆಯಾದರೂ ಕಲಾತ್ಮಕತೆಗೆ ಒತ್ತು. ಶಿವನ ಆವಕ್ಷಶಿಲ್ಪದಲ್ಲೂ ಅದೇ ಲಯವಿನ್ಯಾಸವಿದೆ. ಬುದ್ಧ ಶಿಲ್ಪದ ಮುಗ್ಧ ಶಾಂತತೆಗಿಂತ ಭಿನ್ನವಾದ ಪ್ರೌಢತೆ ಮುಖದಲ್ಲಿದೆ. ಮೇಲಿನ ಶಿಖೆಗೆ, ತ್ರಿಕೋನ ಆಕಾರಕ್ಕೆ ಕೆಳಗೆ ಕೊರಳಿನಿಂದ ಹೆಡೆಯಾಡಿಸುತ್ತಿರುವ ಸರ್ಪ ಪೀಠದ ವೈದೃಶ್ಯ ನೀಡುತ್ತದೆ. ಚಂದ್ರ, ಗಂಗೆಯರನ್ನು ಉಬ್ಬು ಶಿಲ್ಪದಂತೆ ರೂಪಿಸಲಾಗಿದೆ. ಧ್ಯಾನಸ್ಥ ಶಿವನಶಿಲ್ಪ ಎಂಬುದು ಸ್ಪಷ್ಟ. ಕ್ರಿಸ್ತನ ಒಂದು ಶಿಲ್ಪವಿದೆ. ಸುಂದರ ನಾಸಿಕ ರೇಖೆ, ಹುಬ್ಬಿಗೆ ಹರಡಿದ ಬಗೆ. ಕಣ್ಣು ಮುಖಗಳಲ್ಲಿ, ಸೌಮ್ಯಭಾವ. ಗಡ್ಡಮೀಸೆ ಮತ್ತು ನಡುವಿನ ತುಟಿಗಳಲ್ಲಿ ಲಾಲಿತ್ಯವಿದೆ. ಮಾತೆ ಮೇರಿ ಮತ್ತು ಶಿಶು ಯೇಸುವಿನ ಶಿಲ್ಪ ತುಂಬ ಸುಂದರವಾಗಿದೆ. ತಾಯ ಎದೆಯಪ್ಪುಗೆಯಲ್ಲಿ ಪ್ರೀತಿಯ ರಕ್ಷಣೆಯಲ್ಲಿ ನಿದ್ರೆಗೆ ಸಂದ ಶಿಶುವಿನ ಕೆದರಿದ ತೆಳು ಕೂದಲೂ ವಿನ್ಯಾಸದಿಂದ ಆಕರ್ಷಕ. ಮೇರಿ ತಲೆ ಮೇಲಿನ ಮುಸುಕು, ಕಣ್ಣು ಹುಬ್ಬು ಉಳಿದವಕ್ಕಿಂತ ಭಿನ್ನ. ನನಗೆ ನಾಯ್ಡು ಅವರು ತುಟಿಗಳನ್ನು ರಚಿಸುವ ರೀತಿಯೇ ಆಕರ್ಷಕ– ತುಟಿಗಳು ಭಾವಸಂವಹನಕ್ಕೆ, ವ್ಯಕ್ತಿತ್ವ ಪ್ರಕಾಶನಕ್ಕೆ ಹೇಗೆ ನೆರವಾಗುತ್ತವೆ ಎಂಬುದು ಕುತೂಹಲಕಾರಿ. ಯಾವುದೋ ದೇವತೆಯದೋ ಅಥವಾ ಸಿದ್ಧಾರ್ಥನದೋ ಆಗಿರಬಹುದಾದ ಒಂದು ಶಿಲಾಶಿಲ್ಪ ಕ್ರಿ.ಶ. ಆದಿಯ ಬೌದ್ಧ ಶಿಲ್ಪಗಳನ್ನು ನೆನಪಿಸುತ್ತದೆ. ಶಿರದ ಕೀರಿಟ ವಿನ್ಯಾಸವೂ ಕಾಲಬದ್ಧವಾದುದು. ಕಿವಿಯ ಆಭರಣವೂ ದೊಡ್ಡದು, ದುಂಡನೆಯದು, ವಿಶೇಷ. ಬುದ್ಧನದೇ ಶಿಲಾಶಿಲ್ಪವೊಂದಿದೆ. ಉಳಿದವಕ್ಕಿಂತ ಭಿನ್ನಭಾವದ್ದು. 'ಬುದ್ಧಸ್ಮಿತ' ಎನ್ನಬಹುದಾದ ನಗೆ ತುಸು ತೆರೆದ ತುಟಿಗಳಲ್ಲಿದೆ.

ಬೇಂದ್ರೆ ಮತ್ತು ಕುವೆಂಪು ಅವರ ಶಿಲ್ಪಗಳು ವಿಭಿನ್ನ ಬಗೆಯವು. ಬೇಂದ್ರೆಯವರದು ಪೀಠದ ಮೇಲಿನ ಕೊರಳು ಸಮೇತವಾದ ಶಿರದ ಶಿಲ್ಪ. ಲಯ ಲಾಲಿತ್ಯ ಆದರ್ಶೀಕರಣಗಳ ದೃಷ್ಟಾಂತವೆಂಬಂತಿದೆ. ಜೊಂಪೆಜೊಂಪೆಯಾಗಿ ಇಳಿಬಿದ್ದ ತಲೆಗೂದಲು, ದಟ್ಟವಾದ ಸೊಂಪಾದ ತುಟಿಮುಚ್ಚಿದಂತಹ ಜೋಲು ಮೀಸೆ, ಕುತೂಹಲ ಉಂಟುಮಾಡುವ ಹುಬ್ಬುಗಳ ವಿನ್ಯಾಸ, ಅಂಚುಗಳಲ್ಲಿ ಕೆಳಕ್ಕೆ ಜೋತ ಕಣ್ಣಿನ ಮೇಲ್ಭಾಗಗಳು, ನುಣುಪಾದ ಹಣೆ, ಸ್ನಾಯು ಉಬ್ಬು ತಗ್ಗುಗಳ ಕನಿಷ್ಠವಾಗಿರುವ ಮುಖ. ಇದಕ್ಕಿಂತ ಭಿನ್ನ, ಕುವೆಂಪು ಅವರದು. ಫಲಕದಲ್ಲಿ ಮೂಡಿಸಿರುವ ಅಭಿಮುಖ ಶಿಲ್ಪ. ಕುವೆಂಪು ಅವರ ಇಂತಹ ಒಂದು ಛಾಯಾ ಚಿತ್ರವಿದೆ. ಅದರ ಪ್ರೇರಣೆ ಇರಬೇಕು. ಮುಖದ ಸ್ನಾಯುಗಳಲ್ಲಿ ಸ್ಫುಟತೆ ಇದೆ. ನಡುವಿನಿಂದ ಇಬ್ಭಾಗವಾಗಿಸಿದ ತಲೆಗೂದಲು ಸ್ಪಷ್ಟ. ಆದರ್ಶೀಕರಣಕ್ಕಿಂತ ಸಹಜತೆಗೆ ಹತ್ತಿರವಾದ ಶಿಲ್ಪ. ಡಾ.ಎಸ್.ರಾಧಾಕೃಷ್ಣನ್ ಅವರ ಶಿರ ಶಿಲ್ಪದಲ್ಲಿ

ಕಲ್ಪನೆ, ಉತ್ಪ್ರೇಕ್ಷೆ, ವ್ಯಕ್ತಿತ್ವ ಪ್ರಕಾಶನ ಕಾರಣವಾದ ಅಂಶಗಳೂ ಇವೆ. ವಯೋವೃದ್ಧ, ಜ್ಞಾನವೃದ್ಧ ಕಲ್ಪನೆಗೆ ಅನುಗುಣವಾದ ಉತ್ಪ್ರೇಕ್ಷಿತ ಮುಖ ಸ್ನಾಯುಗಳು ಮತ್ತು ಬುದ್ಧಿಗೆ ಒತ್ತು ನೀಡುವ ಹಣೆಯ ವಿಶಾಲ ಮೇಲುಭಾಗ. ಕೆದರಿದ ಕೂದಲೂ ಮತ್ತಷ್ಟು ವಿಶಾಲಭಾವ ತರುತ್ತದೆ. ಮೂಗು ಹೊಳ್ಳೆಗಳೂ ಉತ್ಪ್ರೇಕ್ಷಿತ. ತುಂಬ ಅಪರೂಪದ ರಚನೆ ಎನಿಸುವ ಚಾಚಿದ ತುಟಿ ಮತ್ತು ಗಲ್ಲಗಳು ತತ್ತ್ವಜ್ಞಾನಿಯ ಒಂದು ಕಲ್ಪನೆ.

ಕವಿ ಭಾರತಿಯಾರ್‌ರ ಶಿಲ್ಪವೂ ಛಾಯಾಚಿತ್ರ ಪ್ರೇರಿತ. ಬಹುಪಾಲು ವ್ಯಕ್ತಿಶಿಲ್ಪಗಳಿಗೆ ಪ್ರೇರಣೆ ಈ ಬಗೆಯದೆ. ಪೇಟ, ಕೊರಳು ಮುಚ್ಚುವ ವಸ್ತ್ರದ ನಡುವೆ ಮುಖ. ಹುರಿಗೊಳಿಸಿ ಮೇಲೆತ್ತಿದ ಮೀಸೆ. ಇತರ ಶಿಲ್ಪಗಳ ಕಣ್ಣುಗಳಿಗಿಂತ ಇಲ್ಲಿ ಕಣ್ಣು ಸರಳ. ಪಾಪೆಯಲ್ಲೂ ಒಳಸುತ್ತುಗಳಿಲ್ಲ, ಬಾದಾಮಿಯಾಕಾರಕ್ಕೆ ತೆರೆದ ರೆಪ್ಪೆಗಳು ಕೂಡಿವೆ. ಕಟ್ಟಿರುವ ಪೇಟದ ವಸ್ತ್ರದಲ್ಲಿ ಮಾರ್ದವತೆ ಇದೆ. ಆದರೆ ಗಲ್ಲ, ತುಟಿಗಳಲ್ಲಿ ದೃಢತೆ ಇದೆ.

ಆರ್.ಎಸ್.ಎನ್. ಶಿಲ್ಪಕ್ಕೆ ತೊಡಗಿದ್ದೇ ಲೆನಿನ್‌ರ ರಚನೆಯಿಂದ. ಶಿರದ ಒಂದು ಶಿಲ್ಪವಿದೆ. ಮುಖ, ಹಣೆಗಳೆಲ್ಲ ಮಾಂಸಲ ಉಬ್ಬು ತಗ್ಗುಗಳಿಂದ ಕೂಡಿವೆ. ಆದರೂ ಆಕರ್ಷಕ. ಹಣೆಯ ಸುಕ್ಕುಗಳೂ ನಯವಾಗಿ ಜಾರುವಂತಿವೆ. ಲೆನಿನ್ ಕಣ್ಣುಗಳ ರಚನೆ ಮಿಕ್ಕಾವ ಶಿಲ್ಪಗಳಲ್ಲೂ ಕಾಣದ ಬಗೆಯದು. ರೆಪ್ಪೆಗಳ ಮೇಲೆ ಕೆಳಗೆ ತೆರೆಗಳಂತೆ ಸುಕ್ಕುಗಳನ್ನು ಬಿಡಿಸಿದ್ದಾರೆ. ತೆಳುವಾದ ಗಡ್ಡ, ಮೀಸೆ, ಬಾಹ್ಯ ಚಹರೆಗಳು ಸಹಜವಾಗಿದ್ದೂ ಗುಣ ಸ್ವಭಾವ ಸೂಚಿಯೂ ಆಗಬೇಕು. ಆ ಎಲ್ಲ ಗುಣಗಳೂ ಇಲ್ಲಿವೆ. ಲೆನಿನ್ ಶಿರದೊಡನೆ ಸ್ಟಾಲಿನ್ ಶಿಲ್ಪ ಹೋಲಿಸಿ. ಎತ್ತಿದ ತಲೆಯಲ್ಲಿ ಮೆಜೆಸ್ಟಿಕ್ ಎನ್ನಬಹುದಾದ ಸರ್ವಾಧಿಕಾರಿಯ ನಿಲುವಿದೆ. ಸೈನ್ಯಾಧಿಕಾರಿಯ ಉಡುಪಿನ ಕಾಲರ್ ಮಾತ್ರವಿದ್ದರೂ ಅಧಿಕಾರದ ಸೂಚಕ ಸಂಜ್ಞೆಯಾಗುತ್ತದೆ.

ಗಮನ ಸೆಳೆಯುವ, ವಿಶಿಷ್ಟ ಶೈಲಿಯ ಬಹುಚರ್ಚಿತವಾದ ಎರಡು ಶಿಲ್ಪಗಳಿವೆ. ಒಂದು ಬರ್ನಾರ್ಡ್ ಷಾನದು. ಷಾ ಆಧುನಿಕ ನಾಟಕಕಾರ. ಆತನ ನಾಟಕಗಳಲ್ಲಿ ಪೀಠಿಕೆ, ಸೂಚನೆಗಳದೇ ಒಂದು ವಿಶೇಷ. 'ಅಹಂ'ಗೆ ಹತ್ತಿರವಾದ ಆತ್ಮವಿಶ್ವಾಸ. ತಾನು ಷೇಕ್ಸ್‌ಪಿಯರನನ್ನೂ ಮೀರಿಸಿದ ನಾಟಕಕಾರ ಎಂಬ ಹೆಗ್ಗಳಿಕೆಯ ಘೋಷಣೆ ಮಾಡಿದವನು. ಇಂತಹವನ ವಿಶಿಷ್ಟ ವ್ಯಕ್ತಿತ್ವವನ್ನು ಸಹಜಶೈಲಿಯನ್ನು ಬಿಟ್ಟುಕೊಟ್ಟು ಕ್ಯೂಬಿಸ್ಟ್ ಶೈಲಿಯಲ್ಲಿ ರಚಿಸಿ, ಅಮೂರ್ತಕ್ಕೆ ಹತ್ತಿರ ತಂದರೂ, ಶೈಲೀಕರಣಗೊಳಿಸಿದರೂ ಸಾದೃಶ್ಯ ಹೊಳೆಯಿಸಿರುವುದು ಒಂದು ಅನನ್ಯ ಪ್ರತಿಭಾಸ್ಪರ್ಶವೇ ಸರಿ. ಕ್ಯೂಬಿಸಂ ಅನ್ನು ಎರಡು ಬಗೆಯಾಗಿ ವಿಂಗಡಿಸಿಕೊಳ್ಳಬೇಕಿದೆ. ಒಂದು ಬ್ರಾಖ್ ಮತ್ತು ಪಿಕಾಸೊ ಅವರ ಪ್ರಯೋಗದ ಕಾಲಾವಧಿಗೆ ಸಂಬಂಧಿಸಿದ್ದು. ಹಲವು ನೋಟ, ಹಲವು ಭಾಗಗಳನ್ನು ಜ್ಯಾಮಿತೀಯ ಆಕಾರಗಳಾಗಿಸಿ ಸಮೀಕರಿಸಿ ಚಿತ್ರಿಸುವುದು, ಆ ಅವಧಿಯ ಚಿಂತನೆಗೆ ಸಂಬಂಧಿಸಿದೆ. ಇನ್ನೊಂದು ತ್ರಿಕೋನ, ಚೌಕ, ಆಯತಾಕಾರ ಮುಂತಾದ ಜ್ಯಾಮಿತೀಯ ಆಕಾರಗಳ ಮೂಲಕವೇ ಆಕೃತಿ ಸೃಷ್ಟಿ. ಇದು ಯಾವುದೇ ನಿರ್ದಿಷ್ಟ ಕಲಾಚಳವಳಿಗಳ ಕಾಲಾವಧಿಗೆ ಸಂಬಂಧಿಸಿದ್ದಲ್ಲ. ಆಧುನಿಕ ಶಿಲ್ಪಕಲೆಯಲ್ಲಿ ಹಲವರು ಈ ಶೈಲಿಯನ್ನು ಉದ್ದೇಶಾನುಸಾರ ಬಳಸಿದ್ದಾರೆ. ಆರ್.ಎಸ್.ಎನ್. ಷಾನ ಶಿರಶಿಲ್ಪಕ್ಕೆ ಈ ಶೈಲಿ ಬಳಸಿದ್ದಾರೆ. ಇದು ಸುಲಭಸಾಧ್ಯವಲ್ಲ. ಇಡೀ ಶಿಲ್ಪ ಮೇಲಿನಿಂದ ಕೆಳಕ್ಕೆ ದೀರ್ಘಚೌಕಾಕಾರ ಅಥವಾ ಆಯತಾಕಾರದಲ್ಲಿದೆ. ಅದರಲ್ಲಿ ಹುಬ್ಬಿನ ಮೇಲ್ಭಾಗದಲ್ಲಿ ಎರಡು ತ್ರಿಕೋನಗಳು, ಹಣೆಭಾಗದಲ್ಲಿ ನಡುವೆ ತ್ರಿಕೋನಾಕಾರ, ಹುಬ್ಬು ಮೇಲೆದ್ದ ಆಯತಾಕಾರಗಳು, ಚೌಕ ಕಣ್ಣುಗಳಲ್ಲಿ ಕೋನದಿಂದ ಕೋನಕ್ಕೆ ಇಬ್ಭಾಗದ ಗೆರೆಗಳು, ಗಡ್ಡದ ಆಯತಾಕಾರಗಳು, ಮೀಸೆಯ ತುದಿ ಮೇಲೆದ್ದ ಆಯಾತಾಕಾರ ಇತ್ಯಾದಿ. ಮುಖದ ಜ್ಯಾಮಿತೀಯ ಆಕಾರಗಳೇ ವಿವರಗಳಿಂದ ಬೆರಗುಗೊಳಿಸುತ್ತವೆ. ಗಡ್ಡದ ನಡುಭಾಗ ನೀಳವಾಗಿ ಕೆಳಜೋತಿರುವುದರ ಸಮತಲದಲ್ಲಿ ಇಡೀ ಶೈಲಿಗೆ ವಿರುದ್ಧವಾದ ನೈಜಶೈಲಿಯ ಷೇಕ್ಸ್‌ಪಿಯರನ ಆಕೃತಿ. ಇದು ಸಾಂಕೇತಿಕವೇ ಆಗುತ್ತದೆ. ಹಣೆಯ ತ್ರಿಕೋನಗಳು, ಸಂರಚನೆಯ ಭಾಗವಾಗಿ ಸಾರೂಪ್ಯ ಸಮತೋಲ ಸಾಧಿಸಲು ರೂಪಿತವಾಗಿವೆ. ಇಡೀ ಶಿಲ್ಪ ಒಂದು ಅಪೂರ್ವ ಸೃಜನೆ.

ಇನ್ನೊಂದು ರಚನೆ ಟಿ.ಪಿ. ಕೈಲಾಸಂ ಅವರ ನಿಲುವಿನ ಪೂರ್ಣಶಿಲ್ಪ. ಹಿಂದೆ ಫ್ರಾನ್ಸ್‌ನಲ್ಲಿ ರೋದ್ವಾಂನಿಗೆ ಬಾಲ್ಜಾಕನ ಶಿಲ್ಪ ರಚಿಸಿಕೊಡಲು ಆಹ್ವಾನಿಸಲಾಯಿತು. ಆದರೆ ಆತ ರಚಿಸಿದ ಬೃಹತ್ ಗಾತ್ರದ ಕನಿಷ್ಠ ವಿವರಗಳ ಮುದ್ದೆಯಂತಹ ಶಿಲ್ಪ ನೋಡಿ ಟೀಕೆಗಳ ಸುರಿಮಳೆಯಾಯಿತು. ಶಿಲ್ಪ ಸ್ಥಾಪನೆಯನ್ನು ನಿಷೇಧಿಸಲಾಯಿತು. ದಶಕ ದಶಕಗಳೇ ಕಳೆದ ನಂತರ ಅದನ್ನು ಸ್ವಾಗತಿಸಿ ಹೊಗಳಲಾಯಿತು. ಸ್ಥಾಪಿಸಲಾಯಿತು. ರೋದ್ವಾಂ ತನ್ನ ಕಾಲಕ್ಕೂ ಮೀರಿದ ಶಿಲ್ಪ ರಚಿಸಿದ್ದ. ಸೈಕಲಾಜಿಕಲ್

ರಿಯಲಿಸಂ ಬಗೆಯದು ಆ ಕೃತಿ. ಆರ್.ಎಸ್.ಎನ್. ಕೈಲಾಸಂ ಅವರ ಈ ಪುಟ್ಟ ಪೂರ್ಣಾಕೃತಿ ಶಿಲ್ಪ ರಚಿಸಿದಾಗಲೂ ಕಟು ಟೀಕೆ ಮಾಡಿದವರುಂಟು. ಕೈಲಾಸಂ, ಆರ್.ಎಸ್.ಎನ್. ಗೆಳೆಯರು. ಕೈಲಾಸಂರಂತೆ ನಾಯ್ಡು ಸಹ ಸಿಗರೇಟು ಚುಟ್ಟಾ, ಮದ್ಯಪಾನಪ್ರಿಯರು. ವರ್ತನೆ, ಸ್ವಭಾವ, ಅಭಿರುಚಿ, ವಿಚಾರಗಳ ಸೂಕ್ಷ್ಮ ಬಲ್ಲವರು. ವಾಕಿಂಗ್ ಸ್ಟಿಕ್ ಅನ್ನು ಎಡಗೈಯಲ್ಲಿ ಹಿಡಿದು, ಮುಂದೆ ಚಾಚಿದ ದೊಡ್ಡ ಗಾತ್ರದ ಹೊಟ್ಟೆಯ, ಸ್ವಲ್ಪ ಉತ್ಪ್ರೇಕ್ಷಿತ ಎನ್ನಬಹುದಾದ ತಲೆಯ, ಸೂಟುದಾರಿ ಕೈಲಾಸಂ. ಹೊಟ್ಟೆ ಮತ್ತು ಶಿರಗಳು ಪ್ರಧಾನವಾಗಿ ಎದ್ದು ಕಾಣುತ್ತವೆ. ಬ್ರೈನ್ ಅಂಡ್ ಬ್ರಾನ್‌ಗೆ ಹತ್ತಿರವೇ? ಒಂದು ಕಾರಣ, ಆರ್.ಎಸ್.ಎನ್. ವಿವರಣೆ ಎಂದು ಚಾಲ್ತಿಯಲ್ಲಿದೆ. ವಿಪರೀತ ಬೀರ್ ಕುಡಿಯುವವರಿಗೆ ಹೊಟ್ಟೆ ಹೀಗಾಗುತ್ತದೆ ಎಂದು. ಏನೇ ಇರಲಿ, ಕೈಲಾಸಂರ ಆತ್ಮವಿಶ್ವಾಸ ಮಾನವೀಯತೆಯ ಗುಣಗಳು ಇಲ್ಲಿ ವ್ಯಕ್ತ. ಇದು ವ್ಯಂಗ್ಯ ಶಿಲ್ಪವಲ್ಲ. ಮುಖ ರಚನೆ ಆದರ್ಶೀಕೃತವಾಗೇನೂ ಇಲ್ಲ, ವಾಸ್ತವ, ಸಹಜತೆಗೆ ಸಮೀಪ ಆದರೆ ಒಟ್ಟು ನಿಲುವಿನಲ್ಲಿ ಗಾಂಭೀರ್ಯವಿದೆ.

ಆರ್.ಎಸ್.ಎನ್. ಅವರು ಇನ್ನೂ ಹಲವಾರು ಶಿಲ್ಪಕೃತಿಗಳನ್ನು ಮಾಡಿದ್ದಾರೆ. ಎಲ್ಲವೂ ಉಳಿದುಬಂದಿಲ್ಲ. ಅವರ ಉಬ್ಬು ಶಿಲ್ಪಗಳ ಸೌಂದರ್ಯ, ಕಲಾತ್ಮಕತೆಯೆ ವಿಶಿಷ್ಟ. ರೇಖಾಚಿತ್ರಗಳಿಗೆ ಸಮೀಪ. ಕುಂಚದ ದಪ್ಪ ಬೀಸು ರೇಖೆಗಳಂತೆ ಬಳುಕುವ ದಟ್ಟಗೆರೆಗಳಂತೆ ರಚನೆ. ಫಲಕಗಳ ಮೇಲೆ ಉಬ್ಬುಶಿಲ್ಪಗಳು. ಮ್ಯಾಕ್ಸಿಂ ಗಾರ್ಕಿಯ ಉಬ್ಬು ಶಿಲ್ಪಫಲಕ ನೋಡಿ. ಎಷ್ಟೋ ವೇಳೆ ನಾಯ್ಡು ಅವರು ಆ ಕಾಲಕ್ಕೆ ಪ್ರಚಲಿತವಾಗಿದ್ದ ರಷ್ಯನ್ ಶೈಲಿಯ ಪ್ರಭಾವಕ್ಕೆ ಒಳಗಾಗಿದ್ದರು ಎನಿಸುತ್ತದೆ. ವಾಸ್ತವ, ಸಹಜ ಚಿತ್ರಣಗಳಾದರೂ ಗೀತಾತ್ಮಕ ರೇಖೆಗಳ ಬಳುಕು ಇವರದು. ಗಾರ್ಕಿಯ ತಲೆಕೂದಲು, ಮೀಸೆ, ಗಂಟಾದ ಸೂಕ್ಷ್ಮ ವಿವರದ ಹುಬ್ಬು, ಮಾಂಸಲ ಮುಖದ ಚರ್ಮದ ಅಲೆಗಳು, ಹಣೆಯ ಅಡ್ಡ ರೇಖೆಗಳು, ಅಸ್ತವ್ಯಸ್ತ ಉಡುಪು ಆಕರ್ಷಕ ಲಯ ತೋರುವ ಬಗೆ ಇವೆಲ್ಲ ವಿಶಿಷ್ಟ. ಫಲಕದ ಬಲ ಮೇಲುಭಾಗದಲ್ಲಿ ಒಂದು ಪಕ್ಷಿ ಲಾಂಛನವಿದೆ. TO GHR ಎಂಬುದೂ ಇದೆ. ಈ ಶೈಲಿಗಿಂತ ಸ್ವಲ್ಪ ಬೇರೆಯಾದದ್ದು ರವೀಂದ್ರರ ಉಬ್ಬುಶಿಲ್ಪ ಫಲಕ. ಲಾಲಿತ್ಯ ಇಲ್ಲಿಯ ವಿಶೇಷ. ತಲೆಗೂದಲ ವಿನ್ಯಾಸ ಗಮನಿಸಿ. ಎರಡು ಪಾರ್ಶ್ವದಲ್ಲೂ ಸುರುಳಿ ಸುರುಳಿಯಾಗಿ ನಿರೂಪಿತವಾಗಿರುವ ರೀತಿ. ಅತ್ಯಂತ ಕಡಿಮೆ ರೇಖಾ ವಿನ್ಯಾಸದ ಕಣ್ಣುಗಳು. ತಲೆಗೂದಲು ವಿನ್ಯಾಸಕ್ಕೆ ತಕ್ಕ ಮೀಸೆಗಡ್ಡದ ಬಳುಕು ಬಾಗುಗಳು ಇದೊಂದು ಸುಂದರ ಫಲಕ. ನಮಗೆಲ್ಲ ಪ್ರೇಮಚಂದರ ಒಂದೇ ಚಿತ್ರ ಪರಿಚಿತ ಆರ್.ಎಸ್.ಎನ್. ಆ ಪರಿಚಿತ ಮುಖವನ್ನೇ ಉಬ್ಬುಶಿಲ್ಪವಾಗಿ ರಚಿಸಿದ್ದಾರೆ. ಕಣ್ಣುಗಳ ವಿವರ ಗಮನ ಸೆಳೆಯುತ್ತದೆ, ಹಾಗೇ ಕೊರಳ ಸೆರೆ, ಸ್ನಾಯುಗಳು. ದುಂಡನೆಯ ಮುಖದಲ್ಲಿ ಸೌಮ್ಯತೆ, ದೃಢತೆ ವ್ಯಕ್ತ. ಕವಿ ವಲ್ಲತ್ತೋಳರ ಉಬ್ಬುಶಿಲ್ಪ ಫಲಕದಲ್ಲೂ ರೇಖಾ ಲಾಲಿತ್ಯವಿದೆ. ಈ ಕನ್ನಡಕಧಾರಿಯ ತಲೆಗೂದಲ ನಿರ್ವಹಣೆ ಎಲ್ಲ ಶಿಲ್ಪಗಳಿಗಿಂತ ಭಿನ್ನವಾಗಿದೆ. ಹೆಗಲ ಮೇಲಿನ ವಸ್ತ್ರವಿನ್ಯಾಸ, ಹಿನ್ನೆಲೆಯ ರೇಖೆಗಳ ವಿನ್ಯಾಸಕ್ಕೆ ವೈರುಧ್ಯ ಕಲ್ಪಿಸುತ್ತದೆ. ತುಟಿ, ಉಬ್ಬಿದ ಕೆನ್ನೆಗಳು, ಜೋಲುವ ಚರ್ಮ ಸಹಜವಾಗಿದ್ದೂ ಲಯಪೂರ್ಣ ಎನಿಸುತ್ತದೆ. ಬಿ.ಎಂ.ಶ್ರೀ.ಯವರ ಉಬ್ಬು ಫಲಕ ತುಂಬ ತೆಳುವಾದ ಮಾದರಿಯದು. ಅಗಲವಾದ ಮುಖ, ಕೊಂಚ ದಪ್ಪ ಮೂಗು, ತುಂಬು ಕ್ಲೋಸ್‌ಕಾಲರ್ ಕೋಟು, ಪೇಟದ ಜರಿಯ ಸೂಕ್ಷ್ಮರೇಖೆಗಳೂ ಮೂಡಿಬಂದಿವೆ. ಅರವಿಂದ ಮಹರ್ಷಿಯವರ ಉಬ್ಬುಶಿಲ್ಪ ಒಮ್ಮೆಗೇ ಆ ಭಾವನೆ ಮೂಡಿಸುವಂತಿದೆ. ಬಹು ಅಪರೂಪಕ್ಕೆ ಇಲ್ಲಿ ಶಿರದ ಹಿಂದೆ ಪ್ರಭಾಮಂಡಲ ಬಳಸಿದ್ದಾರೆ. ಅಭಿಜಾತ ಶೈಲಿಯ ಕೃತಿ.

ಆರ್.ಎಸ್.ಎನ್. ರೇಖಾಚಿತ್ರಕಾರರು, ವ್ಯಂಗ್ಯಚಿತ್ರಕಾರರು ಎಂದೆಲ್ಲ ಹೇಳಿಯೂ ಅವರ ಶಿಲ್ಪರಚನೆಗಳು, ಬಹುವಾಗಿ ವ್ಯಕ್ತಿಶಿಲ್ಪಗಳು, ಅವರ ಶೈಲಿಯ ವಿಶಿಷ್ಟತೆಯನ್ನು ಒಳಗೊಂಡ ಮಹತ್ವದ ರಚನೆಗಳು. ಇವುಗಳ ರಚನೆಯಲ್ಲಿ ಆ ವ್ಯಕ್ತಿಗಳ ಬಗ್ಗೆ ಆರ್.ಎಸ್.ಎನ್. ಅವರಿಗಿದ್ದ ಗೌರವ, ಅಭಿಮಾನ, ಮೆಚ್ಚುಗೆಗಳು ಅಭಿವ್ಯಕ್ತಿ ಪಡೆದಿವೆ.





# ಅವಧೂತ ಕಲಾವಿದ ಆರ್.ಎಸ್.ಎನ್.

■ *ಪ್ರೊ॥ ಸಾ.ಕೃ. ರಾಮಚಂದ್ರರಾವ್*

**ಆರ್** ಎಸ್ಎನ್ ಅದೊಂದು ವಿಚಿತ್ರ ವ್ಯಕ್ತಿತ್ವ – ವಿಚಿತ್ರವೆಂದರೆ ವಿಶಿಷ್ಟವಾದುದು, ವೈವಿಧ್ಯಮಯವಾದುದು. ಆರ್.ಎಸ್. ನಾಯ್ಡು ಅವರದ್ದು ಬಹುಮುಖವಾದ ಪ್ರವೃತ್ತಿ. ಅವರ ಪ್ರತಿಭೆಯೋ ಪ್ರಖರವಾದದ್ದು. ಇನ್ನು ಬುದ್ಧಿಯಂತೂ ಅದೆಷ್ಟು ಹರಿತವೋ. ಅದಮ್ಯವಾದ ಚೇತನ. ಬದುಕಿನ ಎಂಬತ್ತು ವರ್ಷಗಳುದ್ದಕ್ಕೂ (೧೯೦೬–೧೯೮೫) ಬವಣೆಯೇ; ನೆಮ್ಮದಿಯೆಂಬುದನ್ನು ಕನಸಿನಲ್ಲಿಯೂ ಕಂಡರಿಯಲಿಲ್ಲ. ಓದುವಾಗ, ಬೆಳೆಯುವಾಗ ಊರೂರು ಅಲೆದಾಟ; ಹರೆಯದಲ್ಲಿ ರಾಜಕಾರಣ, ಕ್ರಾಂತಿ, ಸ್ವಾತಂತ್ರ್ಯಸಂಗ್ರಾಮ. ಕಾಂಗ್ರೆಸ್ಸೋ, ಸೋಶಿಯಲಿಸ್ಟೋ, ಕಮ್ಯುನಿಸ್ಟೋ, ಗಾಂಧಿವಾದವೋ ಹತ್ತು ಹದಿನಾರು ಕಡೆ ಸೆಳೆತ. ಸೆರೆಮನೆ ಬೇರೆ, ತಲೆ ತಪ್ಪಿಸಿಕೊಂಡು ಹೋಗಬೇಕಾದ ಆತಂಕ. ಅದು ಹೇಗೋ ಈ ನಡುವೆ ಕಲೆಯ ಗೀಳು. ಲಂಡನ್ನಿನಲ್ಲಿ ಸುಪ್ರಸಿದ್ಧ ಚಿತ್ರಕಾರ ಡೇವಿಡ್‌ಲೋ ಸಂಪರ್ಕ; ಆಗಿನ ಕಲಾ ಪ್ರಕಾರಗಳು, ಪ್ರಯೋಗಗಳು.

ಜೊತೆ ಜೊತೆಗೇ ಮನಸ್ಸಿನ ವಿಚಾರ. ತನ್ನನ್ನು ಯಾರೋ ಬೆನ್ನಟ್ಟಿದ್ದಾರೆ, ಹಿಡಿದು ಕಾಡಬೇಕೆಂದು ಕಾಯುತ್ತಿದ್ದಾರೆ ಎಂಬ ಕಳವಳ. ಭೀತಿ, ಭ್ರಾಂತಿ, ಕಡೆಯವರೆಗೂ ಇದು ಕದಲಲೇ ಇಲ್ಲ. ಈ ಹುಚ್ಚ ಮನಸ್ಸಿನದೂ ಹತ್ತು ಮುಖಗಳೇ. ಪ್ರತಿಭೆಯಿದ್ದಿತಾದರೂ ಅದು ತೋರಿಕೊಂಡದ್ದು ವಿಕೃತ ರೂಪಗಳಲ್ಲೇ. ಬದುಕಿನಲ್ಲೇ ಓರೆ, ಕೋರೆ; ವಕ್ರ; ವಿಪರೀತ; ಬದುಕಿನಲ್ಲಿ ಇದು ಹಾಸುಹೊಕ್ಕಾಗಿ ಬಂದ ಮೇಲೆ ಕಲೆಯಲ್ಲಿ ಕಾಣಿಸಿಕೊಳ್ಳದೆ ಇರುತ್ತದೆಯೇ? ಗೆಳೆಯರ ಗುಂಪಾದರೂ ಒಂಟಿಬಾಳೇ, ತಾನಾಯಿತು, ತನ್ನ ಕಲೆಯಾಯಿತು, ತನ್ನ ಕಳವಳವಾಯಿತು. ಬಗೆ ಬಗೆಯ ಬೇನೆಗಳೂ ಬಂದಡರಿದವು. ಬಡತನವಂತೂ ಕೈಬಿಡಲಿಲ್ಲ.

ಆದರೆ ಯಾವುದಕ್ಕಾದರೂ ಸೋಲುವ ಆಸಾಮಿಯೇ? ಯಾರಿಗಾದರೂ ಬಗ್ಗುವ ಕುಳವೇ? ತನ್ನತನವನ್ನು ಎಷ್ಟು ಮಾತ್ರಕ್ಕೂ ಬಿಟ್ಟುಕೊಡಲಿಲ್ಲ? ಯಾವುದಕ್ಕೂ ಒತ್ತೆಯಿಡಲಿಲ್ಲ. ಊಟಕ್ಕೆ ಇಲ್ಲವಾದರೂ ಉತ್ಸಾಹಕ್ಕೇನು ಕೊರತೆಯಿಲ್ಲ! ಔದಾರ್ಯ, ಸ್ವಾತಂತ್ರ್ಯ ಪ್ರೀತಿ, ಕಲಾನಿಷ್ಠೆ, ಚಿಂತನೆ ಇವುಗಳೇನು ಸೊರಗಲಿಲ್ಲ.

ಕಲೆಯ ಗೀಳು ಅವರ ಬಾಳಿಗೆ ಅಂಟಿಕೊಂಡು ಬಂದದ್ದು ಕೊನೆ ತನಕ ಬಿಡಲಿಲ್ಲ. ರೇಖಾಚಿತ್ರಗಳು, ಶಿಲ್ಪ (ಜೇಡಿಮಣ್ಣು, ಪ್ಲಾಸ್ಟರ್ ಆಫ್ ಪ್ಯಾರಿಸ್) ವರ್ಣಚಿತ್ರ, ವ್ಯಂಗ್ಯಚಿತ್ರ, ಪುಸ್ತಕ ಚಿತ್ರಣ, ವ್ಯಕ್ತಿಚಿತ್ರ, ರೂಪಶಿಲ್ಪ ಹೀಗೆ ಹಲವು ಪ್ರಕಾರಗಳಲ್ಲಿ ಸಿದ್ಧಹಸ್ತರು. ಎಲ್ಲಿಯೂ, ಯಾರಲ್ಲಿಯೂ ಕಲಿಯಲಿಲ್ಲ. ಯಾರ ಪ್ರೇರಣೆಯೂ ಇಲ್ಲ. ಮಾರ್ಗದರ್ಶನವಂತೂ ಮೊದಲೇ ಇಲ್ಲ. ಜೀವಕ್ಕೇ ಸಹಜವಾಗಿ ಒಲಿದು

ಬಂದದ್ದು. ಸ್ವಭಾವ ಸಿದ್ಧವಾಗಿದ್ದ ಪ್ರತಿಭೆ, ಅದಕ್ಕೆ ಒರೆಯಿಟ್ಟಂತೆ ಮಹಾಮೇಧಾಶಕ್ತಿ ಬೇರೆ. ಅಭ್ಯಾಸದ ಅಗತ್ಯವಿಲ್ಲ. ಪೂರ್ವ ಸಿದ್ಧತೆಯ ಪ್ರಯಾಸವಿಲ್ಲ. ಆಟದಂತೆ ಕಲೆ, ಬರೆದದ್ದೆಲ್ಲವೂ ಚಿತ್ರಗಳೇ.

ಆ ಗಳಿಕೆಯಲ್ಲಿ, ಯಾವುದೇ ಭಾವದ ಗುಂಗಿನಲ್ಲಿ, ಮನಸ್ಸಿನ ಒತ್ತಡವನ್ನು ತಡೆಯಲಾರದೆ ಗೀಜಿ ಬಂದ ಚಿತ್ತಾರ; ಡೂಡ್ಲ್ ಎಂಬ ಗೋತ್ರಕ್ಕೆ ಸೇರಿದ ಚಿತ್ರಗಳೇ ಹೆಚ್ಚು. ಆವೇಶದ ಅಮಲಿನಲ್ಲಿ ತಟ್ಟನೆ ಮೈವಡೆದು ಬಂದ ರೂಪಗಳು. 'ಬದುಕೇ ರೂಪ, ರೂಪವೇ ಬದುಕು' ಎಂದು ಆತ ಅನ್ನುತ್ತಿದ್ದುದುಂಟು! ಒಂದೊಂದು ರೂಪವೂ ಭಾವನಾತ್ಮಕವೇ, ಕುತೂಹಲಕಾರಿಯೇ, ಸ್ವಜನಾತ್ಮಕವೇ. ಒಮ್ಮೊಮ್ಮೆ ರೋಮಾಂಚನಕಾರಿಯೂ ಹೌದು. ಮನಸ್ಸಿಗೆ ಹೊಳೆದದ್ದು, ಒಡಲನ್ನು ಮುಟ್ಟಿದ್ದು ಒಡನೆಯೇ ರೂಪತಾಳಿ ಕೈಯಾರ ಕಾಣಿಸಿಕೊಳ್ಳುವುದು. ಅವರ ಮನಸ್ಸು ಸಾಮಾನ್ಯವಾದುದೂ ಅಲ್ಲ ಸ್ವಸ್ಥವಾದುದೂ ಅಲ್ಲ. ಹೃದಯವಂತೂ ಕಮ್ಮಾರನ ಕುಲುಮೆ; ಅಲ್ಲಿನ ಕಾವು, ಕಸಿವಿಸಿ, ಕೋಲಾಹಲಗಳನ್ನು ಚಿತ್ರಗಳಿಂದ ಊಹಿಸಿಕೊಳ್ಳಬೇಕಷ್ಟೇ. ಹೀಗಾಗಿ ಅವರ ಕೈಯಿಂದ ಹೊರ ಬಂದದ್ದೆಲ್ಲ ವಿಚಿತ್ರವೇ.

ಇನ್ನು ಹುಚ್ಚು ಹೊಳೆಯಾಗಿ ಭೋರ್ಗರೆದು ಹರಿಯುವ ಆ ಚೇತನಕ್ಕೆ ಸಂಪ್ರದಾಯದ ನಿರ್ಬಂಧವೇ? ಶೈಲಿಗಳ ಅಡ್ಡಗೋಡೆಯೇ? ನೋಡಿದವರು ಏನೆಂದಾರೆಂಬ ಅಳುಕೆ? ಅಂಜಿಕೆಯೆ? ತೋಚಿದ್ದು ಗೀಚಿದ್ದು? ಭಾರವಾಗಿದ್ದುದು ಹೊರಬಂದ ಮೇಲೆ ಹಗುರಾಯಿತು ಅಷ್ಟೆ. ಕಲೆಯ ಪ್ರಯೋಜನ ಅಷ್ಟಕ್ಕಿಂತ ಮತ್ತೇನು? ಅವರೇನು ಕಲೆಯನ್ನು ಜೀವನೋಪಾಯಕ್ಕೆಂದು ಹಿಡಿಯಲಿಲ್ಲ; ಯಾವ ಜೀವನೋಪಾಯವನ್ನೂ ಹಿಡಿಯದೆಯೇ ಎಂಬತ್ತು ವರ್ಷಗಳನ್ನು ಕಳೆದರಲ್ಲವೇ? ಮತ್ತೆ, ಯಾರನ್ನಾದರೂ ಮೆಚ್ಚಿಸಲೆಂದೂ ಕಲಾಕೃತಿಗಳನ್ನು ರಚಿಸಲಿಲ್ಲ. ಪ್ರಸಿದ್ಧಿ, ಪ್ರಚಾರ, ಪ್ರಶಸ್ತಿಗಳನ್ನಂತೂ ಅವರು ಕನಸು ಮನಸ್ಸಿನಲ್ಲಿಯೂ ಬಯಸಿರಲಿಲ್ಲ. ಉಪವಾಸವಿದ್ದು ಅವರಿಗೆ ರೂಢಿಯಾಗಿದ್ದಿತು. ಹೊಟ್ಟೆ ಹೊರೆದುಕೊಳ್ಳಬೇಕೆಂಬ ಕಾತರ ಅವರಿಗಿದ್ದಂತೆ ತೋರಲಿಲ್ಲ. ಅವರಿಗೆ ಅಷ್ಟಿಷ್ಟು ಅನುಕೂಲವಾದದ್ದು ಅವರ ಕಲೆಯಿಂದಲೇ ಎಂಬುದು ದಿಟ. ಆದರೆ ಅನುಕೂಲವಾಗಲೆಂದು ಅವರು ಕಲೆಯನ್ನು ಹಿಡಿಯಲಿಲ್ಲ.

ಹಲವು ಪ್ರಕಾರಗಳಲ್ಲಿ ಕೈಯಾಡಿಸಿದರಾದರೂ, ಅವರನ್ನು ಕಡೆಯ ತನಕ ನಡೆಸಿದ್ದು, ರೇಖಾಚಿತ್ರಣ. ಇದರಲ್ಲೊಂದು ಪಾಲು ವ್ಯಂಗ್ಯಚಿತ್ರಗಳು. ಅವರವರಿಗೆ ಬರೆದ ಪತ್ರಗಳಲ್ಲಿ, ಆಗಾಗ ಮಿತ್ರರಿಗೆ ಕಳುಹಿಸಿದ ಕರೆಯೋಲೆಗಳಲ್ಲಿ, ಶುಭಾಶಯ ಸೂಚಿಕೆಗಳಲ್ಲಿ ವ್ಯವಹಾರದ ಕಾರ್ಡುಗಳಲ್ಲಿ ಇಂಥ ಚಿತ್ರಗಳು ತಪ್ಪದೆ ಇರುತ್ತಿದ್ದುವು. ಸಂದರ್ಭದ ಚೌಕಟ್ಟನ್ನು ಕಡೆಗಾಣಿಸಿದುವೂ ಉಂಟು. ಆ ಹೊತ್ತಿಗೆ ತೋಚಿದ್ದು, ಒಡನೆಯೇ ಬರೆದದ್ದು. ಚಿತ್ರಣದ ವಿಷಯ ಏನು ಇರಬಹುದು. ಆದರೆ ಚಿತ್ರಣವಿಲ್ಲದೆ ಬರಹ ಇರಬಾರದು. ಕುಹಕವಿಲ್ಲದೆ ಚಿತ್ರವೂ ಇರಬಾರದು. ಕುಹಕವೆಂದರೆ ಚುಚ್ಚುವ ಬಿಚ್ಚುವ ಕತ್ತಿಯಲ್ಲ. ತನ್ನ ಮನಸ್ಸಿನ ತಲ್ಲಣವನ್ನು ತೋಡಿಕೊಳ್ಳುವ ಬಗೆ ಅಷ್ಟೆ. ಅದರಲ್ಲಿ ನಿಂದೆಯಾಗಲಿ, ಅಸೂಯೆಯಾಗಲಿ, ನಿರಾಶೆಯಾಗಲಿ ಏನೂ ಇರದು. ಅದೊಂದು ಆಟ ಅವರಿಗೆ,

ಅವರ ಮಾತಾಗಲೀ, ಕಲಾರಚನೆಯಾಗಲೀ ಅಂಕೆಯಿಲ್ಲದ್ದು; ಸ್ವಚ್ಛಂದವಾದುದು. ಅವರ ಬೈಗುಳಗಳಂತೆಯೇ ಚಿತ್ರಗಳು; ಮಾತಿನ ಜೋರಿನಂತೆಯೇ ಗೆರೆಗಳ ಓಟ. ಅವರ ನಿಲುವಿಲ್ಲದ ಲವಲವಿಕೆ (ಬಡತನವಿರಲಿ, ಬೇನೆಯಿರಲಿ) ಚಿತ್ರಗಳಲ್ಲೂ ಇಳಿದು ಬಂದಿತು. ಮೇಲೆ ಹೇಳಿದಂತೆ ಸಂಪ್ರದಾಯದ ನಿರ್ಬಂಧವಿಲ್ಲ. ಶೈಲಿಯ ಗೋಜಿಲ್ಲ; ಬೇರೆಯವರ ಅನುಕರಣೆಯಿಲ್ಲ. ಆದರ್ಶವಿಲ್ಲ. ತಮ್ಮದೇ ಶೈಲಿ, ತಮ್ಮದೇ ವಸ್ತು. ಇಷ್ಟಾಗಿ, ಬೇಕೆಂದು ಮಾಡಿದ ಕಲಾಕೃತಿಗಳಲ್ಲ ಅವರವು; ತಡೆಯಲಾರದೆ, ಒಳಗಿರಲಾರದೆ ಹೊರಬಂದವು. ವಿರೇಚನ ಚಿಕಿತ್ಸೆಯೆನ್ನಿ!

ಇವರ ಕೃತಿಗಳ ಸ್ವಾರಸ್ಯವನ್ನೂ ಕ್ರಮವನ್ನೂ ಕುರಿತು ವಿವೇಚನೆ ಮಾಡುವಾಗ ಪಾಶ್ಚಾತ್ಯ ಕಲಾ ಪ್ರಪಂಚದಲ್ಲಿ ಪ್ರಸಿದ್ಧರಾದ ಕೆಲವರ ಕೃತಿಗಳು ನೆನಪಿಗೆ ಬರುವುದು ಸಹಜ. ಆ ವ್ಯಕ್ತಿಗಳಿಗೂ ಅವರ ಕಲೆಗೂ ಇರುವ ನೆಂಟೂ ಇಲ್ಲಿ ಪುಸ್ತಕವಾಗುತ್ತದೆ. ಇದರೊಂದಿಗೆ ತಾಳೆಯಿಟ್ಟು ಗಮನಿಸಿದಾಗ ಆರೆಸ್ಸೆನ್ ಅವರ ವೈಶಿಷ್ಟ್ಯವೂ ಮನದಟ್ಟಾಗುತ್ತದೆ.

ನಿದರ್ಶನಕ್ಕೆ ಚಾರ್ಲ್ಸ್ ಡಾಯ್ಲನ (ತೀರಿಕೊಂಡದ್ದು ೧೮೯೩) ಚಿತ್ರಗಳನ್ನು ನೋಡಬಹುದು. ಸುಪ್ರಸಿದ್ಧ ಪತ್ತೇದಾರಿ ಕಾದಂಬರಿಕಾರ ಆರ್ಥರ್ ಕಾನನ್‌ಡಾಯ್ಲನ ತಂದೆ ಈತ; ಬದುಕನ್ನೆಲ್ಲ ಹೆಚ್ಚು ಕಡಿಮೆ ಹುಚ್ಚಾಸ್ಪತ್ರೆಯಲ್ಲೇ ಕಳೆದನಾದರೂ

ಹುಚ್ಚನೇನಲ್ಲ. ಅಪಸ್ಮಾರ ಬೇನೆಗೆ ತುತ್ತಾದ ಚಿತ್ರಕಾರ; ಕುಡಿತದ ಚಟಕ್ಕೆ ಬಲಿಯಾದವನು. ಅವನೂ ಆರೆಸ್ಸೆನ್ನರಂತೆಯೇ ತೋಚಿದಂತೆ ಗೀಚುವವನು. ಅವನು ತೀರಿಕೊಂಡು ಮೂವತ್ತು ನಲವತ್ತು ವರ್ಷಗಳು ಕಳೆದ ಮೇಲೆ, ಎಲ್ಲಿಯೋ ಅಡಗಿ ಹೋಗಿದ್ದ ಅವನ ಕಲಾಕೃತಿಗಳನ್ನು ಕಷ್ಟಪಟ್ಟು ಸಂಗ್ರಹಿಸಿ, ಸಂಪಾದಿಸಿ ಮೈಕೇಲ್ ಬೇಕರ್ ಪ್ರಕಟಿಸಿದನು. (೧೯೭೭ರಲ್ಲಿ).

ಈ ಪ್ರಕಟಣೆಯಿಂದ ತಿಳಿದುಬರುವ ಅಂಶ, ಡಾಯ್ಲನಿಗೂ ಆಗಾಗ ಮನೋವಿಕಾರದ ಹತ್ತಿರ ಹತ್ತಿರ ಹೋಗುವ ಸ್ಥಿತಿ ಬರುತ್ತಿದ್ದಿತಂತೆ. ಅಂಥ ಸಮಯದಲ್ಲಿ ಆರೆಸ್ಸೆನ್ನಿನಂತೆಯೇ ಅವನಿಗೂ ಚಿತ್ರ ಬರೆಯುವ ಗೀಳು ಹುಟ್ಟಿ ಬರೆದ ಚಿತ್ರಗಳಿವೆ. ಆರೆಸ್ಸೆನ್ನಿನಂತೆಯೇ ಚಿತ್ರಗಳನ್ನು ಕುರಿತು ಬರೆದ ವಿಚಿತ್ರವಾದ ಒಕ್ಕಣೆಗಳಿವೆ. ಅವನೂ ಪ್ರತಿಭಾಶಾಲಿಯೇ, ಮೇಧಾವಿಯೇ. ಆದರೆ ಅವನ ಕೃತಿಗಳ ಹಿನ್ನೆಲೆಯಲ್ಲಿ ಪ್ರೌಢಶಿಕ್ಷಣವಿದೆ, ಅಭ್ಯಾಸವಿದೆ, ಚಿತ್ರತಂತ್ರದ ಪರಿಚಯವಿದೆ. ಆರೆಸ್ಸೆನ್‌ಗೆ ಈ ಅನುಕೂಲವಿರಲಿಲ್ಲ. ಆದರೂ ಡಾಯ್ಲನ ಚಿತ್ರಗಳಲ್ಲಿ ಕಂಡುಬರುವ ಸ್ವಚ್ಛಂದತೆ, ರೇಖೆಗಳ ಬೀಸು, ಕಲ್ಪನೆಯ ವೈಚಿತ್ರ್ಯ, ವಿಷಯಗಳ ವೈವಿಧ್ಯ ಇವನ್ನು ಆರೆಸ್ಸೆನ್ ಚಿತ್ರಗಳಲ್ಲೂ ಕಾಣಬಹುದು.

ಆರೆಸ್ಸೆನ್ ಚಿತ್ರಗಳಲ್ಲಿ ಕಾಣುವ ರೇಖೆಗಳ ಸೊಗಸು, ಸ್ವಾರಸ್ಯ, ಸ್ಪಷ್ಟತೆ ಇವನ್ನು ಇನ್ನೊಬ್ಬ ಪ್ರಸಿದ್ಧ ಕಲಾವಿದ ಎರಿಕ್‌ಗಿಲ್ (೧೮೮೨-೧೯೪೦) ಕಂಡರಿಸಿದ ರೇಖಾಚಿತ್ರಗಳಲ್ಲೂ ಕಾಣಬಹುದು. ಇವು ಈಗ ವಿಕ್ಟೋರಿಯಾ ಆಲ್ಬರ್ಟ್ ಮ್ಯೂಸಿಯಂನಲ್ಲಿವೆ; ೧೯೬೩ರ ಪ್ರಕಟಣೆಯಲ್ಲಿ ಅಚ್ಚಾಗಿವೆ. ಆರೆಸ್ಸೆನ್‌ನಂತೆಯೇ ಇವನೂ ವ್ಯಕ್ತಿಚಿತ್ರಣ, ಪುಸ್ತಕಚಿತ್ರಣ, ಕರೆಯೋಲೆಗಳ ಅಲಂಕರಣ ಇವುಗಳನ್ನೂ ಮಾಡಿದ್ದಾನೆ. ಆದರೆ ಗಿಲ್ ಚಿತ್ರಗಳಲ್ಲಿ ಆರೆಸ್ಸೆನ್ ಚಿತ್ರಗಳಲ್ಲಿರುವಂತೆ ಪ್ರಸಂಗ ವೈವಿಧ್ಯವಿರದು, ಸಂದರ್ಭ ನಿರೂಪಣೆಯಿರದು; ಆಶುಚಿತ್ರಣವಂತೂ ಇಲ್ಲವೆ ಇಲ್ಲ. ಅವನ ಕೃತಿಗಳೆಲ್ಲ ಪ್ರಯತ್ನಪೂರ್ವಕವಾಗಿ, ಶ್ರಮವಹಿಸಿ, ಎಚ್ಚರಿಕೆಯಿಂದ ಸಿದ್ಧವಾದುವು. ಅವನೂ ಆಗಾಗ ಮನೋವಿಕಾರಕ್ಕೆ ತುತ್ತಾಗುತ್ತಿದ್ದನಾದರೂ ಕೆಥೋಲಿಕ್ ಕ್ರಿಸ್ತ ಧರ್ಮದಲ್ಲಿ ಅವನಿಗಿದ್ದ ಶ್ರದ್ಧೆಯಿಂದಾಗಿ, ವಿಕಾರದ ಮೇರೆ ಮೀರಲಿಲ್ಲ; ವ್ಯವಹಾರವೆಲ್ಲ ಹದ್ದುಬಸ್ತಿನಲ್ಲಿದ್ದಿತು. ಆರೆಸ್ಸೆನ್‌ಗೆ ಈ ತೆರನಾದ ಆಸರೆ ಯಾವುದೂ ಇರಲಿಲ್ಲವಾಗಿ ಹುಚ್ಚುಮನಸ್ಸು ಹರಿದುಹೋಯಿತು.

ಪುಸ್ತಕ ಚಿತ್ರಣ ಪ್ರಕಾರದಲ್ಲಿ ಆರೆಸ್ಸೆನ್‌ನದು ಸಿದ್ಧಹಸ್ತ. ಎರಿಕ್‌ಗಿಲ್‌ಗಿಂತ ಹತ್ತುಪಟ್ಟು ಹೆಚ್ಚು ಧ್ವನಿಗೂಡಿದವು ಇವರ ಚಿತ್ರಗಳು. ಪ್ರಸಂಗದ ಸ್ವಾರಸ್ಯವನ್ನು ನಿರೂಪಿಸಲು ರೇಖಾ ಮಾಧ್ಯಮವನ್ನು ಇವರು ಸಮರ್ಥವಾಗಿ ಬಳಸಿಕೊಂಡರು. ಹಲವಾರು ಪ್ರಕಟಿತ ಪುಸ್ತಕಗಳಲ್ಲಿ ಅವರ ರೇಖಾಚಿತ್ರಗಳು ಉಳಿದುಬಂದಿವೆ. ಇನ್ನೂ ಅನೇಕ ಚಿತ್ರಗಳು ಅಚ್ಚಿನ ಮುಖ ಕಾಣದೆ ಅಡಗಿ ಕೂತಿವೆ. ಈ ಪ್ರಕಾರದಲ್ಲಿ ಆಬ್ರೆ ಬೇರ್ಡ್ಸ್ಲೆ (೧೮೭೨-೧೮೯೮) ಎಂಬ ಪ್ರಸಿದ್ಧ ಕಲಾವಿದನ ಕೃತಿಗಳನ್ನು ಆರೆಸ್ಸೆನ್ ನೋಡಿದ್ದಿರಬೇಕು. ಲಂಡನ್ನಿನ ವಿಕ್ಟೋರಿಯಾ ಆಲ್ಬರ್ಟ್ ಮ್ಯೂಸಿಯಂನಲ್ಲಿರುವ ಈತನ ಚಿತ್ರ ಸಂಗ್ರಹ ಪ್ರಕಟವಾಗಿದೆ (೧೯೬೭ರಲ್ಲಿ). ಈತನದ್ದೂ ವಿಚಿತ್ರವಾದ ಕಲ್ಪನೆಗಳೇ; ಆದರೆ ಚಿತ್ರವೆಂದರೆ ಸಾಂಪ್ರದಾಯಿಕವಾಗಿ ಸಂಪೂರ್ಣ, ಸಿದ್ಧ ಎನ್ನಬಹುದಾದದ್ದು. ಆರೆಸ್ಸೆನ್‌ದು ಹಾಗಲ್ಲ, ಗೀಜು ಪಾಚುಗಳೇ; ಆದರೆ ಒಟ್ಟಾರೆ ತಾತ್ಪರ್ಯವೇನೋ ಸ್ಪಷ್ಟವೇ.

ಹೀಗೆಯೇ ಲಂಡನ್ನಿನ ಅದೇ ಮ್ಯೂಸಿಯಮ್‌ನಲ್ಲಿರುವ ಮಾತಿಸ್ಸೆ (೧೮೬೯-೧೯೨೭) ಎಂಬ ಕಲಾವಿದನ ಲಿಥೋಗ್ರಾಫ್ ಚಿತ್ರಗಳನ್ನೂ ಆರೆಸ್ಸೆನ್ ನೋಡಿದ್ದು, ಅವುಗಳ ಸ್ವಾರಸ್ಯವನ್ನು ಮೆಚ್ಚಿಕೊಂಡಿರುವುದು ಸಾಧ್ಯ. ಕೊಂಚಮಟ್ಟಿಗೆ ಪ್ರಭಾವಿತರೂ ಆಗಿದ್ದಿರಬಹುದು. ಆದರೆ ತನಗೆ ಸಹಜವಾದ ರೀತಿಯಲ್ಲಿ ಅಳವಡಿಸಿಕೊಂಡಿರುವುದು ಇದ್ದೀತು. ಲಿಥೋಗ್ರಾಫ್‌ಗಳಲ್ಲಿ ಪುಸ್ತಕ ಚಿತ್ರಣವೂ, ರೇಖಾಚಿತ್ರಗಳೂ ಸೇರಿವೆ. (ಇವುಗಳನ್ನು ೧೯೮೧ರಲ್ಲಿ ಮ್ಯೂಸಿಯಂನವರೇ ಪ್ರಕಟಿಸಿದ್ದಾರೆ.) ಇವನ್ನೂ ಆರೆಸ್ಸೆನ್ ಕೃತಿಗಳೊಂದಿಗೆ ಹೋಲಿಸಿ ನೋಡಬಹುದು. ಹೀಗೆ ಹೋಲಿಸಿ ನೋಡಿದಾಗಲೇ ನಮ್ಮ ಕಲಾವಿದನ ಹೆಗ್ಗಳಿಕೆಯ ಅರಿವಾಗುವುದು. ರೇಖಾಚಿತ್ರಣ, ಪುಸ್ತಕ ಚಿತ್ರಣಗಳೆರಡೂ ಪ್ರಕಾರಗಳಲ್ಲಿ ಆರೆಸ್ಸೆನ್ ಮಾತಿಸ್ಸೆಗಿಂತ ಏನೇನೂ ಕಡಿಮೆಯಿಲ್ಲ. ಆದರೆ ಆರೆಸ್ಸೆನ್ ಚಿತ್ರಗಳನ್ನು ಸಂಗ್ರಹಿಸಿರುವವರು ಯಾರು? ಪ್ರಕಟಿಸಿರುವವರು ಯಾರು?

ಆರೆಸ್ಸೆನ್ ಚಿತ್ರಗಳಲ್ಲಿ ಸ್ಥಿರವೆಂಬ ವಿಷಯಕ್ಕಿಂತ ಚಲವೆಂಬುದರ ಕಡೆಗೇ ಹೆಚ್ಚು ಗಮನ. ಓಟ, ಜಿಗಿತ, ಕುಣಿತ ಇಂಥವೆಂದರೆ ಅವನಿಗೆ ಅದೇನೋ ಒಲವು, ಹುರುಪು, ರೇಖೆಗಳು ನೇರವಾಗಿ ಬರುವುದಕ್ಕಿಂತ ಸಲೀಸಾಗಿ ಹಾವಿನಂತೆ, ಹೊಳೆಯಂತೆ ಹೊಗೆಯಂತೆ, ಗಾಳಿಯಂತೆ ಹರಿದಾಡಿ, ದುಮ್ಮಿಕ್ಕಿ ಅಲೆ ಅಲೆಯಾಗಿ ಬಳಸಿ ಮೇಲೇರಿ ಮಸೆದು ಬೀಳುತ್ತಾ

ಇರುವುದೇ ಹೆಚ್ಚು. ಮನಸ್ಸಿನ ಕಾವು ಕಲ್ಪನೆ, ದುಗುಡ, ದುಮ್ಮಾನ, ಏರು ಬೀಳುಗಳೆಲ್ಲಾ ಗೆರೆಗಳಲ್ಲಿ ಮೂಡಿಕೊಳ್ಳುವುದು, ಎಷ್ಟಾದರೂ ನೆಮ್ಮದಿಯರಿಯದ ಜೀವನವಲ್ಲವೇ?

ಹೀಗಾಗಿ ಹಳ್ಳಿಯ ಕುಣಿತ, ಜಾನಪದ ನೃತ್ಯ, ಭರತನಾಟ್ಯ, ಬಯಲಾಟ, ಮೊದಲಾದ ವಿಷಯಗಳಲ್ಲಿ ಆತನ ಪ್ರವೃತ್ತಿ ಸಹಜವಾದುದು. ಇದು ಕಷ್ಟವಾದ ಕೆಲಸವೂ ಹೌದು! ಕುಣಿತವೆಂದರೆ ಒಂದೇ ರೂಪದಲ್ಲಿ ನಮ್ಮೆದುರು ನಿಲ್ಲುವುದಲ್ಲ. ಕ್ಷಣಕ್ಷಣಕ್ಕೆ ಭಾವ, ಭಂಗಿ, ಮುದ್ರೆ ಎಲ್ಲವೂ ಬದಲಾಗುತ್ತಿರುತ್ತವೆ. ಯಾವುದೇ ಭಂಗಿ ನಮ್ಮೆದುರು ನಿಲ್ಲುವುದಲ್ಲ. ಕ್ಷಣಕ್ಷಣಕ್ಕೆ ಭಾವ, ಭಂಗಿ ಮುದ್ರೆ ಎಲ್ಲವೂ ಬದಲಾಗುತ್ತಿರುತ್ತವೆ. ಯಾವುದೋ ಭಂಗಿಯನ್ನೊ, ಭಾವವನ್ನೊ ಗೆರೆಯಲ್ಲಿ ಹಿಡಿದಿಡಬೇಕೆಂದರೆ ಸ್ಮರಣಶಕ್ತಿ, ಕಲ್ಪನಾಶಕ್ತಿ ಊಹನಾಶಕ್ತಿ ಮೂರೂ ಅಸಾಧಾರಣವಾಗಿರಬೇಕಾಗುತ್ತದೆ. ಪಾಶ್ಚಾತ್ಯ ಕಲಾವಿದರಲ್ಲಿ ಈ ಪ್ರಕಾರದಲ್ಲಿ ಸಿದ್ಧಿ ಪಡೆದವರೆಂದರೆ ಬ್ಲೇಕ್, ಯಾನೆ, ಎಲ್‌ಗ್ರೇಕೋ, ರೊದಿನ್, ದೆಗಾಸ್, ಎಮ್ಲೆನ್ ಎಟ್ಟಿಂಗ್ ಮುಂತಾದವರು. ಇವರ ಕೃತಿಗಳೊಂದಿಗೆ ಆರೆಸ್ಸೆನ್‌ನ ಕೃತಿಗಳನ್ನು ಹೋಲಿಸಿ ನೋಡಿದಾಗ ಈತನ ಪ್ರತಿಭೆಯನ್ನು ಕಂಡುಕೊಳ್ಳಬಹುದು.

ನಮ್ಮ ಭರತ ನಾಟ್ಯದಂತೆ ಅಲ್ಲಿ ಬ್ಯಾಲೆ. ಎಮ್ಲೆನ್ ಎಟ್ಟಿಂಗ್ ಬ್ಯಾಲೆಯ ಭಂಗಿಗಳನ್ನು ರೇಖಾಚಿತ್ರಗಳಲ್ಲಿ ಕಂಡಿರಿಸುವುದು ಪ್ರಸಿದ್ಧವಾಗಿದೆ. ನ್ಯೂಯಾರ್ಕಿನಿಂದ ಈ ಚಿತ್ರಗಳ ಸಂಕಲನವೊಂದು ಹೊರಬಂದಿದೆ, ೧೯೪೪ರಲ್ಲಿ. ಸೊಗಸಾದ ಭಂಗಿಗಳು, ಸೋಜಿಗವೆನಿಸುವ ಸೂಕ್ಷ್ಮ ಚಿತ್ರಣ, ಗೆರೆಗಳು ಭಾವಪೂರ್ಣವಾಗಿರುವುದು. ಇವೆಲ್ಲ ಎಟ್ಟಿಂಗಿನ ಚಿತ್ರಗಳಲ್ಲಿವೆ. ಆರೆಸ್ಸೆನ್ ಜಾನಪದ ನೃತ್ಯ, ಭರತನಾಟ್ಯಗಳನ್ನು ಚಿತ್ರಿಸುವಾಗ ಇದೇ ಬಗೆಯನ್ನು ಹಿಡಿದಿದ್ದಾರೆ. ಆದರೆ ಇವರ ಗೆರೆಗಳಲ್ಲಿರುವ ಗೆಲುವು, ಹಲವು. ಚೆಲುವು ಆತನ ರೇಖೆಗಳಲ್ಲಿಲ್ಲ; ಅವು ಸ್ವಲ್ಪ ಗಟ್ಟಿ, ಗಡಸು, ಬಿಗಿ ಎನಿಸುತ್ತವೆ. ಇವರ ಗೆರೆಗಳು ತಾವಾಗಿ ಕುಣಿಯುತ್ತವೆ. ಬಾಗಿ ಬಳುಕುತ್ತವೆ. ಯಾವುದೂ ಸೆಟೆದು ನಿಲ್ಲುವುದಿಲ್ಲ.

ಆರೆಸ್ಸೆನ್ ಬಿಡಿಸಿರುವ ರೇಖಾಚಿತ್ರಗಳ ಸಂಖ್ಯೆ ಸಾವಿರಾರು. ಅವು ಮೊದಮೊದಲು ಕೆಲವು ಪತ್ರಿಕೆಗಳಲ್ಲಿ ಸೇರಿ ಬಂದುವು. ಬಹುಮಟ್ಟಿಗೆ ಅವರ ಹಲವು ಗೆಳೆಯರಿಗೆ ಬರೆದ ಓಲೆಗಳಲ್ಲಿದ್ದು ಅವು ಒಂದೆಡೆ ದೊರಕುವುದು ಕಷ್ಟ. ಬಹುಪಾಲು ಹಾಳಾಗಿವೆ; ಹೇಳ ಹೆಸರಿಲ್ಲದೆ ಮರೆಯಾಗಿವೆ. ಉಳಿದು ಕೊಂಡಿರುವುದು ಕಡಿಮೆಯೇ. ಆತನು ಮಾಡಿದ ಶಿಲ್ಪಗಳ ಕತೆಯೂ ಇದೇ. ಶಿಲ್ಪವನ್ನೇನು ಅವರು ಬಹುವಾಗಿ ಮಾಡಲಿಲ್ಲವೆನ್ನಿ. ಬುದ್ಧ, ಬೇಂದ್ರೆ, ಲೆನಿನ್, ಕುವೆಂಪು ಹೀಗೆ ಹಲವು ಸೊಗಸಾದ ಮೂರ್ತಿಗಳನ್ನು ಮಾಡಿದ್ದರು. ಬರ್ನಾಡ್‌ಷಾನಮ ಕ್ಯೂಬಿಸ್ಟ್ ಮಾದರಿಯ ಶಿಲ್ಪ. ಇವೆಲ್ಲಾ ಎಲ್ಲಿದೆಯೋ ತಿಳಿಯದು. ಭಾವಚಿತ್ರಗಳೇನೋ ಇವೆ.

ಮೊದಲು ಜೇಡಿಮಣ್ಣಿನಲ್ಲಿ ಮಾಡಿ ಆನಂತರ ಪ್ಲಾಸ್ಟರ್ ಆಫ್ ಪ್ಯಾರಿಸ್ಸಿನಲ್ಲಿ ಅಚ್ಚು ತೆಗೆಯುವುದು ಕ್ರಮ. ಮಣ್ಣಿನಲ್ಲಿ ಮಾಡುವಾಗಲೂ ರೇಖಾ ಚಿತ್ರದಂತೆಯೇ ಓಟ, ವೇಗ; ಒಂದೆರಡು ಗಂಟೆಗಳಲ್ಲೇ ಮೂರ್ತಿ ಸಿದ್ಧ. ಅಚ್ಚು ತೆಗೆಯುವಾಗ ನನ್ನ ಕಲಾವಿದ–ಮಿತ್ರರು ದೇವಲಕುಂದ ವಾದಿರಾಜ್‌ರು ನೆರವಾಗುತ್ತಿದ್ದುದುಂಟು. ಶಿಲ್ಪವನ್ನು ಅವರು ಹೆಚ್ಚು ಮಾಡದಿದ್ದುದಕ್ಕೆ ಮುಖ್ಯ ಅದರಲ್ಲಿನ ಪರಾವಲಂಬನೆ ಮತ್ತು ಶಿಲ್ಪ ಮಾಡುವಾಗ ಸ್ವಲ್ಪವಾದರೂ ಸಂಯಮ ಹೆಚ್ಚಾಗುತ್ತದೆ. ಸಾವಧಾನವಾಗಿರಬೇಕಾಗುತ್ತದೆ, ಪಟ್ಟಾಗಿ ಒಂದೆಡೆ ಕೂಡಬೇಕಾಗುತ್ತದೆ. ಇವೆಲ್ಲಾ ಅವರ ಜೀವಕ್ಕೆ ಒಂಟದ ಗುಣಗಳು.

ವ್ಯಕ್ತಿ ಚಿತ್ರಣದಲ್ಲೂ ಅವರದ್ದು ಎತ್ತಿದ ಕೈಯೇ! ಹರೆಯದಲ್ಲಿ ಗಾಂಧೀಜಿಯವರನ್ನು ಮೆಚ್ಚಿಕೊಂಡಿದ್ದರು; ಅವರೊಂದಿಗೆ ಕೊಂಚ ಒಡನಾಟವೂ ಇದ್ದಿತು. (ಯರವಾಡ ಸೆರೆಮನೆಯಲ್ಲಿ). ಆ ಮಹಾತ್ಮನ ರೇಖಾಚಿತ್ರಗಳನ್ನು ಹತ್ತಾರು ಮಾಡಿದ್ದರು. ಹೀಗೆಯೇ ತಮಗೆ ಪರಿಚಿತವಾಗಿದ್ದ ನೆಹರೂ, ಸತ್ಯಜಿತರಾಯ್, ವೆರಿಯರ್ ಎಲ್ವಿನ್, ಆನಂದ ಕುಮಾರಸ್ವಾಮಿ ಮುಂತಾದ ಮಹನೀಯರ ಚಿತ್ರಗಳನ್ನೂ ಗೆರೆಗಳಲ್ಲಿ ಮೂಡಿಸಿದ್ದರು. ತಮ್ಮನ್ನು ತಾವೇ ಚಿತ್ರಿಸಿಕೊಂಡಿರುವುದೂ ಇದೆ; ಹಲವಾರು ಇಂಥ ಆತ್ಮ ಚಿತ್ರಣದ ತುಣುಕುಗಳು ಉಳಿದಿವೆ. ತನ್ನನ್ನೇ ತಾನು ಕಂಡುಕೊಂಡಂತೆ, ಕಾಣಿಸುವ ಈ ಪ್ರಾಮಾಣಿಕ ಅಭಿವ್ಯಕ್ತಿ ಇಲ್ಲಿ ಕಾಣಸಿಗುತ್ತದೆ.

ಇದರಲ್ಲಿ ಕೆಲವು ವ್ಯಂಗ್ಯಚಿತ್ರಗಳೂ ಇವೆ. ಕಾರ್ಟೂನ್ ಮಾದರಿಯವು. ಅವರಿಗೆ ಸುಪ್ರಸಿದ್ಧ ಕಾರ್ಟೂನಿಸ್ಟಾದ ಡೇವಿಡ್‌ಲೋ ಪರಿಚಯವಿದ್ದ ವಿಚಾರ ಮೊದಲೇ ಬಂದಿದೆ. ಡೇವಿಡ್‌ಲೋ ರಾಜಕಾರಣ ವ್ಯಕ್ತಿಗಳನ್ನೋ, ಸಾಹಿತಿಗಳನ್ನೋ

ಕುರಿತಂತೆ ಚಿತ್ರಗಳನ್ನು ತಯಾರಿಸುವಾಗ ಆ ವ್ಯಕ್ತಿಗಳನ್ನು ಎದುರು ಕೂರಿಸಿಕೊಂಡಿದ್ದರು; ಅವರ ಇರವು, ಉಡುಪು, ಮಾತುಕತೆ, ನಡೆದಾಟ, ಭಾವಭಂಗಿಗಳನ್ನೂ ಸಾವಧಾನವಾಗಿ ಗಮನಿಸುವುದು, ಟಿಪ್ಪಣಿ ಮಾಡಿಕೊಳ್ಳುವುದು ಅವರ ಕ್ರಮ – ಆರೆಸ್ಸೆನ್ ಆದರೆ ಅವರ ಚಿತ್ರಗಳಷ್ಟೇ ಪ್ರಭಾವಶಾಲಿಯಾದ ಧ್ವನಿಪೂರ್ಣವಾದ ಚಿತ್ರಗಳನ್ನು ಮಾಡಿದ್ದರೂ ಕೂಡ, ಈ ಕ್ರಮವನ್ನೇನು ಹಿಡಿಯಲಿಲ್ಲ. ವ್ಯಕ್ತಿಯನ್ನು ಒಮ್ಮೆ ನೋಡಿದರೆ ಸಾಕು, ಅವನ ವ್ಯಕ್ತಿತ್ವವನ್ನು ಮನದಟ್ಟು ಮಾಡಿಕೊಂಡುಬಿಡುವರು. ಮತ್ತೆ ನೆನಪಿನಿಂದಲೇ ಚಿತ್ರವನ್ನು ಬಿಡಿಸಿಬಿಡುವರು; ಆತ ಎದುರಿಗಿರಬೇಕಾದುದಿಲ್ಲ. ಅಂಥ ಅದ್ಭುತವಾದ ಮೇಧಾಶಕ್ತಿ ಆರೆಸ್ಸೆನ್ನನದು.

ಎದುರಿಗಿರುವ ವಸ್ತುವನ್ನು ಆದಿರುವಂತೆಯೇ ಕಾಣಿಸಿದರೆ, ವಾಸ್ತವಿಕ ಚಿತ್ರಣವಾಯಿತು. ಎಲ್ಲರಿಗೂ ಅದು ತೋರಿಕೊಳ್ಳುವಂತೆಯೇ ತನಗೂ ತೋರಿಕೊಂಡರೆ ಅದು ಸರಿ. ಆದರೆ ಕಲಾವಿದನ ಕಣ್ಣು ಬೇರೆಯಲ್ಲವೇ? ಅದರಲ್ಲೂ ಆರೆಸ್ಸೆನ್‌ನ ಚೇತನವು ಕಾಣುವ ಪರಿಯೇ ವಿಚಿತ್ರವಾದುದು. ಅದಕ್ಕೆ ವ್ಯಂಗ್ಯವೆನ್ನುವುದು ಸಹಜವೇ. ತನ್ನ ಕಾಣ್ಕೆಗೆ ತಕ್ಕ ಆಕೃತಿಯನ್ನು ನೋಡುವ ಶಕ್ತಿಯೊಂದಿಗೆ ಅಸಾಧಾರಣವಾದ ಪ್ರತಿಭೆಯೂ ಕೂಡಿಕೊಂಡ ಮೇಲೆ ಹೇಳುವುದೇನು? ಆಧುನಿಕ ಕಲೆ, ಸಾಂಪ್ರದಾಯಿಕ ಕಲೆಗಳ ನಡುವೆ ತಿಕ್ಕಾಟ ಎದ್ದಾಗ ಒದಗಿ ಬರುವ ಅನೇಕ ಪ್ರಶ್ನೆಗಳಿಗೆ ಇವರ ಚಿತ್ರಗಳು ಸಮಾಧಾನಗಳನ್ನು ನೀಡಿಯಾವು. ಕಲೆಯಲ್ಲಿ ರೂಪದ ಪಾತ್ರವೇನೆಂಬುದನ್ನು ಇವರು ತಿಳಿಸಿಕೊಟ್ಟಂತೆ ಇತರರು ತಿಳಿಸಿಕೊಟ್ಟಿರುವುದು ಕಡಿಮೆಯೇ! ರೇಖೆಗೊಂದು ಜೀವವಿದೆ. ಅದರದ್ದೆ ಪ್ರವೃತ್ತಿಗಳಿವೆ ಎಂಬುದು ಸ್ಪಷ್ಟವಾಗುವುದು ಆರೆಸ್ಸೆನ್ ಚಿತ್ರಗಳಿಂದ.

ಒಂದು ತಲೆಮಾರಿನಲ್ಲಿ ತನ್ನ ಸ್ವಂತಿಕೆಯಿಂದಲೇ, ಎಲ್ಲರ ಕಣ್ಣನ್ನು ಕುಕ್ಕುವಂತೆ ಮೆರೆದ ಕಲಾವಿದರು ಎಷ್ಟು ಮಂದಿ ಇರುತ್ತಾರೆ? ಮತ್ತೆ, ಹಣಕ್ಕಾಗಿ ಬಾಯಿಬಿಡದೆ, ಇತರರ ಮರ್ಜಿ ಹಿಡಿದು ಟೊಂಕ ಬಾಗಿಸದೆ, ಪ್ರಭಾವಶಾಲಿಗಳ ಬೆನ್ನು ಹತ್ತದೆ, ತನ್ನ ಪಾಡಿಗೆ ತಾನಿದ್ದುಕೊಂಡು ಬರೆಯುವುದು ಬೇರೆಯಲ್ಲ ಉಸಿರಾಡುವುದು ಬೇರೆಯಲ್ಲ ಎಂಬಂತೆ ಬದುಕನ್ನು ಸವೆಸಿದ ಈ ಅವಧೂತನ ಋಣವನ್ನು ನಾಡು ಹೇಗೆ ತೀರಿಸಬಲ್ಲುದು? ಮಾನವೀಯತೆಯನ್ನು ವ್ರತದಂತೆ ಹಿಡಿದು ಬದುಕಿದ ಜೀವ ಅದು: ಯಾರಿಗೂ ಎಳ್ಳಷ್ಟು ಉಪದ್ರವವನ್ನು ಕೊಡಲಿಲ್ಲ; ಯಾರಿಗೂ ಅನ್ಯಾಯ ಮಾಡಲಿಲ್ಲ. ಅವರ ರಾಷ್ಟ್ರಪ್ರೇಮ, ದೀನ ದಲಿತರ ಬಗ್ಗೆ ಅವರಿಗಿದ್ದ ದಿಟವಾದ ಅನುಕಂಪ, ಆತ್ಮವಿಶ್ವಾಸ, ದೈನ್ಯವಿಲ್ಲದ ಬಾಳುವೆ ಇವೆಲ್ಲ ಅವರ ಚಿತ್ರಗಳಲ್ಲಿ ಪಡಿಯಚ್ಚುಗೊಂಡಿವೆ.

ರಸಿಕರ ಮನೋರಂಜನೆಗಾಗಿ ಮಾತ್ರವಲ್ಲ ಕಲೆ–ಬದುಕಿನ ಮೌಲ್ಯಗಳನ್ನೂ ಅದು ಗುರುತಿಸಿ, ಕಾಣಿಸಿಕೊಡಬೇಕು. ಇದನ್ನು ಮಾಡಿ ಕೃತಾರ್ಥರಾದವರು ಆರೆಸ್ಸೆನ್. ಬದುಕಿನಲ್ಲಿ ತಾವು ಪಡೆದುಕೊಂಡದ್ದು ಬಡತನ, ಬೇನೆ, ಬೇಗೆ, ಬವಣೆಗಳೇ ಆದರೂ ತಮ್ಮ ಸಂಪರ್ಕಕ್ಕೆ ಬಂದವರಿಗೆ ತಮ್ಮ ಕಲೆಯಿಂದ ಸಂತೋಷವನ್ನೂ, ಕಲಾಭಿರುಚಿಯನ್ನೂ, ಮೌಲ್ಯಗಳ ಪರಿಚಯವನ್ನೂ ಒದಗಿಸಿದರೆಂದ ಮೇಲೆ ಕೃತಾರ್ಥರಲ್ಲದೆ ಮತ್ತೇನು? ಇಂಥ ಕಲಾವಿದನ ಕೈಂಕರ್ಯದಲ್ಲಿ ವೈಶಿಷ್ಟ್ಯವೂ ಒಂದಿದೆ. ಅದು ಸಂಸ್ಕೃತಿಗೆ ನೇರವಾಗಿ ಸಂಬಂಧಿಸಿದ್ದು. ಅದೇನೆಂದರೆ ಕಲೆಯಲ್ಲಿರಬೇಕಾದ ಪ್ರಾಮಾಣಿಕತೆ, ಸೃಜನಾತ್ಮಕತೆ, ಸ್ವಚ್ಛಂದತೆ, ಕಲೆಯ ಹಿಂದಿರುವ ಕಲ್ಪನೆಗಳು ವ್ಯಕ್ತಿಯ ಶ್ರದ್ಧೆ – ನಿಷ್ಠೆಗಳನ್ನವಲಂಬಿಸಿರಬೇಕು. ವ್ಯಕ್ತಿತ್ವ ಹಿರಿದಾಗಿದ್ದರೆ ಅವನ ಕಲೆಯೂ ಹಿರಿದಾಗಬಲ್ಲುದು.

*(ಕನ್ನಡ ಪ್ರಭ, ೧೫–೮–೧೯೯೯)*





# ಕರ್ನಾಟಕ ಕಂಡ ವಿಚಿತ್ರ ಚಿತ್ರಕಾರ ಆರ್.ಎಸ್.ಎನ್.

■ *ಪ್ರೊ॥ ಸಾ.ಕೃ. ರಾಮಚಂದ್ರರಾವ್*

**ಕ**ಲಾವಿದರ ಜಾಯಮಾನಗಳು ಬೇರೆ ಬೇರೆ. ಅವರ ಜಾತಕಬಲಗಳಾಗಲಿ, ಫಲಗಳಾಗಲಿ ಬೇರೆ ಬೇರೆಯೇ. ಅವರವರ ಕಲ್ಪನಾವಿನ್ಯಾಸ ಅವರವೇ. ಪ್ರತಿಭೆಯೂ ಏಕಪ್ರಕಾರವಾಗಿರುವುದಿಲ್ಲ. ಪ್ರತಿಭೆಯ ಅಭಿವ್ಯಕ್ತಿಗೆ ಅವಕಾಶಗಳೂ ವಿಭಿನ್ನವಾದುವೇ. ಕಲಾವಿದರಿಗೆ ಹೆದ್ದಾರಿ ಒಂದೇ ಎನ್ನುವಂತಿಲ್ಲ. ಹೆದ್ದಾರಿಗಳಿದ್ದರೂ ಅವರು ಬಹುಮಟ್ಟಿಗೆ ಹಿಡಿಯುವುದು ಕಾಲುದಾರಿಗಳನ್ನೇ. ಅವರ ನೋಟ, ನುಡಿ, ನಡೆ, ನಲಿವು, ನೋವುಗಳು ಸುಲಭವಾಗಿ ಪತ್ತೆಗೆ ಸಿಗುವಂಥವಲ್ಲ.

ಕೆಲವು ಕಲಾವಿದರು ಶಾಲೆಯಲ್ಲಿ ಕಲಿತು ಮಟ್ಟಿಯಲ್ಲಿ ಪಳಗಿ, ತಿದ್ದಿ, ತೀಡಿ, ತಿಣುಕಾಡಿ ಕಲೆಯನ್ನು ಕೈವಶ ಮಾಡಿಕೊಳ್ಳುವರು, ಅವರವರ ಯೋಗ್ಯತೆಗೆ ತಕ್ಕಂತೆ. ಇನ್ನು ಕೆಲವರಿಗೆ ಹುಟ್ಟಿನಿಂದಲೆ ಕಲೆ ಒಲಿಯುವುದು; ಎಳೆತನದಲ್ಲೇ ಬೆಳಗುವುದು. ಆದರೆ ಬರುಬರುತ್ತಾ ಸೊರಗಿ ಹೋಗುವುದು, ಬೆಳವಣಿಗೆ ಯಾವುದೋ ಘಟ್ಟದಲ್ಲಿ ನಿಂತುಬಿಡುವುದು. ಮತ್ತೆ ಕೆಲವರ ಪಾಲಿಗೆ ಹುಟ್ಟಿನಿಂದ ಚಟ್ಟದವರೆಗೂ ಕಲೆ ಅವರನ್ನು ಕಾಯುವುದು. ಅವರ ಬದುಕು ಬೇರೆಯಲ್ಲ, ಅವರ ಕಲೆ ಬೇರೆಯಲ್ಲ, ಹೊಟ್ಟೆಪಾಡಿಗಾಗಿ ಕಲೆಯಲ್ಲ, ಆಡಂಬರಕ್ಕಲ್ಲ, ಅದ್ದೂರಿಯ ಆದರಕ್ಕಲ್ಲ. ಉಸಿರಾಡುವಂತೆಯೆ ಕಲೆ ಅವರಿಗೆ ಸಹಜ; ಬಿಡಲಾಗದ್ದು. ಮೂರನೆಯ ವರ್ಗದವರೀಗ ದಿಟವಾದ ಕಲಾವಿದರು. ಕಲಾಭಿವ್ಯಕ್ತಿಯೇ ಅವರ ವ್ಯಕ್ತಿತ್ವ.

ಈ ವರ್ಗಕ್ಕೆ ಸೇರಿದ ಕೆಲವು ಕಲಾವಿದರ ಪರಿಚಯ ನನಗೆ ಒದಗಿರುವುದು ನನ್ನ ಪುಣ್ಯವೆನ್ನಬೇಕು. ಇವರಲ್ಲೂ ಬೇರೆ ಬೇರೆ ಬಗೆಗಳೇ. ವೆಂಕಟಪ್ಪನವರದ್ದು ಒಂದು ದಾರಿಯಾದರೆ ಮನೀಷಿ ದೇಯದು ಇನ್ನೊಂದು. ರುವಾಲೆ ಚೆನ್ನಬಸವಯ್ಯನವರದ್ದು ಒಂದು ಪಟ್ಟಾದರೆ ಹರಿರಾವ್ ಇನಾಮತಿಯವರದ್ದಿನ್ನೊಂದು. ಕುಕ್ಕೆಯದೊಂದು ಪರಿಯಾದರೆ ಸ್ವಾಮಿಯದಿನ್ನೊಂದು. ಪಾವಂಜೆಯವರದ್ದೊಂದು ಹಾದಿಯಾದರೆ ಹೆಬ್ಬಾರರದಿನ್ನೊಂದು. ವಾದಿರಾಜರ ನಿಲುವು ಒಂದಾದರೆ ಶ್ರೀನಿವಾಸಾಚಾರ್ಯರದು ಇನ್ನೊಂದು. ಹೀಗೆಯೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಆದರೆ ಇವರಲ್ಲೆಲ್ಲ ಕಣ್ಣುಕೋರೈಸುವಂತೆ ನೆನಪಿನ ಅಂಗಳದಲ್ಲಿ ಎದ್ದು ನಿಲ್ಲುವವರು ಆರೆಸ್ಸೆನ್ (ಆರ್.ಸೀತಾಪತಿ ನಾಯುಡು). ಅವರನ್ನು ಬಲ್ಲೆನೆಂದರೆ ಬಲ್ಲೆ, ಅಷ್ಟೆ; ತೀರ ಹತ್ತಿರದ ಪರಿಚಯವೇನಲ್ಲ, ಒಡನಾಟವೂ ಅಷ್ಟೇನೂ ಇಲ್ಲ.

ಆದರೆ ಮೊದಲಿನಿಂದ ಅವರ ಕಲಾ ಜೀವನವನ್ನು ಕುರಿತಂತೆ ಅದೇನೋ ಕುತೂಹಲ; ಕುತೂಹಲಕ್ಕಿಂತ ಹೆಚ್ಚಾಗಿ ಮೆಚ್ಚುಗೆ. ಜಾನಪದ ಕ್ಷೇತ್ರದಲ್ಲಿ ದುಡಿದು ಧನ್ಯರಾಗಿರುವ ಮಿತ್ರರು ಕರಾಕೃ. ಅವರಲ್ಲಿರುವ ಆರೆಸ್ಸೆನ್ ಕಲಾಸಂಗ್ರಹಕ್ಕೆ ಮಾರುಹೋದವನು ನಾನು. ಕರಾಕೃ ಈ ಕಲಾವಿದರಿಗೆ ಹತ್ತಿರದ ಸ್ನೇಹಿತರಾಗಿದ್ದವರು. ಅಭಿಮಾನದಿಂದ ಅವರು ಸಂಗ್ರಹಿಸಿಕೊಂಡಿರುವ ಕಲಾ ತುಣುಕುಗಳು ಆರೆಸ್ಸೆನ್ ಅವರ ಬದುಕಿನ ಓರೆ ನೋಟವನ್ನು, ಕೊರೆ ಕೊರಗುಗಳನ್ನೂ, ವಿಚಿತ್ರ ಚಿತ್ತವೃತ್ತಿಗಳನ್ನೂ ತಿಳಿಸಿಕೊಡುತ್ತವೆ, ಅವರ ಪ್ರತಿಭೆಯ ದಿಗ್ದರ್ಶನವನ್ನು ಮಾಡಿಸುತ್ತವೆ.

ಆರೆಸ್ಸೆನ್ ಅವರನ್ನು ಹತ್ತಿರದಿಂದ ಬಲ್ಲವರಾಗಿದ್ದ ಹಲವರನ್ನು ನಾನು ಬಲ್ಲೆ. ಅವರ ಬದುಕಿನ ಎಳೆಗಳನ್ನು, ಬೆಳವಣಿಗೆಯ ಘಟ್ಟಗಳನ್ನು, ಆಸರೆ ಅರಕೆಗಳನ್ನು ಸರಿಯಾಗಿ ತಿಳಿಸಬಲ್ಲವರು ಯಾರೂ ಇಲ್ಲ: ತಿಳಿದಿರಲೂ ಇಲ್ಲವೆಂದು ತೋರುತ್ತದೆ. ಅವರ ಅಣ್ಣ ಜಗಪತಿ ನಾಯುಡು ಅವರ ಪರಿಚಯ ನನಗಿದ್ದಿತು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಭೂವಿಜ್ಞಾನದ ಪ್ರಾಧ್ಯಾಪಕರಾಗಿದ್ದವರು. ತುಂಬ ಶಿಸ್ತಿನ ಮನುಷ್ಯ. ಪಾಂಡಿತ್ಯವಾಗಲಿ, ಬೋಧನೆಯಾಗಲಿ ಎತ್ತಿದ ಕೈ. ಇವರ ನಿರೀಕ್ಷೆಯ ಒರೆಗಲ್ಲಿಗೆ ಇವರ ತಮ್ಮ ಸೀತಾಪತಿ ಸಮಾಧಾನವನ್ನು ತಂದಿರುವಂತೆ ಕಾಣಲಿಲ್ಲ. ತಮ್ಮನ ವಿಚಾರವಾಗಿ ಪ್ರೀತಿಯಿದ್ದಿತಾದರೂ ಮೆಚ್ಚುಗೆಯಿದ್ದಿತೆಂದು ಹೇಳಲಾರೆ. ಸಾಧ್ಯವಾದಷ್ಟು ಆಸರೆಯನ್ನೇನೋ ನೀಡಿದರೆನ್ನಿ. ಪಿಂಗಾಣಿ ಉದ್ಯಮದ ಪಿ. ಹರಿಹರನ್ ಕಲಾಪೋಷಕರು; ಆರೆಸ್ಸೆನ್ ಕಲೆ ಶಿಲ್ಪದಲ್ಲಿ ಮೂಡಲು ಬಹುಮಟ್ಟಿಗೆ ಕಾರಣರಾದರು. ಹೀಗೆಯೇ ನಾಲ್ಕಾರು ಮಂದಿ ಕಲಾಭಿಮಾನಿ ಮಿತ್ರರು ಅವರಿಗೆ ನೆರವಾದರು. ಆದರೆ ಯಾರಿಗೂ ತೆರೆದ ಪುಸ್ತಕವಲ್ಲ ಅವರ ಬದುಕು.

ಹುಟ್ಟಿದ್ದು ಬೆಂಗಳೂರಂತೆ; ಹುಟ್ಟಿದ ದಿನ ೧೯೦೬ ಆಗಸ್ಟ್ ೨೭ರಂದು ಎಂದು ವಿವರವಿದೆ. ಎಳೆತನವನ್ನು ಕಳೆದದ್ದು ತಿರುಚಿರಪಳ್ಳಿ. ಶಾಲೆಯಲ್ಲಿ ಕಲಿತದ್ದು ಬೆಂಗಳೂರು, ಧಾರವಾಡ, ಪುಣೆಗಳಲ್ಲಿ. ಆನಂತರ ಇಂಗ್ಲೆಂಡಿಗೆ ಹೋದದ್ದು; ರಾಜಕಾರಣದಲ್ಲಿ ಧುಮುಕಿ ಸೆರೆಮನೆಯ ಅನುಭವವನ್ನು ಪಡೆದುಕೊಂಡದ್ದು. ವಾಮಪಂಥಕ್ಕೆ ಒಲಿದು ಜೋಶಿ, ಅಧಿಕಾರಿ, ರಣದಿವೆ, ಬಸು ಮೊದಲಾದ ಕಮ್ಯುನಿಸ್ಟ್ ಧುರೀಣರೊಂದಿಗೆ ಒಡನಾಟ. ಬಡವರ, ದಲಿತರ, ಸಂತ್ರಸ್ತರ ಅಳಲಿಗೆ ಧಾರಾಳವಾಗಿ ಮಿಡಿದ ಒಡಲು. ನಡುವೆ ಭೂತಚೇಷ್ಟೆಯೋ, ಬೇತಾಳಬಾಧೆಯೋ, ಬುದ್ಧಿಭ್ರಮಣೆಯೋ. ಹಿಡಿದ ದಾರಿ ಹಲವಾದರೂ, ನೆಲೆಯೆಲ್ಲಿಯೂ ಇರದು. ರಾಜಕಾರಣದಲ್ಲಿ ಗಾಂಧೀಜಿಯವರೊಂದಿಗೆ ಸಂಪರ್ಕವಿದ್ದಿತು; ಸ್ವಾತಂತ್ರ್ಯ ಸಮರದಲ್ಲಿಯೂ ಪಾಲ್ಗೊಂಡಿದ್ದರು. ಆದರೆ ರಾಜಕಾರಣಿಯಾಗಿ ಮುಂದುವರೆಯಲಿಲ್ಲ. ಮಾರ್ಕ್ಸ್‌ವಾದವನ್ನು ನೆರೆನಂಬಿದ್ದರೂ ಕಮ್ಯುನಿಸ್ಟ್ ಆಗಲಿಲ್ಲ. ಪತ್ರಿಕಾ ವ್ಯವಸಾಯದಲ್ಲಿ ಅಡಿಯಿಟ್ಟರಾದರೂ ಅಲ್ಲಿಯೇ ಉಳಿದುಕೊಳ್ಳಲಿಲ್ಲ. ಅಶೋಕ ಮೆಹತಾ, ಮಿನೂ ಮಸಾನಿಯಂಥ ಹಿರಿಯರ ಪರಿಚಯವಿದ್ದಿತಾದರೂ ಸ್ವಾರ್ಥವನ್ನು ಸಂಪಾದಿಸಿಕೊಳ್ಳಲಿಲ್ಲ. ಹೀಗೆ ಅದೊಂದು ವಿಚಿತ್ರಜೀವ. ಹತ್ತಾರು ಮಂದಿ ಹತ್ತಿರದ ಸ್ನೇಹಿತರು; ನೂರಾರು ಮಂದಿ ಅಭಿಮಾನಿಗಳು; ಆದರವನ್ನು ಸೂಸುವ ನೆಂಟರಿಷ್ಟರು. ಇಷ್ಟಾದರೂ ಒಂಟಿ ಜೀವಿ. ಮದುವೆಯಾಗಲಿಲ್ಲ; ಯಾರ ಹಂಗಿಗೂ ಒಳಗಾಗಲಿಲ್ಲ. ಹಾಗೆಂದು ಕಾಮಾಚಾರವಿಲ್ಲ. ಹತ್ತಿಸಿಕೊಂಡ ವ್ಯಸನ ಧೂಮಪಾನವೊಂದೇ. ಸ್ವಯಂಪಾಕಿ ಬೇರೆ. ಬಹುಕಾಲ ಬೆಂಗಳೂರಿನಲ್ಲೇ ಇದ್ದು ಇಲ್ಲಿ ಅಭಿಮಾನಿಗಳ ಬಳಗ ಬೆಳೆಯಿತಾದರೂ, ಕಡೆಗೆ ಬಯಸಿ ಹೋದದ್ದು ಮೈಸೂರಿಗೆ. ಅದೂ ಮೈಸೂರಿನ ಊರಾಚೆ ಕೆಸರೆಯೆಂಬ ಕೊಂಪೆಯಲ್ಲಿ; ಇದೇ ಮುಂದೆ ರಾಜೇಂದ್ರ ನಗರವೆಂದು ಮೆರೆಯುವಂತಾಯಿತೆನ್ನಿ. ಇಲ್ಲಿ ಕೂಲಿಗಾರರಿಗೆಂದೇ ಕಟ್ಟಿಸಿದ ಗುಡಿಸಿಲಿನಂತಹ ಸಣ್ಣ ಮನೆಯೊಂದನ್ನು ಬಾಡಿಗೆಗೆ ಕೊಂಡು, ಎಲ್ಲರಿಂದ ದೂರವಾಗಿಬಿಟ್ಟರು (೧೯೫೭ರಿಂದ).

ಆದರೇನು ನೆಮ್ಮದಿಯೇ? ನೆಮ್ಮದಿಯನ್ನೇನೋ ಬಯಸಿದರು ದಿಟ; ಆದರದು ಹಗಲುಗನಸಾಗಿಯೇ ಉಳಿಯಿತು. ಬದುಕಿನುದ್ದಕ್ಕೂ ಬವಣೆಗಳು. ಬಗೆಬಗೆಯ ರೋಗಗಳು ಎಡೆಬಿಡದೆ ಕಾಡಿದವು; ಆಸ್ಪತ್ರೆಯಲ್ಲೇ ಮನೆಯೆಂಬಂತೆ ಬಹುಕಾಲ ಬಿಡಾರ ಮಾಡಬೇಕಾಯಿತು. ಊಟಕ್ಕಿಂತ ಹೆಚ್ಚು ಔಷಧವನ್ನೇ ಸೇವಿಸಬೇಕಾಯಿತು. ಅವರನ್ನು ಕಾಡುತ್ತಿರುವುದು ಅರ್ಬುದ ರೋಗವೆಂದೂ ತಿಳಿಯಿತು (೧೯೬೮ರಲ್ಲಿ). ಇದು ಹಿಡಿದದ್ದು ಅವರ ಕರುಳಿಗೆ. ಹಾಗೂ ಹೀಗೂ, ಇದ್ದವನಲ್ಲ ಹೋದವನಲ್ಲ ಎಂಬಂತೆಯೇ, ಎಂಬತ್ತು ವರ್ಷಗಳನ್ನು ಕಳೆದು ೧೯೮೫ರ ಅಕ್ಟೋಬರ್ ಆರರಂದು, ಮೈಸೂರಿನ ಮಿಶನ್ ಆಸ್ಪತ್ರೆಯಲ್ಲಿ ಕಣ್ಣು ಮುಚ್ಚಿದರು.

ಪುಣೆಯ ಫರ್ಗ್ಯುಸನ್ ಕಾಲೇಜಿನಲ್ಲಿ ಓದುತ್ತಿರುವಾಗ, ಮನೆಯವರ ಆಶಯ ಇದ್ದುದು ಇವರು ವಕೀಲಿವೃತ್ತಿಯನ್ನು ಹಿಡಿಯಲೆಂದು. ಆದರೆ ಇವರು ಒಲಿದದ್ದು ಕಾಂಗ್ರೆಸ್ ಕಮ್ಯುನಿಸ್ಟ್ ಚಳವಳಿಗೆ. ಇದರ ಫಲವಾಗಿ ಮೂರು ನಾಲ್ಕು ಬಾರಿ (೧೯೩೦, ೧೯೩೪ ಮತ್ತು ೧೯೩೯ರಲ್ಲಿ) ಸೆರೆಮನೆಯನ್ನು ಸೇರಬೇಕಾಯಿತು. ಅವರ ಕಲೆಗಾರಿಕೆ ಪ್ರಕಟವಾಗಿ ತೋರಿಕೊಂಡದ್ದು ಈ ಸಂದರ್ಭದಲ್ಲೇ. ಜೊತೆ ಜೊತೆಗೇ ಮನೋವಿಕಾರವೂ ಕೂಡಿಕೊಂಡಂತೆ ಕಾಣುತ್ತದೆ. ರಾಜಕೀಯ, ಆರ್ಥಿಕ, ಸಾಮಾಜಿಕ ಅನ್ಯಾಯಗಳನ್ನು ಪ್ರತಿಭಟಿಸಲೆಂದು ವಿಡಂಬನ, ವ್ಯಂಗ್ಯ ರೇಖಾಚಿತ್ರಗಳನ್ನು ರಚಿಸತೊಡಗಿದರು. ವಾಮ ಪಕ್ಷದ ಒಲವಿನಿಂದಾಗಿ ರಷ್ಯನ್ ಜನನಾಯಕರ ಶಿಲ್ಪಾಕೃತಿಗಳನ್ನೂ ರಚಿಸಲಾರಂಭಿಸಿದರು. ಸೆರೆಮನೆಯಲ್ಲಿದ್ದಾಗಲೇ ಜೇಡಿಮಣ್ಣಿನಿಂದ ನಾಲ್ಕಡಿ ಎತ್ತರದ ಲೆನಿನ್ ಶಿಲ್ಪವೊಂದನ್ನು ಮಾಡಿದ್ದರು. ಸೆರೆಮನೆಯನ್ನು ಬಿಟ್ಟಮೇಲೆ (೧೯೩೯ರಲ್ಲಿ) ಗುಟ್ಟಾಗಿ ಮಾಸ್ಕೋ ನಗರಕ್ಕೆ ಹೊರಟದ್ದು ಉಂಟು; ಅದಾಗದೆ ಮತ್ತೆ ಸೆರೆಮನೆಯನ್ನು ಸೇರಬೇಕಾಯಿತು (೧೯೪೫ರ ವರೆಗೆ). ಈ ನಡುವೆ ಕಾಂಗ್ರೆಸ್ ಸೋಷಿಯಲಿಸ್ಟ್ ಪತ್ರಿಕೆಯಲ್ಲಿ, ನ್ಯಾಷನಲ್ ಫ್ರಂಟ್ ಮುಖಪತ್ರಿಕೆಯಲ್ಲಿ, ಪೀಪಲ್ಸ್ ವಾರ್ ಪತ್ರಿಕೆಯಲ್ಲಿ ಇವರ ವ್ಯಂಗ್ಯಚಿತ್ರಗಳು ಪ್ರಕಟವಾದವು; ಇವರ ಅಸಾಧಾರಣವಾದ ಪ್ರತಿಭೆಯನ್ನು ಗಮನಿಸಿದವರೂ ಇದ್ದರು. ಇಂಗ್ಲೆಂಡಿನ ಕೆಲವು ಪತ್ರಿಕೆಗಳಲ್ಲೂ ಇವರ ವ್ಯಂಗ್ಯಚಿತ್ರಗಳು ತೋರಿಕೊಂಡಿದ್ದುವು. ವಾಮಪಂಥದ ಆವೇಶವಿದ್ದಾಗಲೆ ಗಾರ್ಕಿ, ಟಾಲ್‌ಸ್ಟಾಯ್, ಮಯ್‌ಕೋವ್ಸ್ಕಿ ಮುಂತಾದವರ ಶಿಲ್ಪಗಳು ರೂಪುಗೊಂಡವು.

ಈ ಸೋವಿಯಟ್ ಪ್ರಭಾವ ಅವರನ್ನು ರಾಜಕಾರಣದತ್ತ ಸಮತಾವಾದದತ್ತ ಸೆಳೆಯಲಿಲ್ಲ; ರಷ್ಯಾ ದೇಶದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಪ್ರಸಿದ್ಧವಾಗಿದ್ದ ಬ್ಯಾಲೆ ಎಂಬ ನೃತ್ಯ ರೂಪಕ ಪ್ರಕಾರದತ್ತ ಸೆಳೆಯಿತು. ಈ ಕಲಾ–ಸಂಧಾನದಲ್ಲಿ ಸಂಗೀತವೂ ನರ್ತನವೂ ಒಟ್ಟಿಗೆ ಕೂಡಿಕೊಂಡು, ನರ್ತನದ ಅಂಗವಿನ್ಯಾಸಗಳೆಲ್ಲವೂ ಲಯಬದ್ಧವಾಗಿ ಗಮಕಯುಕ್ತವಾಗಿ ತೋರಿಕೊಳ್ಳುತ್ತವೆ. ರಷ್ಯನ್ ಬ್ಯಾಲೆಯ ಲೆ ಕಾರ್ ಸೆರ್, ಎಸ್‌ಕಾರ್ಟ್, ಪಾಸ್‌ಡೆಡೂ, ಶೋಪಾನಿಯಾನಾ, ಗಿಸಲ್, ಡೆಕೇಟ್ ಮುಂತಾದ ಪ್ರಕಾರಗಳಲ್ಲಿ ನರ್ತಕಿಯ ಭಂಗಿ, ಮುದ್ರೆ, ಅಭಿನಯ, ಅಂಗಹಾರ, ಒನಪು, ಒಯ್ಯಾರ, ಜಾರು, ಏರು, ಉಡಿಗೆ, ತೊಡಿಗೆ ಇವೆಲ್ಲವನ್ನೂ ರೇಖಾಚಿತ್ರಗಳಲ್ಲಿ ಒಡಮೂಡಿಸಿ ಆರೆಸ್ಸೆನ್ ನೂರಾರು ಕೃತಿಗಳನ್ನು ಹೊರಹೊಮ್ಮಿಸಿದ್ದಾರೆ. ಈ ಚಿತ್ರಣ ಸದ್ಯಃಸ್ಫೂರ್ತಿಯಿಂದಲೇ ತೋರಿಕೊಂಡವು. ಕೈಯಲ್ಲಿದ್ದ, ಕೈಗೆ ಆಗಲೆ ಸಿಗುವಂತಿದ್ದ ಲೇಖನಿಯೋ ಕುಂಚವೋ ಯಾವುದಾದರಿರಲಿ, ಒಡನೆಯೇ ರೇಖೆಗಳು ಮೂಡಿಕೊಂಡು ಸೊಗಸಾದ ಚಿತ್ರವಾಗುವುವು. ಹಿಂದಿನ ಶತಮಾನದ ಕಡೆಯ ಭಾಗದಲ್ಲಿ ಇಂಪ್ರೆಷನಿಸಂ ಪಂಥದ ಅಧ್ವರ್ಯುವೆನಿಸಿದ್ದ ಎಡ್ಗರ್ ಡಗಾ ಎಂಬ ಕಲಾವಿದ ಬ್ಯಾಲೆಯ ಚಲವಲನಗಳನ್ನು ರೇಖಾಚಿತ್ರಗಳಲ್ಲಿ ಕಂಡರಸಿ ತಾನೂ ಪ್ರಸಿದ್ಧನಾದ, ಬ್ಯಾಲೆ ನೃತ್ಯ ಪದ್ಧತಿಯನ್ನೂ ಪ್ರಸಿದ್ಧಗೊಳಿಸಿದ. ಅವನಾದ ಮೇಲೆ ಬ್ಯಾಲೆಯ ಅಂಗವಿನ್ಯಾಸಗಳ ಸೂಕ್ಷ್ಮಸಂವೇದಿಯಾದ ಚಿತ್ರಕಾರನೆಂದರೆ ನಮ್ಮ ಆರೆಸ್ಸೆನ್ ಎಂದರೆ ತಪ್ಪಲ್ಲ. ತಮ್ಮ ಸೋವಿಯಟ್ ಸಂಬಂಧಕ್ಕೆ ಇವರು ಅರ್ಪಿಸಿದ ಅಂಜಲಿಯ ಸೊಗಸನ್ನು ಅವರ ಚಿತ್ರಗಳನ್ನು ನೋಡಿಯೇ ತಿಳಿಯಬೇಕು. ಆದರೆ ಇವೆಲ್ಲವನ್ನೂ ಒಂದೆಡೆ ಕೂಡಿಡುವ ಪ್ರಯತ್ನವನ್ನು ಯಾರು ಮಾಡಿದ್ದಾರೆ?

ಆರೆಸ್ಸೆನ್ ಚಿತ್ರಶಿಲ್ಪಕಲೆಗಳನ್ನು ಎಲ್ಲಿಯೂ ಅಭ್ಯಾಸ ಮಾಡಲಿಲ್ಲ; ಯಾರ ಪ್ರಭಾವದಿಂದಲೂ ದಕ್ಕಿಸಿಕೊಳ್ಳಲಿಲ್ಲ; ಯಾವೊಂದು ಹೆಸರಾಂತ ಶೈಲಿಗೂ ಮನಸೋಲಲಿಲ್ಲ. ಈ ಕಲೆ ಅವರಲ್ಲಿ ಸ್ವಯಂಭು. ಅದನ್ನು ಸಿದ್ಧಿಸಿಕೊಳ್ಳುವ ಸಾಧನೆಯನ್ನೇನೂ ಅವರು ಕೈಗೊಳ್ಳಲಿಲ್ಲ. ಪ್ರವೃತ್ತಿಯಾಗಿದ್ದ ಕಲೆ ಎಂದೂ ಅವರ ವೃತ್ತಿಯಾಗಲಿಲ್ಲ. ಒಡಲು ಮಿಡಿದಾಗ, ತಲೆಯಲ್ಲಿ ಕಲ್ಪನೆಯ ಬಿರುಗಾಳಿ ಎದ್ದಾಗ ತಡಮಾಡದೆ ಕೈಗೆ ಇಳಿದುಬರುವುದು; ಒಳಗೆ ಒದಗಿದ ಭಾವನೆಯ ಕಾವು ಆರುವುದರೊಳಗೆ ಕೃತಿ ರಚನೆ ಮುಗಿದುಬಿಡಬೇಕು. ಅದಕ್ಕಾಗಿ ಪೂರ್ವಸಿದ್ಧತೆಯೂ ಇಲ್ಲ, ಪರಿಕರಗಳ ಪರ್ಯಾಲೋಚನೆಯೂ ಇಲ್ಲ, ಸಂವಿಧಾನದ ಸನ್ನಾಹವೂ ಇಲ್ಲ. ಇದ್ದಲ್ಲಿ, ಇದ್ದಂತೆ, ಸಿಕ್ಕಿದ ವ್ಯವಧಾನದಿಂದಲೆ, ಕಣ್ಣು ಮುಚ್ಚಿ ತೆರೆಯುವುದರೊಳಗೆ, ಒಳಗಿನ ಭಾವನೆ ಹೊರಗಣ ರೇಖಾಚಿತ್ರವಾಗಿ ಮಾರ್ಪಡುತ್ತದೆ. ಭಾವನೆಯ ಬಿರುಸು ರೇಖಾಚಿತ್ರದ ಸ್ವಾರಸ್ಯವಾಗಿ ಪರಿಣಮಿಸುತ್ತದೆ. ವಿಡಂಬನೆಯೇ, ವ್ಯಂಗ್ಯವೇ, ಹಾಸ್ಯವೇ, ಕಾರುಣ್ಯವೇ, ಭಯವೇ, ಬೀಭತ್ಸವೇ, ಪ್ರೀತಿಯೇ, ಅನುಕಂಪವೇ ಏನಾದರೂ ಅವರ ರೇಖಾಚಿತ್ರಗಳಲ್ಲಿ ಖಚಿತವಾಗಿ ಮೂಡಿಬರುವುದು.

ಒಮ್ಮೊಮ್ಮೆ ರೇಖಾಚಿತ್ರ ಬಿಡಿಸುವುದು ಅವರಿಗೊಂದು ಆಟ. ಮಿತ್ರರಿಗೋ ಪರಿಚಯದವರಿಗೋ ಪತ್ರ ಬರೆಯುವಾಗ ರೇಖಾಚಿತ್ರ ತಪ್ಪದೆ ಸೇರಿಕೊಳ್ಳುತ್ತಿದ್ದಿತು. ಪತ್ರದ ಒಕ್ಕಣೆಯ ಧಾಟಿಯನ್ನು ಹಿಡಿದು ಚಿತ್ರಗಳಿರುತ್ತಿದ್ದುದು ವಿಶೇಷ. ತಮ್ಮ

ನೋವನ್ನೂ ನಲಿವನ್ನೂ ರೇಖೆಗಳಲ್ಲೇ ತೋಡಿಕೊಳ್ಳುವ ಅದ್ಭುತ ಶಕ್ತಿ ಅವರದ್ದು. ಆಡುವ ಮಾತು, ಇಟ್ಟ ಗೆರೆ ಎರಡರಲ್ಲೂ ಅವರದ್ದು ಸಮಾನವಾದ ಸಾಮರ್ಥ್ಯ ಬಹುಮಟ್ಟಿಗೆ ಅವರು ಮಾತನಾಡಲು, ಪತ್ರ ಬರೆಯಲು, ವ್ಯಾಸಂಗ ಮಾಡಲು ಬಳಸುತ್ತಿದ್ದ ಭಾಷೆ ಇಂಗ್ಲಿಷ್; ಅದರಲ್ಲಿ ಅವರ ಪರಿಶ್ರಮ ಉತ್ತಮಮಟ್ಟದ್ದು. ಆಂಗ್ಲ ಸಾಹಿತ್ಯದ ಪರಿಶ್ರಮವೂ ಅವರಿಗೆ ವಿಶೇಷವಾಗಿಯೇ ಇದ್ದಿತು. ಬ್ರಿಟಿಷ್ ಕಲಾವಿದರನ್ನು ಅವರು ಮೆಚ್ಚಿಕೊಂಡಿದ್ದುದೂ ಉಂಟು. ಅವರು ಇಂಗ್ಲಿಷ್ ಮಹಾಕವಿ ಶೇಕ್ಸ್‌ಪಿಯರನದ್ದೊಂದು ವ್ಯಕ್ತಿಚಿತ್ರಣವನ್ನು ಜಟಿಲ ರೇಖಾವಿನ್ಯಾಸದಲ್ಲಿ ಮಾಡಿರುವುದನ್ನು ನೋಡಿದಾಗ ಇವರಿಗೆ ಆ ಕವಿಯಲ್ಲಿದ್ದ ಗೌರವಬುದ್ಧಿ ಎಷ್ಟರಮಟ್ಟಿನದೆಂದು ತಿಳಿಯುತ್ತದೆ.

ಈ ಚಿತ್ರವನ್ನೊ ಗಾಂಧೀಜಿಯ ಚಿತ್ರಣವನ್ನೋ ಅವರು ರಚಿಸುವಾಗ ತಳೆದಿದ್ದುದು ಗಂಭೀರವಾದ ನಿಲುವು. ವಿನಮ್ರತೆಯ ಮನೋಭಾವ. ಅದು ಆಟಿಕೆಯೂ ಅಲ್ಲ; ವ್ಯಂಗ್ಯವೂ ಅಲ್ಲ. ಮರ್ಯಾದೆಯೆ ಮುಪ್ಪರಿಗೊಂಡು ಸಿದ್ಧವಾದ ಕೃತಿಗಳು. ಶಿಲ್ಪದಲ್ಲಿಯೂ ಕವಿ ಬೇಂದ್ರೆಯವರದ್ದು, ಅವರವಿಂದ ಯೋಗಿಗಳದ್ದು, ರವೀಂದ್ರನಾಥ ಠಾಕೋರರದ್ದು, ಗಾರ್ಕಿಯವರದ್ದು, ಟಾಲ್‌ಸ್ಟಾಯ್‌ರವರದ್ದು, ಬುದ್ಧನದ್ದು, ಶಿವನದು – ಇವನ್ನು ನೋಡಿದಾಗ ಗಂಭೀರ, ಗೌರವ ಭಾವನೆಗಳೇ ಪ್ರಮುಖವಾಗುತ್ತವೆ. ಸಂಪ್ರದಾಯಶುದ್ಧವಾದ ವ್ಯಕ್ತಿ ಚಿತ್ರಣಕ್ಕೆ ನಿದರ್ಶನಗಳು ಇವು. ನವ್ಯವೆನ್ನಬಹುದಾದ ಪ್ರಯೋಗಶೀಲತೆಗೆ ಅವಕಾಶ ಇಲ್ಲಿಲ್ಲ. ಅದನ್ನು ಕಾಣಬೇಕಾದರೆ ಬರ್ನಾಡ್ ಷಾ (ಕ್ಯೂಬಿಸಂ) ಚಿತ್ರಣದ ಶಿಲ್ಪವನ್ನೋ ಕೈಲಾಸಂ ಅವರ ಪ್ರತಿಮೆಯನ್ನೋ ನೋಡಬೇಕು.

ವ್ಯಂಗ್ಯದ ರಚನೆಗಳಂತೂ ಬೇಕಾದಷ್ಟಿವೆ. ತಮ್ಮನ್ನೇ ತಾವು ಸೃಷ್ಟಿಸಿಕೊಳ್ಳುವಾಗಲೂ ವ್ಯಂಗ್ಯ, ವಿಡಂಬನೆ ನುಸುಳಿ ಬಂದಿವೆ. ಕನ್ನಡಿಯ ಚೌಕಟ್ಟಿನೊಳಗೆ ಕಪ್ಪಗೆ ಕಾಣಿಸಿಕೊಂಡ ತಮ್ಮದೇ ಮುಖವನ್ನು ರೇಖೆಗಳಲ್ಲಿ ಸೆರೆ ಹಿಡಿದಿಟ್ಟಿರುವುದಿದೆ. ನಿಂತ ನಿಲುವಿನಲ್ಲಿ, ಬಲಗೈ ಇಜಾರದ ಕಿಸೆಯೊಳಗೆ ಎಡಗೈ ಕೋಲನ್ನೂರಿ ಇರುವಂತೆ, ಬಾಯೊಳಗೆ ಅಡಕಿರುವ ಪೈಪ್‌ನಿಂದೆದ್ದ ಹೊಗೆ ತಮಗಿಂತ ಮೇಲೆದ್ದು ಹೋಗುತ್ತಿರುವಂತೆ ಇನ್ನೊಂದು ಚಿತ್ರಣ. ಇನ್ನೊಂದು ಚಿತ್ರಣದಲ್ಲಿ ತಾವು ಪ್ರೇತವಾಗಿ, ಮೂಳೆಗಳ ಬಲದಿಂದಲೇ ಬಲಕ್ಕೆ ಕೋಲಾಸರೆಯಿಂದ ನಡೆದು ಬರುತ್ತಿದ್ದಾರೆ. ಎಡಬದಿಯಲ್ಲಿ ದೊಡ್ಡ ಪೆಟ್ಟಿಗೆಯನ್ನು ಹಿಡಿದ ಶ್ರೀಮಂತ ಆಧುನಿಕ ಯುವಕನೊಬ್ಬ; ಪ್ರೇತವಾದ ಆರೆಸ್ಸೆನ್ ಈ ಯುವಕನ ಬಲಗೈಯೊಳಗೆ ತಮ್ಮ ಎಡಗೈಯನ್ನು ತೆಕ್ಕೆ ಹಾಕಿಕೊಂಡಿದ್ದಾರೆ. ಇಬ್ಬರೂ ಮುಂದೆ ಸಾಗಿ ಬರುತ್ತಿದ್ದಾರೆ; ಪ್ರೇತವಾದವನೊಬ್ಬ, ಜೀವಂತವಾಗಿರುವವನಿನ್ನೊಬ್ಬ. ಇಬ್ಬರಲ್ಲೂ ಇರುವ ಗೆಳೆತನವಂತೂ ಎದ್ದು ಕಾಣುತ್ತದೆ.

ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ರೋಗಿಯಾಗಿದ್ದಾಗ ಅವರು ರಚಿಸಿದ ಅನೇಕ ಕೃತಿಗಳಿವೆ; ಬಹುಮಟ್ಟಿಗೆ ಅವೆಲ್ಲ ಅವರವರಿಗೆ ಬರೆದ ಪತ್ರಗಳಲ್ಲಿ ಚಿತ್ರಣ. ಚಿತ್ರಣವನ್ನು ವಿವರಿಸಲೆಂಬಂತೆ ಕೆಲವು ಪದಗಳೋ, ಒಂದು ವಾಕ್ಯವೋ ಇರುವುದುಂಟು. ಈ ಬರಹದಲ್ಲಿನ ಮಾರ್ಮಿಕತೆ ಆಗಾಗ ದಾರುಣವಾಗಿರುತ್ತಿದ್ದಿತು. ಬಹುವೇಳೆ ಹಾಸ್ಯದ ಮಾತುಗಳು, ವ್ಯಂಗ್ಯದ ನುಡಿಗಳು, ವಿಡಂಬನೆಯ ಸೂಚನೆ. ಯಾರ ಮನಸ್ಸನ್ನೂ ನೋಯಿಸದಂತಹ ವ್ಯಂಗ್ಯ; ಯಾರನ್ನಾಗಲೀ ಅಣಕಿಸುವ ವಿಡಂಬನೆ, ವ್ಯಂಗ್ಯ ಇವರದ್ದಲ್ಲ. ತಮ್ಮ ಮನಸ್ಸನ್ನು ಮುತ್ತಿ, ತಮ್ಮ ಒಡಲನ್ನು ಕಲಕುತ್ತಿರುವ ಯಾವುದೋ ಭಯ, ಯಾವುದೋ ಕಾತರ ಇದನ್ನು ತಮ್ಮ ಚಿತ್ರ–ಬರಹಗಳಲ್ಲಿ ತೊಡಿಕೊಳ್ಳುತ್ತಿದ್ದರು ಅಷ್ಟೆ. ಹಾಗೆ ಒಳಗೆ ಬೇಡವೆನಿಸಿದ್ದನ್ನು ಹೊರಗೆ ಹಾಕದಿದ್ದರೆ ಅವರಿಗೆ ನೆಮ್ಮದಿಯಿರದು. ಇಂಗ್ಲಿಷ್‌ನಲ್ಲಿ 'ಕೆಥಾರ್ಸಿಸ್' ಎನ್ನುವಂತೆ, ವಿರೇಚನ ಕ್ರಿಯೆ ಅದು. ಒಳಗಿನ ತಳಮಳ, ಕಿರಿಕಿರಿ ಎಷ್ಟಿದ್ದಿತೋ ಯಾರು ಬಲ್ಲರು? ಒಳಬೇಗುದಿಯ ಕಾವನ್ನು ಅನುಭವಿಸಿದವರೇ ಬಲ್ಲರು.

ಅವರ ಪತ್ರ–ಚಿತ್ರಗಳಲ್ಲಿ ಚಿತ್ರಣದ್ದೂ ಪತ್ರದಷ್ಟೇ ಪ್ರಮುಖವಾದ ಪಾತ್ರ ಬರಹದ ಅರ್ಥವನ್ನು, ಇಂಗಿತವನ್ನು ಸ್ಪಷ್ಟಪಡಿಸಲು ಚಿತ್ರಣ. ಲೀಲಾಜಾಲವಾಗಿ ಮೂಡಿಬಂದ ರೇಖೆಗಳು; ಖಚಿತವಾದ ಗೆರೆ; ಸಮುಚಿತವಾದ ವಿನ್ಯಾಸ; ಅರ್ಥಪೂರ್ಣವಾದ ಆಕೃತಿ; ಭಾವದಿಂದೊಪ್ಪುವ ಭಂಗಿ. ವಾಸ್ತವಿಕತೆಗೆ ದೂರವಾದುದೇನಲ್ಲ; ಆದರೆ ಭಾವಕ್ಕೆ ಭಾವನೆಗಳಿಗೆ ಹಾಕಿದ ಹಿರಿತನದ ಮಣೆ, ಗೆರೆಗಳು ಕುದುರೆಗಳು; ಅವು ನಾಗಾಲೋಟಕ್ಕೆ ಅಣಿಯಾಗಿರುವುವೇ. ಆದರೆ ಈ ಹಾರಗುದುರೆಗಳನ್ನೇರಿ ಬರುವ ಕಲ್ಪನಾವಿಲಾಸವೇ ಚಿತ್ರಣದ ಲಕ್ಷ್ಯ. ಭಾವ ನಿರೂಪಣೆಗೆ ತಕ್ಕಂತೆ ಮತ್ತು ತಕ್ಕಷ್ಟು ಮಾತ್ರ, ರೇಖಾವಿನ್ಯಾಸ. ಇದು ಆರೆಸ್ಸೆನ್ ಅವರ ಕಲಾಕೃತಿಗಳ ಸ್ವಾರಸ್ಯ. ಕೆಲವೊಮ್ಮೆ ಸರಳವಾಗಿ ಎಳೆದ ಒಂದೆರಡೇ ಗೆರೆಗಳಲ್ಲಿ ಅತಿ ಸಮರ್ಥವಾದ

ಚಿತ್ರಣ; ಹೃದ್ಯವಾದ ಅಭಿಪ್ರಾಯದ ನಿರೂಪಣೆ. ಮತ್ತೆ ಕೆಲವು ಬಾರಿ, ಕೆದರಿದ ಸಿಕ್ಕು ಸಿಕ್ಕಾದ, ದಾರದುಂಡೆಯಂತೆ ರೇಖೆಗಳು. ಒಟ್ಟಾರೆ ಬರುವ ಚಿತ್ರವೇನೋ ಸ್ಪಷ್ಟವೇ; ಆದರೆ ಬಳಸಿದ ಸಂವಿಧಾನದಲ್ಲಿ ಗೋಜು, ಗೊಂದಲ, ಒಮ್ಮೊಮ್ಮೆ, ಭಾವಕ್ಕೆ ರಂಗುತೊಡಲೆಂಬಂತೆ ನಯವಾಗಿ ಬಣ್ಣಗಳನ್ನು ಸೇರಿಸುವರು. ಬಣ್ಣದಿಂದ ರೇಖೆಗಳ ದಾರ್ಢ್ಯಕ್ಕಾಗಲೀ ಚೆಲುವಿಗಾಗಲೀ ಒಂದಿಷ್ಟೂ ಊನ ಬರದಂತೆ ಕಾಯ್ದುಕೊಳ್ಳುವರು. ದಿಟವಾಗಿ ಕಲೆಯಿರುವುದು ರೇಖೆಗಳಲ್ಲೇ ಎಂದು ನಂಬಿದ್ದರೋ ಏನೋ.

ಅವರ ಮನೋವೃತ್ತಿಗಳಲ್ಲಿ ಮುಖ್ಯವಾದುದು ಸಾಮಾನ್ಯ ಜನಜೀವನದಲ್ಲಿ ಅವರು ಅನುಭವಿಸಿದ ತನ್ಮಯೀಭಾವ. ಬಡತನದ ಬವಣೆ ಅವರ ಹೃದಯವನ್ನು ಹಿಂಡಿದ್ದಿತು; ವಂಚಕರ ಸೋಗನ್ನು ನೋಡಿ ಬೇಸತ್ತಿದ್ದರು. ಜನರ ಕಷ್ಟಕಾರ್ಪಣ್ಯಗಳಿಗೆ ಅವರ ಅನುಕಂಪ ಮನದಾಳದಿಂದ ಚಿಮ್ಮುತ್ತಿತ್ತು. ಆದರೂ ಜನಸಾಮಾನ್ಯರ ನಿತ್ಯಜೀವನದಲ್ಲಿ ಹಾಸುಹೊಕ್ಕಾಗಿರುವ ಚೆಲುವಿನ ಪರಿಗಳನ್ನು ಅವರು ಗಮನಿಸಿದ್ದರು. ಹಳ್ಳಿಗಾಡಿನಲ್ಲಿ, ಆದಿವಾಸಿಗಳ ತಂಡದಲ್ಲಿ, ಬೇಸಾಯಗಾರರ ನಡುವೆ ಧಾರಾಳವಾಗಿ ಸೇರಿಕೊಂಡು ಬರುತ್ತಿದ್ದ ಕುಣಿತ, ಹಾಡು, ವಾದ್ಯ ಮೇಳ, ಆಟ, ಹಬ್ಬ, ಮೋಜು ಇವು ಕಲಾವಿದರಾದ ಅವರ ಹೃದಯವನ್ನು ಸೂರೆಗೊಂಡಿದ್ದುವು. ಅವನ್ನೆಲ್ಲಾ ಕುರಿತಂತೆಯೂ ನೂರಾರು ಚಿತ್ರಗಳನ್ನು ಬಿಡಿಸಿದ್ದಾರೆ. ಬಹುಮಟ್ಟಿಗೆ ಇವು ಯಾರಾದರೂ ಪುಸ್ತಕ ಪ್ರಕಾಶಕರ ಕೋರಿಕೆಗೆ ಮಣಿದು ಮಾಡಿದಂಥವು. ಹಲವು ಪುಸ್ತಕಗಳಿಗೆ ಇವರು ಸಂದರ್ಭೋಚಿತವಾಗಿ ಚಿತ್ರಗಳನ್ನು ರಚಿಸಿಕೊಟ್ಟಿದ್ದಾರೆ. ಯಾವುದಾದರೊಂದು ವೃತ್ತಾಂತವನ್ನೋ ಪ್ರಸಂಗವನ್ನೋ ಪ್ರಕರಣವನ್ನೋ ಚಿತ್ರಿಸುವಾಗ ಅದರ ಭಾವವನ್ನೂ ಸ್ವಾರಸ್ಯವನ್ನೂ ಪ್ರತಿಬಿಂಬಿಸುವಂತೆ ರೇಖಾವಿನ್ಯಾಸವಿರುತ್ತದೆ. ಚಿತ್ರವನ್ನು ನೋಡಿದ ಮೇಲೆ ಬರಹವನ್ನೋದಿದರೆ ಬರಹ ಇನ್ನಷ್ಟೂ ಹೆಚ್ಚು ರುಚಿಸುತ್ತದೆ.

ಅವರಿಂದ ಹೀಗೆ ಪುಸ್ತಕಗಳಿಗಾಗಿ ಚಿತ್ರಗಳನ್ನು ಬರೆಯಿಸಿಕೊಂಡ ಪ್ರಕಾಶಕರಲ್ಲಿ ಪ್ರಮುಖರಾದವರು ಮೇಲೆ ಹೇಳಿದ ಕ.ರಾ. ಕೃಷ್ಣಸ್ವಾಮಿ. ಕರ್ನಾಟಕ ಜಾನಪದ ಕ್ಷೇತ್ರದಲ್ಲಿ ಮೊದಲಿಂದ ದುಡಿದವರು; ಉತ್ಕಟವಾದ ಕಲಾಭಿಮಾನಿಗಳು. ಕನ್ನಡನಾಡಿನ ಅನೇಕ ಅಜ್ಞಾತ ಚಿತ್ರ ಕಲಾವಿದರ ಕೃತಿ ರಚನೆಗೆ ಪ್ರೇರಣೆಯನ್ನೋ ಪ್ರೋತ್ಸಾಹವನ್ನೋ ಇತ್ತವರು. ನಮ್ಮ ಆದಿವಾಸಿಗಳನ್ನು ಕುರಿತಂತೆ ವಿಶೇಷ ಆಸಕ್ತಿ ವಹಿಸಿದ ವೆರಿಯರ್ ಎಲ್ವಿನ್‌ನ ಬಗ್ಗೆ ಇವರದ್ದು ಎಲ್ಲಿಲ್ಲದ ಉತ್ಸಾಹ. ಅವನ ಇಂಗ್ಲಿಷ್ ಕೃತಿಗಳನ್ನು ಕನ್ನಡದಲ್ಲಿ ಪ್ರಕಟಿಸಲು ಹೆಣಗಾಡಿದವರು. ಅವರನ್ನು ಕುರಿತಂತೆಯೂ ಕೆಲವು ಪುಸ್ತಕಗಳನ್ನು ಹೊರತಂದಿದ್ದಾರೆ. ಇವುಗಳೆಲ್ಲಾ ಆರೆಸ್ಸೆಸ್ ಚಿತ್ರಗಳದ್ದೇ ಸಿಂಹಪಾಲು. ಎಲ್ವಿನ್‌ನನ್ನೂ, ಅವನು ಆದಿವಾಸಿ ಜೀವನವನ್ನು ಕುರಿತಂತೆ ಕೊಟ್ಟ ವಿವರಗಳನ್ನೂ ಆರೆಸ್ಸೆನ್ ಸೊಗಸಾಗಿ ರೇಖಾಚಿತ್ರಗಳಲ್ಲಿ ಕಂಡರಿಸಿದ್ದಾರೆ. ಆದಿವಾಸಿಗಳ ಕುಣಿತ, ಕಜ್ಜ, ಮೋಜು, ಆಟ ಎಲ್ಲವನ್ನೂ ಮನೋಜ್ಞವಾಗಿ, ವಸ್ತುನಿಷ್ಠವಾಗಿ ಚಿತ್ರಿಸಿದ್ದಾರೆ. ತಮ್ಮದೇ ಅಧ್ಯಯನವೆಂಬಂತೆ, ಪ್ರತ್ಯಕ್ಷದರ್ಶಿಯೆಂಬಂತೆ ಭಾವಚಿತ್ರಗಳನ್ನೇ. ಆದರೆ ಸ್ವತಂತ್ರ ಕೃತಿಗಳಂತೆ ಇವೆ ಚಿತ್ರಗಳು.

ಹೀಗೆಯೇ ಕರಾಕೃ, ಡಾ॥ ಆನಂದ ಕೆಂಟಿಷ್ ಕುಮಾರಸ್ವಾಮಿಯವರನ್ನು ಕುರಿತಂತೆಯೂ ಆರೆಸ್ಸೆನ್ ಅವರಿಂದ ಅನೇಕ ಚಿತ್ರಗಳನ್ನು ಬರೆಯಿಸಿದ್ದಾರೆ. ಅವು ಜನರ ಕಣ್ಣಿಗೆ ಬೀಳಲೆಂದೇ ನಾನು ಕರಾಕೃ ಅವರಿಗಾಗಿ 'ಆನಂದಕುಮಾರಸ್ವಾಮಿ' ಯೆಂಬ ಕನ್ನಡ ಪುಸ್ತಕವೊಂದನ್ನು ಬರೆದುಕೊಟ್ಟೆ. ಇದರಲ್ಲಿ ಸೇರಿಸಿರುವ ರೇಖಾಚಿತ್ರಗಳು ಭಾವಚಿತ್ರಗಳಿಗಿಂತ ಮನೋಜ್ಞವಾಗಿವೆ. ಭಾವಚಿತ್ರಗಳಲ್ಲಿ ಕಾಣಸಿಗದ ವ್ಯಕ್ತಿತ್ವ ಚಿತ್ರಣ ಇಲ್ಲಿರುವುದು ಸ್ವಾರಸ್ಯ. ಇನ್ನು ಕರಾಕೃ ಅವರ ಜಾನಪದ ಗೀತ ಸಂಗ್ರಹಕ್ಕೆಂದು ಹಲವಾರು ಚಿತ್ರಗಳನ್ನು ಬರೆದುಕೊಟ್ಟಿದ್ದಾರೆ. ಕರಾಕೃ ಹಳ್ಳಿಯ ಜನರಿಂದ ಹಾಡುಗಳನ್ನು ಹೇಳಿಸಿ ರೆಕಾರ್ಡ್ ಮಾಡಿಕೊಳ್ಳುತ್ತಿರುವ ಸಂದರ್ಭವನ್ನೂ ಆರೆಸ್ಸೆನ್ ಒಂದು ಸೊಗಸಾದ ಚಿತ್ರದಲ್ಲಿ ಹಿಡಿದಿಟ್ಟಿದ್ದಾರೆ. ಅವರಿಗೆ ತೀರ ಹತ್ತಿರದ ಸ್ನೇಹಿತರೆಂದರೆ ಕರಾಕೃ ಮತ್ತು ಚೌಡಪ್ಪ ರೆಡ್ಡಿ (ಕರ್ನಾಟಕ ಸರ್ಕಾರದ ವಾರ್ತಾ ಇಲಾಖೆಯಲ್ಲಿ ಅಧಿಕಾರಿಗಳಾಗಿದ್ದವರು). ಚೌಡಪ್ಪ ರೆಡ್ಡಿ ಆರೆಸ್ಸೆನ್ ಬುದ್ಧನ ಮುಖದ ಒಂದು ಶಿಲ್ಪವನ್ನು ಮಾಡಿಕೊಡುವಂತೆ ಕೇಳಿದ್ದರಂತೆ. ಸ್ನೇಹಕ್ಕಾಗಿ ಮಾಡಿದ ಈ ಶಿಲ್ಪ ಅದ್ಭುತವಾಗಿದೆ. ಹಾಗೆಯೇ ಕರಾಕೃ ಅವರ ಮೇಲಣ ಪ್ರೀತಿಯಿಂದ ಮಾಡಿದ ರೇಖಾಚಿತ್ರಗಳು ಸೊಗಸಾದ ಕಲಾಕೃತಿಗಳು.

ಆರೆಸ್ಸೆನ್ ಅವರ ಸ್ವಭಾವ ಯಾರ ಹಂಗಿಗೂ ಸಿಲುಕದಿರುವುದು, ಯಾರ ದಾಕ್ಷಿಣ್ಯಕ್ಕೂ ಒಳಗಾಗದಿರುವುದು, ಯಾರನ್ನೂ ತಮ್ಮ ಪ್ರಯೋಜನಕ್ಕೆ ಬಳಸಿಕೊಳ್ಳದಿರುವುದು. ಹೀಗಿದ್ದುದರಿಂದ ಅವರ ನಡೆ-ನುಡಿಗಳಲ್ಲಿ ನಿರ್ದಾಕ್ಷಿಣ್ಯ.

ಸ್ವತಂತ್ರ, ಕೆಲವೊಮ್ಮೆ ಕಟು ಪ್ರವೃತ್ತಿಯಿದ್ದಿತು. ಅವರ ಆರ್ಥಿಕ ಪರಿಸ್ಥಿತಿ ಯಾವಾಗಲೂ ಬಿಕ್ಕಟ್ಟಿನದೇ ಎನ್ನಿ. ಹೀಗಿರುವಾಗಲೂ ಯಾರ ಔದಾರ್ಯವನ್ನೂ ಅವರು ಒಪ್ಪುತ್ತಿರಲಿಲ್ಲ. ತಾವು ಚಿತ್ರಗಳನ್ನು ರಚಿಸಿ ಅವನ್ನು ಪುಸ್ತಕಗಳಲ್ಲಿ ಬಳಸಿಕೊಂಡಾಗ ಮಾತ್ರ ಅದಕ್ಕೆ ಸಂಭಾವನೆಯನ್ನು ಪಡೆದುಕೊಳ್ಳುತ್ತಿದ್ದರು; ಎಂದರೆ ವ್ಯವಹಾರದಲ್ಲಿ ಶುದ್ಧಿ. ಕರಾಕೃ ಅವರಿಂದ ಧನಸಹಾಯ ಪಡೆಯುತ್ತಿದ್ದುದು ಹೀಗೆ. ಅವರಿಂದ ಹಣ; ಹಣದ ಋಣ ತೀರಿಸಲು ಚಿತ್ರಣ. ಅವರ ಹಂಗು ಇವರಿಗಿಲ್ಲ, ಇವರ ಹಂಗು ಅವರಿಗಿಲ್ಲ. ಆದರೆ ಹಣಕ್ಕಾಗಿ ಚಿತ್ರಣವೆಂದೇನಲ್ಲ. ಅವರು ಯಾರಿಗೆ ಯಾವ ಕಾಗದ ಬರೆಯಲಿ ಅದರಲ್ಲಿ ಚಿತ್ರಣವಿದ್ದೇ ಇರುತ್ತಿತ್ತು. ಎಲ್ಲಿ ಹೋಗಲಿ ಚಿತ್ರಣವಿರದೆ ಇರಲಿಲ್ಲ. ಚಿತ್ರ ಬಿಡಿಸುವುದು ಉಸಿರಾಡುವಂತೆ ಸಹಜಕ್ರಿಯೆ. ಅದಕ್ಕೆ ಪ್ರತಿಫಲ ಬೇಕೆಂಬ ಆಸೆ ಅವರಿಗೇನೂ ಇರಲಿಲ್ಲ. ಆದರೆ ಅದೊಂದು ವೃತ್ತಿಯೂ ಆಗಿದ್ದಿತಲ್ಲ? ಚಿತ್ರ ಬಿಡಿಸುವುದನ್ನು ಬಿಟ್ಟು ಬೇರೆ ಏನನ್ನೂ ಅವರು ಮಾಡುವಂತಿರಲಿಲ್ಲ. ಬದುಕಿನ ದಾರಿಯೇ ಚಿತ್ರಕಾರರದ್ದು. ಆದರೆ ಅದನ್ನು ಎಂದೂ ವ್ಯಾಪಾರಿ ಮನೋಭಾವಕ್ಕೆ ಒಗ್ಗಿಸಿಕೊಳ್ಳಲಿಲ್ಲ. ಬೇರೆ ಯಾರನ್ನಾಗಲೀ ಶೋಷಣೆ ಮಾಡಬಾರದೆಂಬ ನೇಮ ಅವರಿಗಿದ್ದಿತು. ಅದನ್ನು ಕಡೆಯವರೆಗೂ ಪಾಲಿಸಿಕೊಂಡು ಬಂದರು. ಅವರ ಬುದ್ಧಿಭ್ರಮಣೆಯ ಸಂದರ್ಭದಲ್ಲಿ ಕೂಡ ಈ ನೇಮವನ್ನು ಅವರು ಬಿಡಲಿಲ್ಲ. ಅವರ ಕಾರಾಗೃಹ ವಾಸದ ದಿನಗಳಿಂದ ಅವರನ್ನು ಯಾವುದೊ ಭೀತಿ ಮೆಟ್ಟಿದ್ದಿತು. ಯಾರೋ ಒಬ್ಬ ಅನ್ಯಾಯಕಾರಿ ('ಕುಳ್ಳ') ತಮ್ಮನ್ನು ಹಿಂಸಿಸಲು ಹಿಂಬಾಲಿಸುತ್ತಿದ್ದಾನೆಂಬ ಭ್ರಮೆ ಅವರನ್ನು ಮತ್ತೆ ಮತ್ತೆ ಕಾಡುತ್ತಿದ್ದಿತು. ಆದರೆ ಇದು ಚಿತ್ರದ ಕಾಯಕಕ್ಕೇನು ಅಡ್ಡಿಬರಲಿಲ್ಲ, ಅವರ ವ್ಯಕ್ತಿತ್ವದ ಸಂಪನ್ನತೆಯನ್ನೂ ಸಡಿಲಗೊಳಿಸಲಿಲ್ಲ, ಇದೊಂದು ವೈಚಿತ್ರ್ಯವೇ ಸರಿ.

*(ಉದಯವಾಣಿ, ದೀಪಾವಳಿ ವಿಶೇಷಾಂಕ ೧೯೯೮)*





# ಆರೆಸ್ಸೆನ್ ಶಿಲ್ಪ

■ *ಪ್ರೊ॥ ಸಾ.ಕೃ. ರಾಮಚಂದ್ರರಾವ್*

**ಕ**ನ್ನಡ ನಾಡಿನ ಕಲಾವಿದರ ಸಾಲಿನಲ್ಲಿ ಮೊದಲ ಎಣಿಕೆಗೆ ಸಿಗುವವರು ಆರ್. (ರಂಗಸ್ವಾಮಿ) ಎಸ್. (ಸೀತಾಪತಿ) ನಾಯುಡು (೧೯೦೬–೧೯೮೫). ಅತ್ಯಂತ ಪ್ರತಿಭಾಶಾಲಿ; ಸ್ವಯಂ ಸಿದ್ಧ; ಸ್ವಯಮಾಚಾರ್ಯ ಪುರುಷ. ಅಭ್ಯಾಸದಿಂದ ಅರಳಿಕೊಂಡ ಕಲೆಯಲ್ಲ ಅವರದ್ದು; ಕಲಿಕೆಯಿಂದ ಕುದುರಿಕೊಂಡದ್ದಲ್ಲ. ಹುಟ್ಟಿನಿಂದಲೇ ಸಿದ್ಧವಾದದ್ದು; ಬದುಕಿನ ಬೇನೆ ಬವಣೆಗಳಿಂದ ಪುಟಗೊಂಡು ಬೆಳೆದದ್ದು. ಹುಚ್ಚು ಮನಸ್ಸಿನ ಹತ್ತು ಮುಖಗಳಲ್ಲಿ ಹರಡಿಕೊಂಡದ್ದು; ಅವರ ಕಲಾಕೃತಿಗಳದ್ದೇ ಒಂದು ಜಗತ್ತು; ಅದರ ಭಾಷೆಯೇ ವಿಶಿಷ್ಟ. ಅನನ್ಯಸಾಧಾರಣ ಅದು. ಅವರ ವ್ಯಕ್ತಿತ್ವದ ಛಾಪು ಅದರ ಮೇಲೆ ಸ್ಪಷ್ಟ. ಅವರ ಬದುಕು ಬೇರೆಯಲ್ಲ. ಅವರ ಕಲೆ ಬೇರೆಯಲ್ಲ. ಕಲೆಗೆ ಕುಂದಣವಿಟ್ಟಂತೆ ಮಹಾಬುದ್ಧಿಶಾಲಿಯೂ ಹೌದು.

ರೇಖಾವಿನ್ಯಾಸದ ಮಾಯಾಲೋಕ ಅವರಿಗೆ ಪ್ರಿಯವಾಯಿತು, ಅದರಿಂದ ಹಿತ ತೋರಿತು. ತಾವು ಕಂಡುಕೊಂಡ ಲೋಕವನ್ನು ರೇಖೆಗಳ ಅಂಕು–ಡೊಂಕುಗಳಲ್ಲೇ ಕಾಣಿಸಿಕೊಂಡರು, ಕಂಡರಿಸಿದರು. ತಾವು ಮೆಚ್ಚಿಕೊಂಡ ವ್ಯಕ್ತಿಗಳನ್ನು ಹಾಗೆಯೇ ಗುರುತಿಸಿದರು. ಕಲೆಗೆ ಅಂಟಿಕೊಂಡ ಜೀವವಾದರೂ ಅದು ಸಾಹಿತ್ಯಕ್ಕೆ, ಸಂಗೀತಕ್ಕೆ, ನರ್ತನಕ್ಕೆ, ರಾಜಕಾರಣಕ್ಕೆ, ಸಮಾಜ ಸುಧಾರಣೆಗೆ, ಸ್ನೇಹಕ್ಕೆ ತೆರೆದುಕೊಂಡದ್ದು. ಹೀಗಾಗಿ ಅವರ ಕುಂಚದಿಂದ ಮೈವಡೆದು ನಿಂತ ವ್ಯಕ್ತಿಚಿತ್ರಗಳಲ್ಲಿ ಸಾಹಿತಿಗಳಿದ್ದಾರೆ, ನರ್ತಕರಿದ್ದಾರೆ, ಗಾಯಕರಿದ್ದಾರೆ, ರಾಜಕೀಯ ನಾಯಕರಿದ್ದಾರೆ, ಯೋಗಿಗಳಿದ್ದಾರೆ. ಕುಂಚದಿಂದ, ಲೇಖನಿಯಿಂದ ಮೂಡಿ ಬಂದ ಚಿತ್ರಗಳು ನೂರಾರು ಇಂಥವರ ನೆನಪನ್ನು ನಮಗೆ ಉಳಿಸಿಕೊಟ್ಟಿವೆ. ಕೆಲವು ಬಣ್ಣಗಳಲ್ಲೂ ಕಾಣಿಸಿಕೊಂಡಿವೆ.

ತಾವು ಮೆಚ್ಚಿಕೊಂಡ ವ್ಯಕ್ತಿಯ ವಿಶಿಷ್ಟ ವ್ಯಕ್ತಿತ್ವವನ್ನು ಒಟ್ಟಿನಲ್ಲಿ ತಟ್ಟನೆ ಹಿಡಿಯುವುದು ಅವರ ಕಲೆಗಾರಿಕೆಯ ಸ್ವಾರಸ್ಯ. ಆ ವ್ಯಕ್ತಿತ್ವದ ನೇರವಾದ ಪರಿಚಯವನ್ನು ಗೆರೆಗಳಲ್ಲಿ, ಗೀಚುಗಳಲ್ಲಿ ಮಾಡಿಕೊಡುವುದು, ಅವರ ಜಾಣ್ಮೆ. ಹೀಗಾಗಿ ಅವರ ಚಿತ್ರಗಳನ್ನು ಸುಮ್ಮನೆ ನೋಡುವುದು ಸಾಧ್ಯವಿಲ್ಲ; ಚಿತ್ರದ ಒಳಹೊಕ್ಕು, ಕಣ್ಣಿಗೆ ಕಾಣಿಸುವ ಗೆರೆಗಳಾಚೆ ಇರುವ ಭಾವವನ್ನು ಕಂಡುಕೊಳ್ಳುವ ತವಕ ತಲೆದೋರಿಕೊಳ್ಳುತ್ತದೆ. ಚಿತ್ರದರ್ಶನವು, ಮನನಕ್ಕೆ ಎಡೆಮಾಡಿಕೊಡುತ್ತದೆ, ಭಾವಗ್ರಹಣಕ್ಕೆ ದಾರಿ ಮಾಡಿಕೊಡುತ್ತದೆ. ಅವರ ಕಲಾಕೃತಿಗಳ ಹಿಂದಿರುವ ಆಲೋಚನೆ, ಭಾವನೆ, ಅಶಾಂತಿ, ಉದ್ವೇಗ, ಆಶಯ, ಅನಿಸಿಕೆಗಳನ್ನು ಅರ್ಥಮಾಡಿಕೊಂಡಾಗಲೇ ಆರೆಸ್ಸನ್ ತಮ್ಮ ಗುಟ್ಟನ್ನು ನಮಗೆ ಬಿಟ್ಟುಕೊಟ್ಟಾರು.

ಆತ ಚಿತ್ರಕಾರನಷ್ಟೇ ಅಲ್ಲ; ಶಿಲ್ಪದಲ್ಲಿಯೂ ಸಿದ್ಧಹಸ್ತ. ಬಹುಮಟ್ಟಿಗೆ ಅವರ ಶಿಲ್ಪಗಳು ಮೊದಲು

ಮಣ್ಣಿನಲ್ಲಿ ಮೂಡಿಬಂದು, ಆನಂತರ ಪ್ಲಾಸ್ಟರ್ ಆಫ್ ಪ್ಯಾರಿಸ್ ಎರಕದಲ್ಲಿ ಮೈತುಂಬಿ ಬಂದಿರುವುವು. ಇಂಥ ಶಿಲ್ಪಕೃತಿಗಳ ಪ್ರತಿಗಳು ಇಂದಿಗೂ ಉಳಿದು ಬಂದಿರುವುದು ನಮ್ಮ ಪುಣ್ಯ. ಉಳಿದುಬಂದಿರುವುವು ಅವರ ಅನೇಕ ಮಿತ್ರರ ಬಳಿ ಇವೆ. ದೊರಕುವಷ್ಟನ್ನು ಛಾಯಾಚಿತ್ರಗಳಲ್ಲಿ ಸಂಗ್ರಹಮಾಡಿ ಉಳಿಸಿ ಕೊಂಡಿರುವವರು ಅವರಮಿತ್ರರೂ, ನನ್ನ ಮಿತ್ರರೂ ಆದ ಕ.ರಾ.ಕೃಷ್ಣಸ್ವಾಮಿ (ಕರಾಕೃ); ಜಾನಪದ ಅಕಾಡೆಮಿಯ ಒಡೆಯರು. ಅವರ ಸಂಗ್ರಹದ್ದಲಿರುವ ಕೆಲವು ಆರೆಸ್ಸೆನ್ ಶಿಲ್ಪಗಳ ಸೊಗಸನ್ನು ಸವಿಯುವ ಭಾಗ್ಯ ನನ್ನದಾಗಿದ್ದಿತು. ಅದನ್ನು ಕೊಂಚಮಟ್ಟಿಗೆ ವಿಮರ್ಶೆ ಮಾಡುವ ಕೆಲಸ ಈಗ ನನ್ನದಾಗಿದೆ.

ಚಿತ್ರಗಾರಿಕೆ ಅವರಿಗೆ ಎಳವೆಯಿಂದಲೇ ಅಂಟಿಕೊಂಡ ಹವ್ಯಾಸ. ಆದರೆ ಶಿಲ್ಪದ ಕಡೆ ಒಲವು ಬಂದದ್ದು ಅವರ ನಡು ವಯಸ್ಸಿನಲ್ಲಿ. ಅದು ಆದದ್ದು ಹೀಗೆ. ರಾಜಕಾರಣದ ಗೀಳು ಹಿಡಿದು ನಾಡಿನ ಬಿಡುಗಡೆಯ ಹಗರಣದಲ್ಲಿ ಧುಮ್ಮಿಕ್ಕಿ ಇಂಗ್ಲೆಂಡಿನಲ್ಲಿರುವಾಗ, ಪೊಲೀಸರ ಕಣ್ಣು ತಪ್ಪಿಸಿ ಮಾಸ್ಕೋ ನಗರಕ್ಕೆ ಹೊರಟು ನಿಂತಿದ್ದರು, ೧೯೩೪ರಲ್ಲಿ ಸ್ಕಾಟ್ಲೆಂಡ್‌ಯಾರ್ಡಿನ ಚಾಣಾಕ್ಷರು ಇವರನ್ನು ಸೆರೆಹಿಡಿದು ಭಾರತಕ್ಕೆ ಮರಳಿಸಿದರು. ನಾಸಿಕದ ಸೆರೆಮನೆಯಲ್ಲಿ ಐದಾರು ವರ್ಷಗಳು ಕೊಳೆಯಬೇಕಾಯಿತು. ಆಗ ಅವರ ಆದರ ರಷ್ಯದ ಕಮ್ಯುನಿಸ್ಟ್ ಪಂಥದ ಮೇಲೆ. ಬಡಬಗ್ಗರ ಉದ್ಧಾರಕ್ಕೆ ಇದೊಂದೇ ದಾರಿಯೆಂದು ಅವರ ನಿರ್ಧಾರ. ಅದಕ್ಕಾಗಿಯೇ ಅವರು ಮಾಸ್ಕೋ ಯಾತ್ರೆಗೆ ಹೊರಟದ್ದು. ಆದರೆ ನಾಸಿಕದ ಸೆರೆಮನೆಯನ್ನು ಸೇರಿದ್ದಾಗ, ಒಂದು ರಾತ್ರಿ ಇದ್ದಕ್ಕಿದ್ದಂತೆ ಏನು ತೋಚಿತೋ, ದಿಗ್ಗನೆಂದು ಸೆರೆಮನೆಯಲ್ಲಿದ್ದ ಮಣ್ಣನ್ನು ಕಲೆಹಾಕಿ ರಷ್ಯದ ನಾಯಕ ಲೆನಿನ್(೧೮೭೦-೧೯೨೪)ನ ನಾಲ್ಕಡಿ ಎತ್ತರದ ಮೂರ್ತಿಯೊಂದನ್ನು ಮಾಡಿಬಿಟ್ಟರು!

ಅಶಾಂತಿಗೆ ಇನ್ನೊಂದು ಹೆಸರು ಆರೆಸ್ಸೆನ್. ಅಶಾಂತಿಯಿಂದಾಗಿಯೇ ರಾಜಕಾರಣದಲ್ಲಿ ಅಡಿಯಿಟ್ಟಿದ್ದು; ಅಶಾಂತಿಯಿಂದಲೇ ಮನೆಯಿಂದ ದೂರ ಸರಿದದ್ದು; ಅಶಾಂತಿಯಿಂದಲೇ ಕಾಂಗ್ರೆಸ್ ಪಕ್ಷವನ್ನು ಕೈಬಿಟ್ಟು ಕಮ್ಯುನಿಸಂ ಹಿಡಿದದ್ದು; ಅಶಾಂತಿಯಿಂದಲೇ ಲಂಡನ್ ಬಿಟ್ಟು ಮಾಸ್ಕೋಗೆ ಹೊರಟು ನಿಂತದ್ದು. ನಾಸಿಕದ ಸೆರೆಮನೆಯಲ್ಲಿರುವಾಗಲೂ ಅಶಾಂತಿಯೇ. ಅವರು ಮನಃಸ್ವಾಸ್ಥ್ಯವನ್ನು ಕಳೆದುಕೊಂಡದ್ದು ಅಲ್ಲಿಯೇ, ಆಗಲೇ. ಆ ಅಶಾಂತಿಯ ಒಡಲಿನಿಂದಲೇ ಹೊರಹರಿದು ನಿಂತಿದ್ದು ಲೆನಿನ್ನನ ಮೃಣ್ಮಯ ಶಿಲ್ಪ.

ಆ ಶಿಲ್ಪ ಏನಾಯಿತೋ ಯಾರು ಬಲ್ಲರು? ಅಂತೂ ಈಗ ಚಿತ್ರಕಾರ ಶಿಲ್ಪಿಯಾದ. ಮಣ್ಣಿನಲ್ಲೇ ಲೆನಿನ್, ಸ್ಟಾಲಿನ್, ಮಾಕ್ಸಿಂ ಗಾರ್ಕಿ (೧೮೬೮-೧೯೩೬) ಇವರ ವ್ಯಕ್ತಿಚಿತ್ರಗಳು ಸಿದ್ಧವಾದವು. ಅದರದ್ದೂ ಒಂದು ಕಥೆ. ಬೆಂಗಳೂರಿನಲ್ಲಿ ಒಮ್ಮೆ ತಮ್ಮ ಮಿತ್ರ ಇ.ಆರ್. ಸೇತುರಾಮ್ ಅವರ ಮನೆಯಲ್ಲಿರುವಾಗ ಮಾತಿಗೆ ಮಾತು ಬಂದು 'ಚಿತ್ರಕ್ಕಿಂತ ಶಿಲ್ಪ ವಿಶಿಷ್ಟವಾದುದು. ಚಿತ್ರದಲ್ಲಿ ಎರಡೇ ಆಯಾಮಗಳು, ಉದ್ದ-ಅಗಲ. ಶಿಲ್ಪದಲ್ಲಾದರೆ ಮೂರನೆಯದಾದ ಆಳವೂ ಇರುತ್ತದೆ. ಅದರ ಹೆಚ್ಚುಗಾರಿಕೆಯನ್ನು ಬೇಕಾದರೆ ನಾನು ತೊರಿಸಬಲ್ಲೆ' ಎಂದು ಸವಾಲೆಸೆದರಂತೆ. ಸರಿ, ಸೇತುರಾಮರು ಅವರನ್ನು ತಮ್ಮ ಮಿತ್ರ ಪ್ರಸಿದ್ಧ ಶಿಲ್ಪಿ ದೇವಲಕುಂದ ವಾದಿರಾಜರ ಬಳಿ ಕರೆದೊಯ್ದು ಜೇಡಿಮಣ್ಣಿನ ಮುದ್ದೆಯೊಂದನ್ನು ಕೊಡಿಸಿದರು. ಮೂರೇ ಗಂಟೆಗಳಲ್ಲಿ ಗಾರ್ಕಿಯ ಪ್ರತಿಮೆಯನ್ನು ಆರೆಸ್ಸೆನ್ ಸಿದ್ಧಪಡಿಸಿಬಿಟ್ಟರು! ವಾದಿರಾಜರು ಅದರ ಪ್ಲಾಸ್ಟರ್ ಆಫ್ ಪ್ಯಾರಿಸ್ ಅಚ್ಚನ್ನೂ ತಯಾರಿಸಿಕೊಟ್ಟರು. ಅದರಿಂದ ಹಲವಾರು ಪ್ರತಿಗಳನ್ನು ತೆಗೆಯುವಂತಾಯಿತು. ಈ ಪ್ರತಿಗಳನ್ನು ಇಂದಿಗೂ ಅಲ್ಲಲ್ಲಿ ಕಾಣಬಹುದು.

ಗಾರ್ಕಿ ರಷ್ಯಾದೇಶದ ಸುಪ್ರಸಿದ್ಧ ಕಥೆಗಾರ, ಬಂಡಾಯಗಾರ, ಹೋರಾಟಗಾರ, ಅಲ್ಲಿನ ಕ್ರಾಂತಿಯಲ್ಲಿ ಇವನ ಪಾತ್ರ ದೊಡ್ಡದು. ಕಮ್ಯುನಿಸಂಗೆ ಮನಸೋತಿದ್ದ ಆರೆಸ್ಸೆನ್ ಇವನ ಶಿಲ್ಪವನ್ನು ಅಕ್ಕರೆಯಿಂದ ಮಾಡಿದರು. ಗಾರ್ಕಿಯ ವ್ಯಕ್ತಿತ್ವದಲ್ಲಿ ಹಾಸುಹೊಕ್ಕಾಗಿದ್ದ ಗಾಂಭೀರ್ಯ, ದೃಢನಿಶ್ಚಯ, ಕಷ್ಟಸಹಿಷ್ಣುತೆಗಳ ಪರಿಚಯ ಈ ಶಿಲ್ಪದಿಂದ ನಮಗಾಗುತ್ತದೆ. ಹಾಗೆಯೇ ರಷ್ಯನ್ ಕವಿ ಮೆಕೋವ್‌ಸ್ಕಿಯ ಉಬ್ಬುಶಿಲ್ಪವೂ ಸ್ವಾರಸ್ಯಕರವಾಗಿದೆ. ಅದರಲ್ಲೂ ಕ್ರಾಂತಿಯ ಕಳೆಯನ್ನು ಕಾಣಬಹುದು. ಮನೋದಾರ್ಢ್ಯವನ್ನೂ ಗುರುತಿಸಬಹುದು. ಸ್ಟಾಲಿನ್ ಶಿಲ್ಪದಲ್ಲಿ ಅವನ ಉಗ್ರತೆ ಕಾಣುತ್ತದೆ.

ಆರೆಸ್ಸೆನ್ ಸಾಹಿತ್ಯಪ್ರಿಯ. ಇಂಗ್ಲಿಷ್, ಕನ್ನಡ ಎರಡೂ ಭಾಷೆಗಳಲ್ಲಿ ಉತ್ತಮ ಸಾಹಿತ್ಯ ಗ್ರಂಥಗಳನ್ನು ಓದುವ ಹವ್ಯಾಸ ಅವರಿಗಿದ್ದಿತು. ತಾವು ಮೆಚ್ಚಿಕೊಂಡ ಸಾಹಿತಿಗಳ ಚಿತ್ರಗಳನ್ನೂ, ಶಿಲ್ಪಗಳನ್ನೂ ಮೂಡಿಸುತ್ತಿದ್ದರು. ಇಂಗ್ಲಿಷ್ ಸಾಹಿತ್ಯದ ಮಹಾಪುರುಷರಲ್ಲಿ ಬರ್ನಾರ್ಡ್‌ಷಾ (೧೮೫೬-೧೯೫೦) ಅವರಿಗೆ ಅಚ್ಚುಮೆಚ್ಚು; ಷಾ ಎಣಿಕೆಯಲ್ಲಿ ತಾನು

ಶೇಕ್ಸ್‌ಪಿಯರಿನಿಗಿಂತ ದೊಡ್ಡವನು! ಆದರೆ ಷಾ ವ್ಯಕ್ತಿತ್ವ ತುಂಬಾ ಅಂಕು-ಡೊಂಕಾದುದು. ಪ್ರತಿಭೆಯೆಷ್ಟಿದ್ದಿತೋ ಅಷ್ಟೂ ವಕ್ರತೆ! ಆರೆಸ್ಸೆನ್ ಮಾಡಿರುವ ಷಾ ಶಿಲ್ಪವನ್ನು ನೋಡಿದಾಗ ಷಾನ ವ್ಯಕ್ತಿತ್ವ ಎದ್ದು ಕಾಣುತ್ತದೆ. ಇದು ಸಹಜವಾಗಿಯೋ ಎಂಬಂತೆ ಕ್ಯೂಬಿಸ್ಟ್ ಶೈಲಿಯಲ್ಲಿದೆ. ಆಧುನಿಕ ಕಲಾ ಶೈಲಿಯಲ್ಲಿ ಇದೊಂದು ಅದ್ಭುತ ಪ್ರತಿಮೆಯೆನ್ನಿಕೊಳ್ಳಬಹುದು. ಇದು ಮೂಡಿಬಂದ ಸಂದರ್ಭವೂ ಸ್ವಾರಸ್ಯವಾದುದು. ಬೆಂಗಳೂರಿನಲ್ಲಿ ಹೊಸದೊಂದು ಚರ್ಚ್ ನಿರ್ಮಾಣವಾದಾಗ ಅದರ ಮುಂದೆ ಇವರು ಎವೆಯಿಕ್ಕದೆ ನೋಡುತ್ತಾ ನಿಂತರಂತೆ. ಅದರ ಆಯತ ಚತುರಸ್ರ ಆಕೃತಿಯನ್ನು ನೋಡಿದೊಡನೆ ಷಾ ಅವರ ನೆನಪು ಬಂದಿತಂತೆ. 'ಷಾ ಅವರ ಶಿಲ್ಪವೊಂದನ್ನು ಹೀಗೆಯೇ ಮಾಡುತ್ತೇನೆ' ಎಂದು ನಿರ್ಧರಿಸಿ ಒಂದು ವಾರದೊಳಗೆ ಈ ಶಿಲ್ಪವನ್ನು ಸಿದ್ಧಪಡಿಸಿದರಂತೆ.

ಷಾನ ಮೇಧಾಶಕ್ತಿಗೆ ಪ್ರತೀಕವಾದ ವಿಶಾಲವಾದ ಉಬ್ಬುಹಣೆ, ವಿಚಿತ್ರವಾದ ಕಣ್ಣುಗಳು, ಎಲ್ಲದರಲ್ಲೂ ಮುಂಚಾಚುವ ಮೂಗು, ಮೇಲೇರಿ ನಿಂತ, ಹಣೆಗೆ ಸಮನಾಗಿ ಕೆಳಗೆ ಇಳಿದು ನಿಂತ ಗಡ್ಡ, ಅದರ ಉದ್ದುದ್ದ ಪದರಗಳು. ಎಲ್ಲವೂ ಕ್ಯೂಬ್‌ಗಳಲ್ಲೇ. ಆದರೆ ಗಡ್ಡದ, ಮುಂಭಾಗದ ಪದರದಲ್ಲಿ ಉಬ್ಬುಶಿಲ್ಪದಲ್ಲಿ ಮೈದಳೆದು ನಿಂತ ಶೇಕ್ಸ್‌ಪಿಯರ್‌ನ ಸಣ್ಣ ಚಿತ್ರಣ ಮಾತ್ರ ವಾಸ್ತವಿಕತೆಯ ಶೈಲಿಯಲ್ಲಿಯೇ! ಕಣ್ಣಲ್ಲಿ ಕಣ್ಣಿಟ್ಟು ನೋಡಿದರೆ ಮಾತ್ರ ಶೇಕ್ಸ್‌ಪಿಯರ್ ಕಂಡಾನು. ಷಾನ ಬರಹವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಮಾತ್ರ ಅವನ ಮೇಲೆ ಶೇಕ್ಸ್‌ಪಿಯರನ ಪ್ರಭಾವ ಎಷ್ಟರಮಟ್ಟಿಗಿದ್ದಿತೆನ್ನುವುದು ತಿಳಿದೀತು!

ಕನ್ನಡದ ಸೀಮಾಪುರುಷರಲ್ಲಿ ಅವರ ಮನಸೆಳೆದವರು ಕೆಲವರು ಶಿಲ್ಪಕ್ಕೆ ಕಾರಣರಾಗಿದ್ದಾರೆ. ಕುವೆಂಪು, ಬೇಂದ್ರೆ, ಇವರ ಮುಖಚಿತ್ರಣದಲ್ಲಿ ಕವಿಸಹಜವಾದ ಗಾಂಭೀರ್ಯ, ಪಾರವಶ್ಯಗಳು ಕಾಣುತ್ತವೆ. ಇವೆರಡೂ ನೈಜ ಶಿಲ್ಪಗಳು. ಕನ್ನಡಕ್ಕೊಬ್ಬನೇ ಆದ ಕೈಲಾಸಂ ಆರೆಸ್ಸೆನ್ ಕೈಯಿಂದ ನಿಂತ ಭಂಗಿಯಲ್ಲಿ ಮೂಡಿ ಬಂದಿದ್ದಾರೆ. ಇದು ಕೈಲಾಸಂ ವ್ಯಕ್ತಿತ್ವದಂತೆಯೇ ವ್ಯಂಗ್ಯಶಿಲ್ಪ (ಕ್ಯಾರಿಕೇಚರ್); ಸಾಹಿತಿಯ ನಿಲುವೇ ದಿಟ್ಟವಾಗಿದೆ, ವಕ್ರವಾಗಿದೆ. ಸಾಹಿತ್ಯದಲ್ಲಿ ಕೈಲಾಸಂ ಹೇಗೋ ಆ ಕಲೆಯಲ್ಲಿ ಆರೆಸ್ಸೆನ್ ಹಾಗೆ ಎಂದರೂ ತಡೆದೀತು!

ಇನ್ನು ಕನ್ನಡದ ಕಣ್ವರಾದ ಬಿ.ಎಂ.ಶ್ರೀ.(೧೮೮೪-೧೯೪೬)ರವರ ಉಬ್ಬುಶಿಲ್ಪವೊಂದಿದೆ. ಆರೆಸ್ಸೆನ್‌ಗೂ ಇವರಿಗೂ ಅದು ಯಾವ ನಂಟೋ ತಿಳಿಯದು; ಈ ಶಿಲ್ಪವನ್ನು ಯಾವ ಸಂದರ್ಭದಲ್ಲಿ ಮಾಡಿದರೋ ಅದೂ ತಿಳಿಯದು. ಆದರೆ ಇದೊಂದು ಸೊಗಸಾದ ಸಂಪ್ರದಾಯದ ನಿದರ್ಶನ. ಶೈಲಿಯಲ್ಲಿ ಓರಣ; ವಿಷಯ ನಿರೂಪಣೆಯಲ್ಲಿ ಅಚ್ಚುಕಟ್ಟು; ವಿವರಗಳ ಬಗ್ಗೆ ಎಚ್ಚರ; ವ್ಯಕ್ತಿಯನ್ನು ಕುರಿತಾದ ಗೌರವ ಭಾವನೆ, ಇವೆಲ್ಲವನ್ನೂ ಇಲ್ಲಿ ಕಾಣಬಹುದು. ಹೀಗೆಯೇ, ಪೂಜ್ಯ ಭಾವನೆಯಿಂದ ಅವರು ಮಾಡಿರುವ ಇನ್ನೊಂದು ಶಿಲ್ಪ ಕೇರಳದ ಮಹಾಕವಿ ವಲ್ಲತ್ತೋಳ್ ನಾರಾಯಣ ಮೆನೊನ್ (೧೮೭೮-೧೯೫೮) ಅವರದ್ದು; ಅವರ ದೊಡ್ಡಸ್ತಿಕೆಯನ್ನು ಅದು ಎತ್ತಿ ತೋರಿಸುತ್ತದೆ. ಕಥಕಳಿ ನೃತ್ಯಪದ್ಧತಿಯ ಪುನರುತ್ಥಾನಕ್ಕೆ ಹೆಸರಾದವರು ಅವರು; ಇಡೀ ಋಗ್ವೇದವನ್ನು ಮಲೆಯಾಳದ ಅನುವಾದದಲ್ಲಿ ಹೊರತಂದವರು. ಅವರ ಸಂಪರ್ಕ ಆರೆಸ್ಸೆನ್ ಅವರಿಗೆ ಹೇಗೆ ಒದಗಿಬಂದಿತೋ ತಿಳಿಯದು.

ತಮಿಳಿನಲ್ಲಿ ನಾಡಿನ ಬಿಡುಗಡೆಯ ಹಾಡುಗಳಿಗೆ ಹೆಸರಾದ ಕವಿ ಸುಬ್ರಹ್ಮಣ್ಯ ಭಾರತಿ (೧೮೮೨-೧೯೨೧) ಅವರದ್ದೊಂದು ಸೊಗಸಾದ ಶಿಲ್ಪ ಆರೆಸ್ಸೆನ್ ಮಾಡಿರುವುದಿದೆ. ಸ್ವಾತಂತ್ರ್ಯ ಸಮರದಲ್ಲಿ ಅವರಂತೆಯೇ ಪಾಲ್ಗೊಂಡಿದ್ದ ಮತ್ತು ಅವರ ಹತ್ತಿರದ ಸ್ನೇಹಿತರಾಗಿದ್ದ, ಪಾಂಡಿಚೆರಿಯಲ್ಲಿದ್ದ ಮಹರ್ಷಿ ಅರವಿಂದ ಘೋಷ (೧೮೭೨-೧೯೫೦)ರದ್ದು ಎರಡು ಶಿಲ್ಪಗಳಿವೆ. ಒಂದು ಅವರ ಅನೇಕ ಭಾವಚಿತ್ರಗಳಿಂದ ಪ್ರೇರಣೆಯನ್ನು ತಳೆದ ಉಬ್ಬುಶಿಲ್ಪ. ಇನ್ನೊಂದು ಅವರನ್ನು ಎದುರಿಗೇ ನೋಡಿದಾಗ ಮೂಡಿಬಂದ ನೆನಪಿನಿಂದ ಮಾಡಿದ ದುಂಡುಶಿಲ್ಪ. ಎರಡನೆಯದು ಕಲಾದೃಷ್ಟಿಯಿಂದ ತುಂಬಾ ಮೇಲ್ಮಟ್ಟದ್ದು. ಮಹರ್ಷಿಗಳ ಆಧ್ಯಾತ್ಮಿಕ ಉನ್ನತಿಯನ್ನು ಮನಗಂಡ ಕಲಾವಿದ ರಚಿಸಿದ್ದು. ಕಲಾವಿದನ ಆಧ್ಯಾತ್ಮಿಕ ಪ್ರವೃತ್ತಿಯನ್ನು ತಿಳಿಯಹೇಳುವ ಕೃತಿ ಇದು.

ಆರೆಸ್ಸೆನ್‌ಗೆ ಅವರಿಗೆ ಧರ್ಮದಲ್ಲಿ ಆಳವಾದ ಆಸಕ್ತಿ, ಆದರಗಳಿದ್ದುದು ಇವಲ್ಲದೆ ಅವರು ಮಾಡಿರುವ ಹಲವಾರು ಬುದ್ಧಶಿಲ್ಪಗಳಿಂದ, ಕ್ರಿಸ್ತನ ಶಿಲ್ಪಗಳಿಂದ, ವಿವೇಕಾನಂದರ ಶಿಲ್ಪದಿಂದ ವ್ಯಕ್ತವಾಗುತ್ತದೆ. ಬುದ್ಧನ ಶಾಂತವಾದ ಮುಖ ಅವರಿಗೆ ಅಚ್ಚುಮೆಚ್ಚು. ಅದನ್ನು ಕಂಡರಿಸುವುದೂ ಅಷ್ಟೇ ಪ್ರಿಯವಾದ ಕೆಲಸ ಅವರಿಗೆ. ಅದೆಷ್ಟು ಅಕ್ಕರೆಯಿಂದ ಬುದ್ಧನ

ರೂಪವನ್ನು ಬಿಡಿಸಿದ್ದಾರೆಯೋ! ಹಾಗೆಯೇ ಮಗುವಾದ ಯೇಸುವನ್ನು ಎತ್ತಿಕೊಂಡಿರುವ ತಾಯಿಯ ಶಿಲ್ಪ ಅದ್ಭುತವಾದುದು. ಮಹಾಪುರಷನ ತಾಯಿಯಾಗುವ ಪುಣ್ಯವನ್ನು ಪಡೆದಿರುವ ಆಕೆಯನ್ನು ಆರೆಸ್ಸೆನ್ ಶಿಲ್ಪದಲ್ಲಿ ಮೂಡಿಸಿರುವುದು ತುಂಬಾ ಭಾವಪೂರ್ಣವಾಗಿದೆ. ಯೂರೋಪೀಯ ಪುನರ್ನವೋದಯ (ರೆನೇಸಾನ್ಸ್) ಯುಗದಲ್ಲಿ ವಿಶೇಷವಾಗಿ ಕಲಾವಿದರನ್ನು ಆಕರ್ಷಿಸಿದ ವಸ್ತು ಇದು; ಇದು ಆರೆಸ್ಸೆನ್ ಕೈಯಲ್ಲಿ ಹೊಸದೊಂದು ಅಭಿವ್ಯಕ್ತಿಯನ್ನು ತಳೆಯಿತು. ನಿದ್ರಿಸುತ್ತಿರುವ ದೈವೀ ಶಿಶು, ಪ್ರೀತಿಯಿಂದ ತಬ್ಬಿಕೊಂಡು ಎಚ್ಚರವಾಗಿರುವ ಮಾತೆ ಶಿಲ್ಪಕ್ಕೊಂದು ವೈಶಿಷ್ಟ್ಯವನ್ನು ಒದಗಿಸಿವೆ.

ವಿಶ್ವಕವಿ ರವೀಂದ್ರನಾಥ ಠಾಕೂರ (೧೮೬೧-೧೯೪೨)ರ ಮುಖ ಕಲಾವಿದರ ಪ್ರೀತಿಯ ವಸ್ತುವಾಗಿರುವುದು ಸಹಜವೇ. ಚೆಲುವಾದ, ತಿದ್ದಿದ ಮುಖ, ಗಂಭೀರವಾದ ಮುಖಮುದ್ರೆ, ಮುಖದ ಕಳೆಯನ್ನು ಹೆಚ್ಚಿಸುವ ಗಡ್ಡ, ತಲೆಗೂದಲು ಇವು ಚಿತ್ರಕ್ಕಾಗಲಿ ಶಿಲ್ಪಕ್ಕಾಗಲಿ ಹೇಳಿಮಾಡಿಸಿದಂತಿವೆ. ಆರೆಸ್ಸೆನ್ ರವೀಂದ್ರನಾಥರ ಮೂರು ನಾಲ್ಕು ಶಿಲ್ಪಗಳನ್ನು ಮಾಡಿದ್ದಾರೆ, ಒಂದೊಂದರಲ್ಲಿ ಒಂದೊಂದು ಮುಖಮಾಟ. ಒಂದು ಅಂಡಾಕಾರದ ಫಲಕವೂ ಉಬ್ಬುಶಿಲ್ಪ ಶೈಲಿಯಲ್ಲಿದ್ದು; 'ಗುರುದೇವ' ಎಂಬ ಒಕ್ಕಣೆಯನ್ನು ಹೊಂದಿದೆ. ಆರೆಸ್ಸೆನ್ ಕೂಡ ರವೀಂದ್ರನಾಥರ ಆಕರ್ಷಣೆಗೆ ಒಳಗಾಗಿದ್ದರೆಂಬುದು ಸ್ಪಷ್ಟವಾಗುತ್ತದೆ.

ಹಾಗೆಯೇ ಗಾಂಧೀಜಿಯವರನ್ನು ತುಂಬ ಮೆಚ್ಚಿಕೊಂಡಿದ್ದರು. ಅವರ ಹತ್ತಾರು ಚಿತ್ರಗಳನ್ನು ಬಿಡಿಸಿದ್ದಾರೆ. ೧೯೩೯ರ ಆಗಸ್ಟ್ ೧೩ರಂದೇ ಗಾಂಧೀಜಿಯ ಉಬ್ಬುಶಿಲ್ಪವೊಂದನ್ನು ಮಾಡಿದ್ದು ಉಳಿದುಕೊಂಡು ಬಂದಿದೆ. ಆರೆಸ್ಸೆನ್‌ಗೆ ಗಾಂಧೀಜಿಯವರ ಪರಿಚಯವಿದ್ದಿತು. ಕೊಂಚಮಟ್ಟಿನ ಒಡನಾಟವೂ ಇದ್ದಿತು. ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭ ಇದ್ದುದರಿಂದ ಅವರು ದೇವತಾಪುರುಷರೆಂದೇ ಇವರ ಎಣಿಕೆ. ಆದರೆ ಆರೆಸ್ಸೆನ್ ಮಾಡಿರುವ ಗಾಂಧೀಜಿ ಶಿಲ್ಪ ವಾಸ್ತವಿಕತೆಯ ಚೌಕಟ್ಟಿನಲ್ಲಿ ಕೂತಿಲ್ಲ. ಉಳಿದ ವ್ಯಕ್ತಿಚಿತ್ರಣಗಳಂತೆ ರಸವತ್ತಾಗಿಯೂ ಇಲ್ಲ. ಕಾರಣವೇನೋ ತಿಳಿಯದು.

ಆರೆಸ್ಸೆನ್ ಅವರ ಆದರವನ್ನು ಪಡೆದುಕೊಂಡು, ಅವರ ಶಿಲ್ಪರೂಪದ ಶ್ರದ್ಧಾಂಜಲಿಗೆ ಪಾತ್ರನಾದ ಇನ್ನೊಬ್ಬ ವ್ಯಕ್ತಿಯೆಂದರೆ ಹಿಂದೀ ಸಾಹಿತ್ಯದ ಸಾರ್ವಭೌಮ ಮುನ್ಷಿ ಪ್ರೇಮಚಂದರು (೧೮೮೦-೧೯೩೬), ಬಡಬಗ್ಗರನ್ನು ಕುರಿತು ಬರೆದವರೆಂಬ ಕಾರಣದಿಂದ. ಇವರ ಚಿತ್ರಣ ತುಂಬಾ ಸೊಗಸಾಗಿದೆ; ೧೯೫೦ರಲ್ಲಿ ಮಾಡಿದ್ದು ಸ್ವಾಮಿ ವಿವೇಕಾನಂದರ ಚಿತ್ರಣವೂ ಅಷ್ಟೇ ಸ್ವಾರಸ್ಯವಾಗಿದ್ದರೂ ಅದರ ಶೈಲಿ ಬೇರೆ; ವ್ಯಕ್ತಿಯ ಔನ್ನತ್ಯವನ್ನು ಎತ್ತಿ ಕಾಣಿಸುವಂತೆ ನಿರೂಪಣೆ. ಸ್ವಾಮಿಗಳ ದಿಟ್ಟತನ, ದೇಶಪ್ರೇಮ, ಆಧ್ಯಾತ್ಮನಿಷ್ಠೆ, ಉದಾತ್ತವಾದ ನಿಲುವು ಇವು ಕಣ್ಣಿಗೆ ಕಟ್ಟಿದಂತೆ ಮೂಡಿಬಂದಿವೆ.

ಪಂಡಿತ ಜವಹರಲಾಲ ನೆಹರೂ ಪ್ರಧಾನಿಯಾಗಿದ್ದಾಗ ಅವರ ಮೇಲೆ ಪ್ರಭಾವ ಬೀರಿ ದಾರಿ ತಪ್ಪಿಸಿದ ಕೃಷ್ಣಮೆನನ್ ಅವರದ್ದೂ ಒಂದು ಶಿಲ್ಪವಿದೆ. ಮೆನನ್ ಅತಿ ಬುದ್ಧಿಶಾಲಿ, ಪ್ರಚಂಡ; ಅಷ್ಟೇ ಕುಟಿಲತೆ, ವಕ್ರಬುದ್ಧಿ, ಅವರ ಸ್ವಭಾವ ಜಟಿಲವಾಗಿದ್ದಿತು; ಅವರು ಯಾರಿಗಾಗಲಿ ಹಿತವರಲ್ಲ; ಯಾರನ್ನೂ ಆದರದಿಂದ ಕಂಡವರಲ್ಲ; ಎಲ್ಲಿಯೂ ಕೊಂಕೇ. ಆರೆಸ್ಸೆನ್ ಇವರನ್ನು ಚಿತ್ರಿಸುವುದರಲ್ಲಿ ಈ ಗುಣವನ್ನು ತಟ್ಟನೆ ಗುರುತಿಸಬಹುದು! ಕಲಾವಿದನ ಸೂಕ್ಷ್ಮದೃಷ್ಟಿಗೆ ಕೃಷ್ಣಮೆನನ್ ಕೂಡಾ ಮರೆಯಾಗಲಿಲ್ಲ. ಇದೊಂದು ಅದ್ಭುತ ಚಿತ್ರಣ. ಶೈಲಿಯು ವ್ಯಕ್ತಿಯ ಸ್ವಭಾವವನ್ನನುಸರಿಸಿ ಇರುವುದನ್ನು ಗಮನಿಸಬಹುದು.

ಹೀಗೆ ಆರೆಸ್ಸೆನ್ ಕೈಯಲ್ಲಿ ಮೈಮೂಡಿಸಿ ಬಂದ ಅನೇಕ ವ್ಯಕ್ತಿಶಿಲ್ಪಗಳಲ್ಲಿ ಒಂದೊಂದರಲ್ಲೂ ಒಂದೊಂದು ಸ್ವಾರಸ್ಯವನ್ನು ಕಾಣಬಹುದು. ಅವರಿಗೆ ವ್ಯಕ್ತಿಯ ಹೊರಗಣ ರೂಪ ಮುಖ್ಯವಲ್ಲ. ಒಳಗಣ ಗುಣ ಮುಖ್ಯ. ವ್ಯಕ್ತಿಚಿತ್ರಣ ಕಾಣಿಸಬೇಕಾದುದು ಬರಿಯ ರೂಪವನ್ನಲ್ಲ, ಗುಣವನ್ನು. ಕಲಾವಿದನು ಅನುಸರಿಸುವ ತಂತ್ರ ಇದಕ್ಕೆ ಒತ್ತಾಸೆಯಾಗಬೇಕು. ಎಲ್ಲ ವ್ಯಕ್ತಿಗಳಿಗೂ ಒಂದೇ ತಂತ್ರ ಎಂಬುದು ಸರಿಯಲ್ಲ. ಕಲಾವಿದನ ತಂತ್ರ ಕೇವಲ ಕಣ್ಣಿಗೆ ಕಾಣುವುದಲ್ಲ, ಮನಸ್ಸನ್ನು ಮುಟ್ಟಬೇಕು.

ವ್ಯಕ್ತಿಯ ಭಾವನೆಗಳು, ಗುಣದೋಷಗಳು ಕಲಾವಿದನ ಕೃತಿಯ ಮೂಲಕ ನಮ್ಮ ಭಾವನೆಗಳನ್ನು ಮಿಡಿಯಬೇಕು, ಗುಣದೋಷಗಳ ವಿಮರ್ಶೆಗೆ ಎಡೆಮಾಡಿಕೊಡಬೇಕು. ಈ ನಿಲುವಿನಲ್ಲಿ ನಿಂತವರು ಆರೆಸ್ಸೆನ್. ಅವರ ಶಿಲ್ಪಕಾಯಕ ಈ ನಿಲುವನ್ನು ಸಮರ್ಥಿಸುತ್ತದೆ. ಆದ್ದರಿಂದಲೇ ಅವರ ಕಲಾಕೃತಿಗಳಲ್ಲಿ ಒಂದೊಂದು ವಿಶೇಷವಾದ ಕಳೆಯಿದೆ; ಅಸಾಧಾರಣವಾದ ಸಂದೇಶವಿದೆ. ಇದು ಪ್ರತಿಭೆಯ ಪರಿಪಾಕ, ಫಲ.





# ದೈತ್ಯಶಕ್ತಿ, ಅದಮ್ಯ ಚೇತನದ ಆರ್.ಎಸ್.ಎನ್.

■ *ಎಚ್ಚೆಸ್ಕೆ*

೧೯೬೫ ಎರಡು ದೃಷ್ಟಿಗಳಿಂದ ನನಗೆ ಮಹತ್ವದ್ದು. ಮೊದಲನೆಯದಾಗಿ, 'ಸುಧಾ' ಆರಂಭವಾದದ್ದು ಆ ವರ್ಷ. ಎರಡನೆಯದಾಗಿ ಸುಪ್ರಸಿದ್ಧ ಕಲಾವಿದರೂ ಸತ್ತ್ವಪೂರ್ಣವಾದ ಬದುಕನ್ನು ಬದುಕಿದವರೂ ಆದ ಆರ್.ಎಸ್. ನಾಯುಡು ಅವರು ನನಗೆ ಪರಿಚಯವಾದದ್ದೂ ಆಗಲೇ. 'ಸುಧಾ' ವ್ಯಾಜದಿಂದಲೇ.

ಮೊದಲನೆಯದಾಗಿ ಸಂಚಿಕೆಗಾಗಿ ಮೈಸೂರು ನಗರ ಕುರಿತು ನಾನು ಬರೆಯಲಿದ್ದ ಲೇಖನವೊಂದಕ್ಕೆ ಅವರಿಂದ ರೇಖಾಚಿತ್ರಗಳನ್ನು ಬರೆಯಿಸಬೇಕೆಂಬುದು ನಮ್ಮ ಬಯಕೆ. ಅವರಿದ್ದದ್ದು ಮೈಸೂರಿನಲ್ಲೇ– ಅದರ ಪಶ್ಚಿಮದ ಕೊನೆಯಲ್ಲಿರುವ ವಿಸ್ತರಣವೊಂದರಲ್ಲಿ ಕಾರ್ಮಿಕರ, ಬಡಜನರ ವಸತಿಗಳ ನಡುವೆ.

ತುಕ್ಕು ಹಿಡಿದ ಉಕ್ಕಿನ ತಂತಿಯಂತೆ ತೀರ ತೆಳ್ಳಗಿನ ದೇಹ, ಕಪ್ಪುಛಾಯೆ, ಹೋತನ ಗಡ್ಡ, ಕನ್ನಡಕ. ತಲೆಯಲ್ಲಿ ಬೆಳ್ಳಗಿನ ತುಂಡು ಕೂದಲು. ಬೆಳ್ಳಗಿನ ತುಂಡುತೋಳಿನ ಷರಟಿನ ಕೆಳಭಾಗವನ್ನು ಒಳತುರುಕಿ ಮೇಲೆ ಬಿಗಿಯಾಗಿ ಧರಿಸಿದ ಬಿಳಿಯ ಷರಾಯಿ. ಕಾರ್ಮಿಕನಂತೆಯೇ ವೇಷ. ಆದರೆ ಒಂದು ವ್ಯತ್ಯಾಸ: ಕೆಲಸ ಮಾಡಲಾಗದ ವಯಸ್ಸು ಅವರಿಗೆ ಆಗಲೇ.

ಆದರೆ ಮನಸ್ಸು ಬಲು ಚುರುಕು. ಮಾತು ಧಾರಾಕಾರ. ನಿಮಗೆ ಅರ್ಥವಾಗುವಂಥದು ಒಂದಾದರೆ ಅರ್ಥವಾಗದ್ದು ಹತ್ತು. ಅವರ ಮನಸ್ಸಿನ ತೆರೆಯ ಮೇಲೆ ಹಾದು ಹೋಗುತ್ತಿದ್ದ ಹಲವಾರು ನೆನಪುಗಳ ಪರಸ್ಪರ ಸುಸಂಬದ್ಧ ನಮಗೆ ಗೊತ್ತಾಗದಿದ್ದರೂ ಅವರಿಗೆ ಅವೆಲ್ಲಾ ಸುಸಂಬದ್ಧ. ಒಂದು ಜೀವಮಾನದಲ್ಲಿ ಇಷ್ಟೊಂದು ಅನುಭವಗಳನ್ನು ಹಾಕಿಕೊಳ್ಳಬಹುದೇ ಎಂದು ಆಶ್ಚರ್ಯಪಡುವ ಮಟ್ಟಿಗೆ ಅವು ವೈವಿಧ್ಯಮಯ. ಕೋಪ, ದ್ವೇಷ, ತೃಪ್ತಿ, ಸಂತೋಷ, ಕಳವಳ, ತಳಮಳ, ಭಯ, ಉದ್ರೇಕ ಎಲ್ಲವನ್ನೂ ಮಾಲೆಯಾಗಿ ಕೋದ ಚಲನಚಿತ್ರದ ರೀಲಿನ ತರಹ. ನಿಜಕ್ಕೂ ಎಲ್ಲಾ ರೀತಿಯಲ್ಲೂ ಅಪರೂಪದ ವ್ಯಕ್ತಿತ್ವ.

ನನ್ನ ಲೇಖನಕ್ಕೆ ಚಿತ್ರ ಬರೆದುಕೊಡಲು ಆರ್.ಎಸ್.ಎನ್. ಒಪ್ಪಿಕೊಂಡರಾಗಲಿ, ಅದನ್ನು ಬರೆಯಿಸಿಕೊಳ್ಳುವ ಅದೃಷ್ಟ ಆ ಲೇಖನಕ್ಕೆ ಒದಗಿಬರಲಿಲ್ಲ. ಏಕೆಂದರೆ ಆರ್.ಎಸ್.ಎನ್. ಪಟ್ಟಾಗಿ ಕೂತು ಯಾವುದನ್ನೂ ಬರೆಯುವ ಸ್ಥಿತಿಯಲ್ಲಿ ಆಗ ಇರಲಿಲ್ಲ. ಯಾವುದೋ ವಿಚಿತ್ರವ್ಯಾಧಿಯ ಅನಿಸಿಕೆ. ಇದ್ದಕ್ಕಿದ್ದ ಹಾಗೆ ಕನವರಿಕೆ. ಯಾರೋ ಏನೋ ಮಾಡಿಸಿದ ಹಾಗೆ. ಏನೋ ಆಗುತ್ತಿರುವ ಹಾಗೆ. ಅರ್ಥವಾಗದ ಯಾವುದೋ ದೃಶ್ಯವನ್ನು ಕಂಡಂತೆಯೇ ಆಗಂತುಕರ ಅನಿಸಿಕೆ.

**ಸಜ್ಜನಿಕೆ, ಸರಳತೆ**

ಆದರೆ ಆರ್.ಎಸ್.ಎನ್. ಅವರೊಂದಿಗಿನ ಪರಿಚಯ ಬಲು ಬೇಗ ಸ್ನೇಹವಾಗಿ ಬೆಳೆಯಿತು. ಆರ್.ಎಸ್.ಎನ್.ದು ಯಾರೊಂದಿಗಾದರೂ ಸ್ನೇಹ ಬೆಳೆಸುವ ಸಜ್ಜನಿಕೆ, ಸರಳತೆ. ತಮ್ಮ ಮನಸ್ಸಿನಲ್ಲಿ ತಾತ್ಕಾಲಿಕವಾಗಿ ಹಾದುಹೋಗುವ ನೆನಪುಗಳನ್ನೋ, ಅನುಭವಗಳನ್ನೋ ಕೆಲವೇ ಗೆರೆಗಳಲ್ಲಿ ಸೆರೆ ಹಿಡಿಯುವುದು ಆರ್.ಎಸ್.ಎನ್.ಗೆ ಮಾಮೂಲು. ಅಂಥ ಕ್ಷಣಗಳಲ್ಲಿ ಅವರು ಬರೆದದ್ದು ಅರ್ಥಪೂರ್ಣ ರೇಖಾಚಿತ್ರವಾಗಬಹುದು. ಇಲ್ಲವೇ ಲೇಖನಿಯಿಂದ ಧುಮುಕಿದ ಮಸಿಯಂತೆ ಅವರ ಮನಸ್ಸಿನಿಂದ ಚೆಲ್ಲಿದ ಚಿತ್ತಾರವಾಗಬಹುದು–ಡೂಡ್ಲ್ ಆಗಬಹುದು. ಯಾವುದೂ ವ್ಯರ್ಥವಲ್ಲ. ಆ ಸಮಯದಲ್ಲಿ ಯಾವ ಮಿತ್ರರು ನೆನಪಾಗುತ್ತಾರೋ ಅವರಿಗೆ ಅದರ ರವಾನೆ, ಮಿತ್ರರಿಗೆ ಬರೆಯಬೇಕೆಂದು ತೆಗೆದುಕೊಂಡ ಕಾರ್ಡಿನ ಮೇಲೆ ನಾಲ್ಕು ಸಾಲು ಬರಹದ ಜೊತೆಗೆ ಇಂಥದೊಂದು ಡೂಡ್ಲ್ ಅಥವಾ ರೇಖಾಚಿತ್ರ: ಹಾಸ್ಯ, ಗಂಭೀರ, ವಿಚಾರಪೂರ್ಣ ಇತ್ಯಾದಿ. ನನಗೆ ಆರ್.ಎಸ್.ಎನ್. ಪರಿಚಯವಾದ ಮೇಲೆ ಕೆಲವು ದಿವಸ ಅಂಚೆಯವನು ಹಠಾತ್ತಾಗಿ ಇಂಥ ಪತ್ರಗಳನ್ನು ತಂದುಕೊಡುತ್ತಿದ್ದ. ಅವೆಲ್ಲಾ ಎಲ್ಲೆಲ್ಲೋ ಚೆಲ್ಲಾಪಿಲ್ಲಿಯಾಗಿ ಹೋದವು. ಉಳಿದಿರುವುದು ಅವುಗಳ ನೆನಪು ಮಾತ್ರ.

ಆರ್.ಎಸ್.ಎನ್. ಅವರ ಅಂತರಂಗದ ಗೆಳೆಯರಿಗೆಲ್ಲ ಇಂಥ ಪತ್ರಗಳು ಬಂದದ್ದುಂಟು. ಮನಸ್ಸನ್ನು ಸೆರೆಹಿಡಿದು ನಿಲ್ಲಿಸುವಂಥ ಕೆಲವು ಮಾತು. ಅಷ್ಟೇ ವೈಶಿಷ್ಟ್ಯಪೂರ್ಣವಾದ ರೇಖಾಚಿತ್ರ .ಆರ್.ಎಸ್.ಎನ್. ಈ ವಿಚಾರದಲ್ಲಿ ಬಹಳ ಧಾರಾಳಿ.

ಆರ್.ಎಸ್.ನಾಯ್ಡು ಅವರನ್ನು ನೆನೆಸಿಕೊಂಡಾಗಲೆಲ್ಲಾ ಹಲವೆಂಟು ಚಿತ್ರಗಳು ಮಿಂಚಿ ಮರೆಯಾಗುತ್ತವೆ. ಅವರೊಬ್ಬ ಆದರ್ಶಜೀವಿ, ಸ್ವಾತಂತ್ರ್ಯ ಹೋರಾಟಗಾರ, ಶಿಲ್ಪಿ, ಚಿತ್ರಕಾರ, ಆದರೆ ಬದುಕಿನ ಯಾವ ಕ್ಷೇತ್ರವೂ ಅವರನ್ನು ಬಂಧಿಸಿಡಲಾರದೆ ಹೋಯಿತು. ಯಾವುದಕ್ಕೂ ಅಂಟಿಕೊಳ್ಳದ ಆರ್.ಎಸ್.ಎನ್. ವ್ಯಕ್ತಿತ್ವ ವಿಶಿಷ್ಟವಾದದ್ದಾದರೂ ಯಾವುದರಲ್ಲೂ ನೆಲೆನಿಲ್ಲದ ಆರ್.ಎಸ್.ಎನ್. ಅವರನ್ನು ಜನ ಅರ್ಥಮಾಡಿಕೊಳ್ಳಲಾಗದ್ದು ಒಂದು ದುರಂತವೆಂದೇ ಹೇಳಬೇಕು. ಇದರಿಂದಾಗಿ ಅವರಿಂದ ಲಭಿಸಬೇಕಾದಷ್ಟು ಕೊಡುಗೆ ಲೋಕಕ್ಕೆ ದೊರಕಲಿಲ್ಲ.

ಎಂಬತ್ತು ವರ್ಷ ವಯಸ್ಸಿನ ಆರ್. ಸೀತಾಪತಿ ನಾಯುಡು ಹುಟ್ಟಿದ್ದು ಬೆಂಗಳೂರಿನಲ್ಲಿ. ತಂದೆ ರಂಗಸ್ವಾಮಿ ನಾಯುಡುವಿಗೆ ಅರಣ್ಯ ಇಲಾಖೆಯಲ್ಲಿ ಕೆಲಸವಿತ್ತು. ಅಜ್ಜ ತಿರುಚನಾಪಳ್ಳಿಯವರು. ಅವರು ಸೈನ್ಯದಲ್ಲಿ ಕೆಲಸ ಮಾಡಿದ್ದರಂತೆ. ಅವರ ತಮ್ಮ ಜಗಪತಿ ನಾಯುಡು ಮೈಸೂರು ವಿಶ್ವವಿದ್ಯಾಲಯದಲ್ಲಿ ಭೂವಿಜ್ಞಾನದಲ್ಲಿ ಪ್ರಾಧ್ಯಾಪಕರಾಗಿದ್ದರು. ಅವರೂ ಪ್ರತಿಭಾವಂತರೆ.

ಆರ್.ಎಸ್.ಎನ್. ಏನೂ ಕಡಿಮೆಯಲ್ಲ. ಒಂದು ಕೈಮೇಲು ಎಂಬಂತೆಯೇ ಎಲ್ಲದರಲ್ಲೂ. ತಾತನ ಬಳಿ ತಿರುಚನಾಪಳ್ಳಿಯಲ್ಲೂ ಆಮೇಲೆ ಬೆಂಗಳೂರಿನಲ್ಲೂ ಧಾರವಾಡದ ಕರ್ನಾಟಕ ಕಾಲೇಜಿನಲ್ಲೂ ಪುಣೆಯ ಫರ್ಗ್ಯುಸನ್ ಕಾಲೇಜಿನಲ್ಲೂ ವಿದ್ಯಾಭ್ಯಾಸ ಮಾಡಿದ ನಾಯುಡು ಕೆಲಸಕ್ಕೆ ಸೇರಿದ್ದರೆ ಕೈತುಂಬಾ ಸಂಬಳ ಪಡೆದು ನಿವೃತ್ತರಾಗಬಹುದಿತ್ತು. ಆದರೆ ಕೈಲಾಸಂ ಹಾಗೆ ನಾಯುಡುವಿನ ವ್ಯಕ್ತಿತ್ವದಲ್ಲೂ ಇಂಥ ನೆಮ್ಮದಿಯ ಜೀವನಕ್ಕೆ ಹೊಂದಿಕೊಳ್ಳದ ಯಾವುದೋ ವಿಚಿತ್ರ ಗುಣವಿತ್ತು. ಪ್ರತಿಭೆಯೆನ್ನಿ ಬೇಕಾದರೆ ಅದನ್ನು. ಅಥವಾ ಬಗ್ಗದಿಕೆಯೆನ್ನಿ. ಹತ್ತು ಜನ ನಡೆದ ಜಾಡಿನಲ್ಲಿ ನಡೆಯಲಾರದ ಆರ್.ಎಸ್.ಎನ್. ಅವರ ಜೀವನದ ಘಟನೆಗಳೂ ಸಂಚನ್ನೇ ಹೂಡಿದುವೆನ್ನಬೇಕು.

**ಸತ್ಯಾಗ್ರಹಿ**

ಶಿಕ್ಷಣ ಪೂರೈಸುವಷ್ಟರಲ್ಲಿ ನಾಡಿನ ಕಹಳೆ ಕೇಳಿಸಿತು. ಆರ್.ಎಸ್.ಎನ್. ಸತ್ಯಾಗ್ರಹಿಯಾದರು. ಮೂವತ್ತರ ದಶಕದ ಆದಿಕಾಲವದು. ಗಾಂಧಿಯವರ ದಾಂಡಿ ಸತ್ಯಾಗ್ರಹ, ಆರು ತಿಂಗಳ ಕಾಲ ಅವರಿಗೆ ಸ್ಥಾನ ಬದ್ಧತೆ. ಆಮೇಲೆ ಹದಿನೈದು ತಿಂಗಳ ಕಠಿಣ ಸಜ.

ಅವರ ವರ್ಗದ ಕೈದಿಗಳಿಗೆ ರಾಗಿ ಬೀಸುವ ದುಡಿಮೆ. ಅನ್ಯ ಗುನ್ಹೆಗಳಿಂದ ಶಿಕ್ಷೆಗೆ ಒಳಗಾದವರಿಗೆ ಆ ಪ್ರಾಯಶ್ಚಿತ್ತ. ಆದರೆ ನಾಯುಡು ಅವರಂತಹ ರಾಜಕೀಯ ಬಂದಿಗಳಿಗೆ ಅದರಿಂದ ವಿನಾಯಿತಿ. ಆ ಬಂದಿಗಳಿಗೋ, ಮೂಳೆ ಮುರಿಯುವ ಕೆಲಸ. ಹಗ್ಗದ ಚಾಪೆ. ಆರ್.ಎಸ್.ಎನ್. ಈ ಭೇದ ನೀತಿಯನ್ನು ನೋಡಿ ಕೆರಳಿದರು. ಆ ದುರ್ದೈವಿ

ಕೈದಿಗಳೊಂದಿಗೆ ಉಪವಾಸ ಮುಷ್ಕರ ಹೂಡಿದರು. ಎಲ್ಲರನ್ನೂ ಒಂದೇ ರೀತಿ ಪರಿಗಣಿಸಿ ಎಂದು ಬೇಡಿಕೆ. ಏಕೆ ಈ ತಾರತಮ್ಯ?

ಜೈಲಿನಲ್ಲೊಂದು ಬಿರುಗಾಳಿಯೇ ಎದ್ದಿತು. ಈ ಮುಷ್ಕರ ನಿಲ್ಲಬೇಕೆಂದು ಮಾಹಾದೇವ ದೇಸಾಯರೂ ಜಮ್ನಾಲಾಲ್ ಬಜಾಜರೂ ಕೋರಿದರು. ಇದು ಸತ್ಯಾಗ್ರಹವಾಗದು ಎಂದರು. ಆದರೆ ನಾಯುಡು ಅವರ ಮನಸ್ಸು ಒಪ್ಪಲಿಲ್ಲ. ಕೊನೆಗೆ ಗಾಂಧೀಜಿಯವರೇ ಪ್ರವೇಶಿಸಿ ಇದನ್ನು ನಿಲ್ಲಿಸಿದರು.

ಆರ್.ಎಸ್.ಎನ್. ಮನಸ್ಸು ಒಳಗೊಳಗೇ ತಳಮಳಿಸುತ್ತಿತ್ತು. ಸಮಾಜವಾದಿ ಯೂಸಫ್ ಮೆಹರಾಲಿಯವರು ಆರ್.ಎಸ್.ಎನ್.ಗೆ ಪರಿಚಯವಾದ್ದು ಈ ಸುಮಾರಿನಲ್ಲೇ. ಜೈಲಿನಿಂದ ಹೊರಬಂದ ಮೇಲೆ ಅವರು 'ಕಾಂಗ್ರೆಸ್ ಸೋಷಿಯಲಿಸ್ಟ್' ಎಂಬ ಪತ್ರಿಕೆಯನ್ನು ನಿರ್ವಹಿಸುತ್ತಿದ್ದರು. ಆ ವೇಳೆಗೆ ಆರ್.ಎಸ್.ಎನ್. ಅವರಲ್ಲಿ ವ್ಯಂಗ್ಯಚಿತ್ರಕಲೆ ಮೂಡಿತ್ತು. ಅವರ ವ್ಯಂಗ್ಯಚಿತ್ರಗಳು ಬಲು ಪ್ರಸಿದ್ಧವಾದವು. ಆರ್.ಎಸ್.ಎನ್.ಗೆ ಹಲವಾರು ಸಮಾಜವಾದಿ ಮುಂದಾಳುಗಳೊಂದಿಗೆ ಸಖ್ಯ ಬೆಳೆಯಿತು.

ಅನಂತರ ಸ್ವಲ್ಪ ಕಾಲ ಬೆಂಗಳೂರಿನಲ್ಲಿದ್ದ ಆರ್.ಎಸ್.ಎನ್. ಮತ್ತೆ ಬೊಂಬಾಯಿಗೆ ಹೋದರು. ಆರ್.ಎಸ್.ಎನ್. ಅವರಲ್ಲಿ ಪರಿವರ್ತನೆಯಾಗಿತ್ತು. ಅವರಾಗ ಕಮ್ಯುನಿಸ್ಟ್ ವಿಚಾರ ಪ್ರಣಾಲಿಗೆ ಮನಸೋತಿದ್ದರು. ಅನೇಕ ಕಮ್ಯುನಿಸ್ಟ್ ನಾಯಕರ ಗೆಳೆತನ ಬೆಳೆಯಿತು. ಆ ಪಕ್ಷದ ಮುಖಪತ್ರಗಳಿಗಾಗಿ ಆರ್.ಎಸ್.ಎನ್. ವ್ಯಂಗ್ಯ ಚಿತ್ರ ಬರೆದರು. ಆರ್.ಎಸ್.ಎನ್. ಖ್ಯಾತಿ ಭಾರತದ ಗಡಿ ದಾಟಿ ಇಂಗ್ಲೆಂಡನ್ನೂ ತಲುಪಿತ್ತು.

ಆರ್.ಎಸ್.ಎನ್.ಗೆ ಆಗ ಸೋವಿಯತ್ ದೇಶದಲ್ಲಿ ತುಂಬು ಅಭಿಮಾನ. ಸಮಾಜವಾದವನ್ನು ಕಾರ್ಯರೂಪಕ್ಕೆ ತರುತ್ತಿದ್ದ ಆ ದೇಶವನ್ನು ನೋಡಬೇಕೆಂದು ಅವರಿಗಾಸೆ. ಅದಕ್ಕಾಗಿಯೇ ಅವರು ಲಂಡನ್ನಿಗೆ ಹೋದರು. ಆದರೆ ಪೊಲೀಸರು ಅವರನ್ನು ಮಾಸ್ಕೋಗೆ ಹೋಗಲು ಬಿಡಲಿಲ್ಲ. ಆರ್.ಎಸ್.ಎನ್. ದಸ್ತಗಿರಿ. ಭಾರತಕ್ಕೆ ರವಾನೆ. ಆ ವೇಳೆಗೆ ಎರಡನೆಯ ಮಹಾಯುದ್ಧ ಆರಂಭವಾಗಿತ್ತು. ಆರ್.ಎಸ್.ಎನ್. ಅವರನ್ನು ಸರ್ಕಾರ ಜೈಲಿನಲ್ಲಿಟ್ಟಿತು. ಯದ್ಧ ಮುಗಿದ ಮೇಲೆಯೇ ಅವರ ಬಿಡುಗಡೆಯಾದ್ದು.

ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಜೈಲಿನಲ್ಲಿಲ್ಲದಿದ್ದಾಗ ಆರ್.ಎಸ್.ಎನ್. ಚಟುವಟಿಕೆಗಳು ನಾನಾ ತೆರ. ಕಾಂಗ್ರೆಸ್ಸಿನ ಯುವ ಜನರೊಂದಿಗೆ ಸೇರಿ ಅವರು ರಹಸ್ಯಪತ್ರಿಕೆಯನ್ನು ನಡೆಸುತ್ತಿದ್ದರು. ವ್ಯಾನ್‌ಗಾರ್ಡ್, ಕಾಂಗ್ರೆಸ್ ಸೋಷಿಯಲಿಸ್ಟ್, ನ್ಯಾಷನಲ್ ಫ್ರಂಟ್, ಭಾರತ ಜ್ಯೋತಿ, ಹಿಂದೂ ಮುಂತಾದ ನಾನಾ ಪತ್ರಿಕೆಗಳಿಗೆ ಅವರು ಚಿತ್ರ ಲೇಖನ ಬರೆಯುತ್ತಿದ್ದರು. ಅವರ ಕೃತಿಗಳನ್ನು ಇಂಗ್ಲೆಂಡಿನ ಮ್ಯಾಂಚೆಸ್ಟರ್ ಗಾರ್ಡಿಯನ್ ಕೂಡ ಎತ್ತಿಕೊಂಡು ಪ್ರಕಟಿಸಿದ್ದುಂಟು.

ಆರ್.ಎಸ್.ಎನ್. ಅವರದು ದೈತ್ಯ ಶಕ್ತಿ, ಅದಮ್ಯ ಚೇತನ. ಅವರಿಗೆ ಕಲೆ ಹೇಗೆ ಬಂತೆಂಬುದು ಒಂದು ಸೋಜಿಗವೇ. ಕೈಲಾಸಂಗೆ ಸಾಹಿತ್ಯ ಬಂದಂತೆ ಆರ್.ಎಸ್.ಎನ್.ಗೂ ಅದು ಜೀವಕ್ಕೆ ಅಂಟಿಕೊಂಡು ಬಂದ ಜತೆಗಾರ. ಅದರ ಸಾನ್ನಿಧ್ಯದಲ್ಲಿ ಆರ್.ಎಸ್.ಎನ್. ಅದ್ಭುತ ಕೃತಿಗಳನ್ನೇ ರಚಿಸಿದರು. ನಾಸಿಕದಲ್ಲಿ ಕಾರಾಗೃಹದಲ್ಲಿದ್ದಾಗ ಆರ್.ಎಸ್.ಎನ್. ಒಂದೇ ರಾತ್ರಿಯಲ್ಲಿ ಸುಮಾರು ನಾಲ್ಕು ಅಡಿ ಎತ್ತರದ ಲೆನಿನ್ ಪ್ರತಿಮೆ ಮಾಡಿದರಂತೆ. ಆದರೆ ಅಧಿಕಾರಿಗಳು ಅದನ್ನು ಉಳಿಯಗೊಡಲಿಲ್ಲ, ಎತ್ತಿಕೊಂಡು ಹೋದರು.

ಕೊನೆಯ ಬಾರಿ ಜೈಲಿನಲ್ಲಿದ್ದಾಗ ಆರ್.ಎಸ್.ಎನ್. ಮನಸ್ಸಿನ ಮೇಲೆ ಏನೋ ಆಘಾತವಾಗಿದ್ದಿರಬೇಕು. ಯಾರೋ ಏನೋ ಮಾಡಿಸಿಬಿಟ್ಟಿದ್ದಾರೆ, ಅವರು ಬರುತ್ತಿದಾರೆ ಎಂದೆಲ್ಲಾ ಹೇಳುತ್ತಿದ್ದರು. ಅದೇನೆಂಬುದು ಅರ್ಥವಾಗುತ್ತಿರಲಿಲ್ಲ. ಆ ತಳಮಳವನ್ನು ಮರೆಯುವುದಕ್ಕಾಗಿಯೇ ಅವರು ಕಲೆಗೆ ಹೆಚ್ಚು ಹೆಚ್ಚಾಗಿ ಜೋತುಬಿದ್ದರೆನಿಸುತ್ತದೆ. ಅವರ ಶಿಲ್ಪಕೃತಿಗಳು ತುಂಬಾ ಅಸಾಧಾರಣವಾದಂಥವು. ಶಿಲ್ಪ ಅವರಿಗೆ ವಿಶಿಷ್ಟವಾದ ಕಲಾಭಿವ್ಯಕ್ತಿ ಸಾಧಿಸಲು ನೆರವಾಯಿತೆನ್ನಬೇಕು. ರೇಖಾಚಿತ್ರಗಳೇ ಮುಂತಾದವಲ್ಲಿ ಯಾವುದೇ ಆಕೃತಿಯ ಉದ್ದ ಅಗಲ ಈ ಎರಡು ಆಯಾಮಗಳನ್ನು ಅಭಿವ್ಯಕ್ತಿಸಬಹುದು. ಆಳವನ್ನು ಕಾಣಿಸುವುದು ಕಷ್ಟವೇ. ಆದ್ದರಿಂದ ಅಷ್ಟರಮಟ್ಟಿಗೆ ಅದು ಅಪೂರ್ಣ-ಒಂದು ದೃಷ್ಟಿಯಲ್ಲಿ ಶಿಲ್ಪದಲ್ಲಿ ಈ ಮೂರನೆಯ

ಆಯಮವನ್ನೂ, ಎಂದರೆ ಆಳವನ್ನೂ ಅಥವಾ ಗಾತ್ರವನ್ನೂ ತೋರಿಸಬಹುದು. ಈ ಸಾಧ್ಯತೆಯನ್ನು ಆರ್.ಎಸ್.ಎನ್. ಅಸಾಧಾರಣ ರೀತಿಯಲ್ಲಿ ದುಡಿಸಿಕೊಂಡರೆನ್ನಬೇಕು. ರಷ್ಯನ್ ಕಥೆಗಾರ, ಹೋರಾಟಗಾರ ಮ್ಯಾಕ್ಸಿಮ್ ಗಾರ್ಕಿಯ ಪ್ರತಿಮೆ ತುಂಬಾ ಪ್ರಸಿದ್ಧವಾದದ್ದು. ಇದು ರೋದಾನ್ ಕೃತಿಯಿಂದ ಪ್ರಭಾವಿತ. ಬರ್ನಾರ್ಡ್‌ಷಾ ಪ್ರತಿಮೆ ಕ್ಯೂಬಿಸ್ಟ್ ಶೈಲಿಯದು. ಚರ್ಚ್ ಒಂದನ್ನು ನೋಡಿದಾಗ ಅವರಿಗೆ ಇದರ ರಚನೆಗೆ ಸ್ಫೂರ್ತಿ ಬಂತಂತೆ. ಅದರ ಗೋಡೆ ಕಿಟಕಿ ಶಿಖರಗಳನ್ನು ನೆನಪು ತರುವ ರೀತಿಯಲ್ಲಿದೆ ಷಾ ಮೂರ್ತಿ ಎನಿಸಿತು ಆರ್.ಎಸ್.ಎನ್.ಗೆ. ನೀಳ ಗೆರೆಗಳ ಜ್ಯಾಮಿತೀಯ ಆಕಾರಗಳನ್ನು ಒಟ್ಟು ಹಾಕಿದಂತಿರುವ ಬರ್ನಾಡ್ ಷಾ ಕೃತಿ ಅದ್ಭುತವಾದ್ದು. ಉಬ್ಬುಚಿತ್ರದ ರೀತಿಯಲ್ಲಿ ರಚಿಸಿದ ಷೇಕ್ಸ್‌ಪಿಯರ್, ಕರುಣೆಯೇ ಮೂರ್ತಿವೆತ್ತ ಏಸುಕ್ರಿಸ್ತ, ಸಾಕ್ರೆಟೀಸನ ನೆನಪು ತರುವ ಕೈಲಾಸಂ, ಶುದ್ಧ ಸಾತ್ವಿಕ ಮೂರ್ತಿ ಈಶ್ವರ, ನೆಹರೂ, ಟಾಲ್‌ಸ್ಟಾಯ್, ಬೇಂದ್ರೆ – ಹೀಗೆ ಹಲವರ ಮೂರ್ತಿಗಳನ್ನು ರೂಪಿಸಿದ ಆರ್.ಎಸ್.ಎನ್. ಕೃತಿಗಳಲ್ಲಿ ಹಲವು ಶೈಲಿಗಳ ಪ್ರಯೋಗಗಳನ್ನು ಕಾಣಬಹುದು. ಇವಲ್ಲದೆ ಆರ್.ಎಸ್.ಎನ್. ತಮ್ಮ ಅನೇಕ ಸ್ನೇಹಿತರಿಗೆ ಆಗಿಂದಾಗ್ಗೆ ಬರೆದು ಕಳುಹಿಸುತ್ತಿದ್ದ ಕಾರ್ಡು ರೇಖಾಚಿತ್ರಗಳು ಎಷ್ಟೋ. ಆಯಾ ಸಂದರ್ಭಕ್ಕೆ ಆರ್.ಎಸ್.ಎನ್. ಸ್ಪಂದಿಸುತ್ತಿದ್ದ ರೀತಿ ಅನನ್ಯವಾದದ್ದು. ಟೀಕೆ, ವ್ಯಂಗ್ಯ, ವಿಡಂಬನೆ, ನಗೆ, ಕ್ರೋಧ, ಮೆಚ್ಚುಗೆ ಎಲ್ಲವೂ ವಿಶಿಷ್ಟವೇ. ಅವರ ಗೆರೆಗಳಲ್ಲಿ ಜೀವ ಮಿಡಿಯುತ್ತಿತ್ತು. ಚಿವುಟಿದರೆ ರಕ್ತ ಚಿಮ್ಮೀತು ಎನಿಸುತ್ತಿತ್ತು. ಬೆಂಗಳೂರಿನ ಕೆಂಪೇಗೌಡನ ವಿಗ್ರಹವನ್ನು ಕುರಿತಂತೆ ಅವರು ಬಹಿರಂಗವಾಗಿ ವಾದಕ್ಕೆ ಇಳಿದಿದ್ದರು. ಕೆಂಪೇಗೌಡನ ನಿಜಚಿತ್ರ ಹೇಗಿತ್ತೆಂದು ಬರೆದು ತೋರಿಸಿದ್ದರು. ಅವರು ಅನೇಕ ಪುಸ್ತಕಗಳಿಗೆ ರೇಖಾಚಿತ್ರಗಳನ್ನು ರಚಿಸಿಕೊಟ್ಟರು. ಆದರೆ ಹಲವು ವೇಳೆ ಅವರ ಪ್ರತಿಭೆಯ ಬೀಸಿಗೆ ಆ ಚೌಕಟ್ಟು ಸಾಲದೆನಿಸುತ್ತಿತ್ತು.

ಆರ್.ಎಸ್.ಎನ್. ಮದುವೆಯಾಗಲಿಲ್ಲ. ಬಹುಶಃ ಅದಕ್ಕೆ ಬಿಡುವೇ ದೊರಕಲಿಲ್ಲವೇನೋ ಅಥವಾ ಯಾರೊಬ್ಬರಿಗೂ ತಮ್ಮನ್ನೇ ತಾವು ಒಪ್ಪಿಸಿಕೊಳ್ಳಲಾಗದ ವ್ಯಕ್ತಿತ್ವ ಅವರದು ಎನ್ನಬಹುದು. ಆರ್.ಎಸ್.ಎನ್.ದು ಒಂಟಿಬಾಳು. ಅವರ ಚಿತ್ರಗಳೇ ಅವರ ಬಳಗ, ಗೆರೆಗಳೊಂದಿಗೆ ಸರಸ. ಮೈಸೂರಿನಲ್ಲಿ ಅವರು ಒಬ್ಬರೇ ವಾಸಿಸುತ್ತಿದ್ದರು. ಸುತ್ತಮುತ್ತಣ ದಲಿತದೀನ ಸಂಸಾರಗಳ ಮಕ್ಕಳ ಒಡನಾಟ. ಅವರಿಗಾಗಿ ಆರ್.ಎಸ್.ಎನ್. ಹೃದಯ ಸದಾ ಮಿಡಿಯುತ್ತಿತ್ತು. ದೀರ್ಘಕಾಲ ರೋಗದಿಂದ ನರಳಿ ಈಚೆಗೆ ಆರ್.ಎಸ್.ಎನ್. ತೀರಿಕೊಂಡಾಗ ಅವರ ಕುಟೀರದ ಸುತ್ತಮುತ್ತಣ ಮಂದಿ ಆತ್ಮೀಯರೊಬ್ಬರನ್ನು ಕಳೆದುಕೊಂಡಂತೆ ಗೋಳಾಡಿದರು. ಕೊನೆಗಾಲದಲ್ಲಿ ಅವರಿಗೆ ಆಸರೆಯಾಗಿ ನಿಂತವರು ಅವರ ಅನೇಕ ಗೆಳೆಯರು. ಪಿ.ಆರ್. ತಿಪ್ಪೇಸ್ವಾಮಿಯವರ ಕೋರಿಕೆಯಂತೆ ರಾಜ್ಯ ಲಲಿತಕಲಾ ಆಕಾಡೆಮಿಯವರು ಅವರಿಗೆ ಒಂದುಸಾವಿರ ರೂಪಾಯಿಗಳನ್ನು, ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ನಾಲ್ಕು ಸಾವಿರವನ್ನೂ ಚಿಕಿತ್ಸೆಗಾಗಿ ಕೊಡಮಾಡಿದ್ದರು.

ಅಕಾಡೆಮಿ ಬಹುಮಾನವೇ ಮುಂತಾದ ಅನೇಕ ಪ್ರಶಸ್ತಿಗಳು ಆರ್.ಎಸ್.ಎನ್.ಗೆ ಬಂದಿದ್ದವು. ಆದರೆ ಆ ಬಗ್ಗೆ ಅವರಿಗೆ ದಿವ್ಯ ನಿರ್ಲಕ್ಷ್ಯ. ಕಲೆ ಅವರಿಗೆ ತಮ್ಮ ಎದೆಯ ಒತ್ತಡವನ್ನು ಬರಿದುಮಾಡಿಕೊಳ್ಳುವ ಸಾಧನವಾಗಿತ್ತು.

*('ಸುಧಾ' ವಾರಪತ್ರಿಕೆ, ೨೭-೧೦-೧೯೮೫)*





# ಆರ್.ಎಸ್. ನಾಯ್ಡು

■ *ಪಿ.ಆರ್.ತಿಪ್ಪೇಸ್ವಾಮಿ*

ಆರ್. ಸೀತಾಪತಿ ನಾಯ್ಡು (ಆರ್.ಎಸ್.ಎನ್.) ಕರ್ನಾಟಕದಲ್ಲಷ್ಟೇ ಅಲ್ಲದೆ ಭಾರತದಲ್ಲೇ ಅಸಾಧಾರಣ ಚಿತ್ರಶಿಲ್ಪಿಗಳಾಗಿದ್ದರು. ಇವರು ಅಕ್ಟೋಬರ್ ಆರರಂದು (೦೬.೧೦.೧೯೮೫) ಮೈಸೂರಿನ ಮಿಷನ್ ಆಸ್ಪತ್ರೆಯಲ್ಲಿ ಮಧ್ಯಾಹ್ನ ನಾಲ್ಕು ಗಂಟೆಯ ವೇಳೆಯಲ್ಲಿ ಕೊನೆಯುಸಿರು ಎಳೆದರು. ಇದರಿಂದಾಗಿ ಕರ್ನಾಟಕ ಓರ್ವ ಹಿರಿಯ ಖ್ಯಾತ ಚಿತ್ರಶಿಲ್ಪಿಯನ್ನು ಕಳೆದುಕೊಂಡಂತಾಯಿತು.

ಇವರು ಪೆನ್ನು ಮತ್ತು ಪ್ಲಾಸ್ಟರ್ ಕಲಾಮಾಧ್ಯಮದಲ್ಲಿ ವರಕಲಾವಿದರಾಗಿದ್ದರು. ಇವರ ವಿಶಿಷ್ಟ ಕಲ್ಪನಾ ವೈಖರಿ, ಉಜ್ವಲ ಪ್ರತಿಭಾಶಕ್ತಿಗಳನ್ನು ಯಾವ ಕಲಾಕೃತಿಗಳಲ್ಲಾದರೂ ಗಮನಿಸಬಹುದಾಗಿದೆ. ಇವು "ಆರ್.ಎಸ್.ಎನ್." ಕೃತಿಗಳು ಎಂದು ಯಾವ ಕೃತಿಯ ರಾಶಿಯಲ್ಲೂ ಪತ್ತೆಮಾಡುವಷ್ಟು ಕಲಾ ಪ್ರೌಢಿಮೆ ತುಂಬಿ ತುಳುಕಾಡುತ್ತಿತ್ತು. ಆ ಚಿತ್ರ ಅಥವಾ ಶಿಲ್ಪಗಳಿಗೆ ಅಂತಹ ವೈಶಿಷ್ಟ್ಯತೆ ಇರುತ್ತದೆ.

ಚಿತ್ರಕಲೆಯಲ್ಲಂತೂ ವಿಡಂಬನಾತ್ಮಕ ರೇಖಾಚಿತ್ರದಿಂದ ವರ್ಣಚಿತ್ರಗಳವರೆಗೆ ಅವರ ತೂಲಿಕೆ ಕಲಾಸೃಷ್ಟಿಯನ್ನು ಮೆರೆದಿದೆ. ನಾಯ್ಡು ಅವರನ್ನು ಸರಿಗಟ್ಟುವ ವ್ಯಂಗ್ಯಚಿತ್ರಕಾರರು–ಶಿಲ್ಪಿಗಳು ಎಲ್ಲೋ ಒಬ್ಬಿಬ್ಬರು ಮಾತ್ರ. ನಾಯ್ಡು ಸಾಂಪ್ರದಾಯಿಕ ಕಲೆಯನ್ನು ಸ್ವೀಕರಿಸಿದರೂ ಅಂಧಾನುಕರಣೆಗೆ ಮಾರುಹೋದವರಲ್ಲ. ನಾಯ್ಡು ಅವರ ಕಲೆ ಬರೀ ತಾಂತ್ರಿಕವಾಗಿ ಯಾಂತ್ರಿಕವಾಗಿ ಉಳಿಯಲಿಲ್ಲ. ಯಾರದೇ, ಯಾವುದೇ ಪ್ರಭಾವಕ್ಕೆ ಬಲಿ ಬೀಳಲಿಲ್ಲ. ಜೀವನ ತೊಳಲಾಟದಲ್ಲಿ ಬೆಳೆದು ಬಂದಿದ್ದ ಈ ಹಿರಿಯ ಜೀವಿಗೆ ಶ್ರೀಸಾಮಾನ್ಯನ ಬಗ್ಗೆಯೂ ಆಳವಾದ ಅನುಕಂಪ, ಪ್ರೀತಿ ಸಹಾನುಭೂತಿ ಮೈಗೂಡಿ ಬಂದಿದ್ದವು.

ನಾಯ್ಡು ರಚಿಸಿರುವ ಚಿತ್ರಗಳಲ್ಲಿ ಜೀವಂತತೆ, ಸಾದೃಶ್ಯ, ತುಂಬಿತುಳುಕುತ್ತದೆ. ರೇಖಾಚಿತ್ರಗಳಲ್ಲಿ ಅದ್ಭುತ ನಿರೂಪಣೆ, ಗತಿ, ವಿನ್ಯಾಸಗಳನ್ನು ಸೂಚಿಸುವ ಮಿತವ್ಯಯದ ವಿನೂತನ ಶೈಲಿಯಿಂದಾಗಿ ಸಾಮರಸ್ಯವನ್ನು ಗಮನಿಸಬಹುದಾಗಿದೆ. ನಾಯ್ಡು ಎಳೆಯುವ ಪ್ರತಿಯೊಂದು ರೇಖೆಯೂ ಅವರ ಹೃದಯದ ಅಂತರಾಳದಿಂದ ನೇರ ಚಿಮ್ಮಿ ಬರುತ್ತಿರುತ್ತದೆ. ಅವರ ರೇಖಾಚಿತ್ರಗಳ ವಸ್ತುವಿಶೇಷ ಕಲ್ಪನಾಶಕ್ತಿ ಅಸಾಧಾರಣವಾದುದು. ನಾಯ್ಡು ಅನೇಕ ಮಿತ್ರರಿಗೆ ಬರೆದ ಕಾಗದಗಳೆಲ್ಲ ರೇಖಾಚಿತ್ರಗಳಿಂದ ತುಂಬಿರುತ್ತಿತ್ತು. ವಿಷಯಗಳನ್ನೂ ರೇಖಾಚಿತ್ರಗಳಲ್ಲಿ ಬಿಡಿಸಿ, ಓದುವುದಕ್ಕಿಂತ ಚಿತ್ರ ನೋಡೇ ತಿಳಿದುಕೊಳ್ಳುವಂತಿದ್ದುವು ಹಾಗೂ ಅವುಗಳು ಸಂಗ್ರಹಕ್ಕೆ ಯೋಗ್ಯವಾಗಿವೆ.

ನಾಯ್ಡು ರೇಖಾಚಿತ್ರ ರಚನೆಯಲ್ಲಿ ಎಷ್ಟು ನಿಪುಣರಾಗಿದ್ದರೋ ಅಷ್ಟೇ ಶಿಲ್ಪಕೃತಿ ರಚನೆಯಲ್ಲೂ

ನಿಪುಣರಾಗಿದ್ದರು. ಅವರು ರಚಿಸಿರುವ ಪ್ಲಾಸ್ಟರ್‌ನ ಉಬ್ಬಚ್ಚಿನ ಭಾವಚಿತ್ರಗಳಲ್ಲಿ ಶಿಲ್ಪಕೃತಿಯಾಗಲೀ ಬರೀ ಮಣ್ಣಿನ ಮುದ್ದೆಯಂತೆ ಕಾಣದೆ ಜೀವಂತ ವ್ಯಕ್ತಿತ್ವ ಅದರಲ್ಲಿ ಮೂಡಿರುವಂತೆ ಭಾಸವಾಗುತಿತ್ತು.

ನಾಯ್ಡು ಅವರ ವ್ಯಕ್ತಿತ್ವ ಎಷ್ಟು ಸರಳವೋ ಅವರ ಪಾಂಡಿತ್ಯ ಅಷ್ಟೇ ಪ್ರೌಢವಾಗಿತ್ತು. ಇವರ ಜೀವನವೇ ಒಂದು ರೀತಿಯ ತುಂಬು ಕ್ರಾಂತಿಕಾರಿಯಾಗಿತ್ತು. ತಂದೆ ಪಿ.ವಿ. ರಂಗಸ್ವಾಮಿ ನಾಯ್ಡು ತಾಯಿ ರಂಗನಾಯಕಮ್ಮ ಇಬ್ಬರು ಸಹೋದರಿಯರು, ನಾಯ್ಡು ಅವರ ತಂದೆ ಫಾರೆಸ್ಟ್ ರೇಂಜರಾಗಿದ್ದರು. ನಾಯ್ಡು ಅವರ ಅಣ್ಣ ಪ್ರೊ. ಜಗಪತಿ ನಾಯ್ಡು (ದಿವಂಗತ) ಭೂಗರ್ಭಶಾಸ್ತ್ರದ ಪ್ರಸಿದ್ಧ ಪ್ರಾಧ್ಯಾಪಕರಾಗಿ ಚಂಡೀಗಡ ಮತ್ತು ಮೈಸೂರಿನ ವಿಶ್ವವಿದ್ಯಾಲಯಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಅಣ್ಣನ ಸಹಕಾರದಿಂದ ನಾಯ್ಡು ಅವರು ಒಂದು ರೀತಿಯಲ್ಲಿ ಕ್ಲುಪ್ತ ಜೀವನ ನಡೆಸಿದರು. ಹಾಗೂ ಇವರ ಕಲಿಕೆಗೆ ಪ್ರೋತ್ಸಾಹಿಸುತ್ತಿದ್ದರು.

ಶ್ರೀಯುತ ಆರ್.ಎಸ್.ಎನ್. ಅವರ ಬಾಲ್ಯದ ವಿದ್ಯಾಭ್ಯಾಸ ಮೈಸೂರಿನಲ್ಲೂ ಕೆಲವು ವರ್ಷ ತಿರುಚನಾಪಳ್ಳಿಯಲ್ಲೂ ಅನಂತರ ಧಾರವಾಡದಲ್ಲೂ ಆಯಿತು. ವಿದ್ಯಾರ್ಥಿಯಾಗಿದ್ದಾಗ ಆಟಪಾಟಗಳಲ್ಲಿ ಚರ್ಚಾಕೂಟಗಳಲ್ಲಿ ಭಾಗವಹಿಸಿ ಅನೇಕ ಬಹುಮಾನಗಳನ್ನು ಪಡೆದು ಎಲ್ಲರ ಅಭಿಮಾನಿಗಳಾಗಿದ್ದರು. ಇವರ ವಾಗ್ಝರಿಯನ್ನು ಕಂಡು ಇವರ ಅಣ್ಣನವರು ನಾಯ್ಡು ಅವರನ್ನು ವಕೀಲ ಮಾಡಬೇಕೆಂದು ಇಚ್ಛಿಸಿದ್ದರು. ಆದರೆ ಪ್ರಸಿದ್ಧ ಕಲಾಕಾರನಾದುದೂ ಅವರಿಗೆ ಸಂತಸವೂ ಆಗಿತ್ತು.

ಪೂನಾದ ಫರ್ಗ್ಯುಸನ್ ಕಾಲೇಜಿನಲ್ಲಿ ಇವರು ವ್ಯಾಸಂಗ ಮಾಡುತ್ತಿದ್ದಾಗ ಯೂತ್ ಕಾಂಗ್ರೆಸ್ ಸಂಸ್ಥೆಯೊಂದನ್ನು ಕಟ್ಟಿದರು. ಕಾಂಗ್ರೆಸ್ ಚಳವಳಿಯಲ್ಲಿ ಓಡಾಡತೊಡಗಿ, ೧೯೩೦ರಲ್ಲಿ ಮೊದಲಬಾರಿಗೆ ಆರು ತಿಂಗಳು ಸಾದಾಸಜೆಯನ್ನು ಅನುಭವಿಸಿ, ೧೯೩೪ರಲ್ಲಿ ಮತ್ತೆ ಎರಡನೆ ಬಾರಿಗೆ ೧೫ ತಿಂಗಳು ಕಠಿಣ ಶಿಕ್ಷೆಗೊಳಗಾದರು. ೧೯೩೯ರಲ್ಲಿ ನಾಯ್ಡು ಅವರಿದ್ದ ಜೈಲಿನಲ್ಲಿ ಪೂಜ್ಯ ಗಾಂಧೀಜಿಯವರೇ ಅಲ್ಲದೆ ಮಹದೇವ ದೇಸಾಯಿ, ಜಮ್ನಲಾಲ್ ಬಜಾಜ್, ಯೂಸಫ್ ಮೆಹರಾಲಿ, ಡಿ.ಜಿ. ಟೆಂಡಾಲ್ಕರ್, ಅಶೋಕ್ ಮೆಹ್ತಾ ಮೊದಲಾದ ಗಣ್ಯ ರಾಷ್ಟ್ರ ಭಕ್ತರೂ ಇದ್ದರು. ಆ ಜೈಲಿನಲ್ಲಿ ಎದ್ದು ತೋರುತ್ತಿದ್ದ ಪ್ರಾಂತೀಯ ಪಕ್ಷಪಾತವನ್ನು ನಾಯ್ಡು ಅವರು ಪ್ರಬಲವಾಗಿ ಪ್ರತಿಭಟಿಸಿದರು. ಇವರ ಉಪಟಳವನ್ನು ತಾಳಲಾರದೆ ಮತ್ತೆ ಸಜಾ ಹೆಚ್ಚಿಸಲಾಯಿತು. ನಾಯ್ಡು ಅವರ ಗಲಾಟೆ ಅಲ್ಲಿಗೆ ಮುಗಿಯಲಿಲ್ಲ. ಇದನ್ನು ತಡೆಗಟ್ಟಲಾರದೆ ಜೈಲು ಅಧಿಕಾರಿ ಕರ್ನಲ್ ಭಂಡಾರಿಯವರು ಬಾಪೂಜಿಯವರಿಂದ ನಾಯ್ಡು ಅವರಿಗೆ ಉಪದೇಶ ಮಾಡಿಸಿ ಅವರ ಆರ್ಭಟವನ್ನು ತಣ್ಣಗೆ ಮಾಡಬೇಕಾಯಿತು. ಜರ್ಮನ್ ದಿನಪತ್ರಿಕೆಯ ಸಂಪಾದಕನ ಸ್ನೇಹದಿಂದಾಗಿ ಧೂಮಪಾನ ಪ್ರಾರಂಭಿಸಿ ಚುಟ್ಟಾ ಸುಡುವುದರಲ್ಲಿ ಅಗ್ರಗಣ್ಯರಾದರು. ಜೊತೆಯಲ್ಲಿಯೇ ಮಾರ್ಕ್ಸ್ ವಾದವನ್ನು ಸ್ವೀಕರಿಸಿದರು. ಕಾಂಗ್ರೆಸ್ ದಿನಾಚರಣೆಯಂದು ಜೈಲಿನಲ್ಲಿದ್ದ ತನ್ನ ಮಿತ್ರರ ನೆರವಿನಿಂದ ಜೇಡಿಮಣ್ಣನ್ನು ತರಿಸಿ ರಾತ್ರಿಯೆಲ್ಲಾ ನಿದ್ದೆಗೆಟ್ಟು ಆಳೆತ್ತರದ ಕ್ರಾಂತಿವೀರ ಲೆನಿನ್ ಮೂರ್ತಿಯನ್ನು ಸೃಷ್ಟಿಸಿಬಿಟ್ಟರು. ಆ ಮೂರ್ತಿಯಲ್ಲಿ ಸ್ವಾಭಾವಿಕತೆ ಎದ್ದು ತೋರುತ್ತಿತ್ತು.

**ಮನೋವ್ಯಾಧಿ...**

ತುರಂಗವಾಸ ಮುಗಿದು ಹೊರಬಂದ ಮೇಲೆ ನಾಯ್ಡು ಅವರ ಹೃದಯವೇ ಕೊಂಚ ಬೇರೆ ಆಯಿತು. ಅವರ ಮನೋಮಂದಿರಕ್ಕೆ ಯಾವುದೋ ಭೂತಚೇಷ್ಟೆ ಬಂದು ಸೇರಿದಂತಾಯಿತು. ಹೃದಯ ತಲ್ಲಣಗೊಳಿಸುವ ಕಿರಿಕಿರಿ ವಾತಾವರಣದಲ್ಲಿ ತಾವಿದ್ದ ಮಹಡಿಯಿಂದ ಕೆಳಕ್ಕೆ ಧುಮುಕಿ ಜೀವನವನ್ನು ಅಂತ್ಯಗೊಳಿಸುವ ಯತ್ನದಲ್ಲಿ ವಿಫಲರಾದರು. ಈ ಮನೋವಿಪ್ಲವವನ್ನು ಮರೆಯಲು ಪುಸ್ತಕಗಳ ಮೊರೆಹೊಕ್ಕರು. ಯುವಕರನ್ನು ಬ್ರಿಟಿಷ್ ಸರ್ಕಾರದ ವಿರುದ್ಧ ಹುರಿದುಂಬಿಸುವ ಸಲುವಾಗಿ ಒಂದು ಕ್ರಾಂತಿಕಾರಕ ಪತ್ರಿಕೆಯೂ ಹೊರಬಂದಿತು. ಪೊಲೀಸ್ ಚಿತ್ರಗುಪ್ತರ ದೃಷ್ಟಿ ನಾಯ್ಡು ಅವರ ಮೇಲೆ ಹೊರಳಿತು. ನಾಯ್ಡು ಅವರು ತಮ್ಮ ಆತ್ಮೀಯ ಮಿತ್ರರಾದ ಡಾ. ಮೆಹತಾ ಮತ್ತು ಮೆಹರಾಲೀ ಅವರೊಡನೆ ನೆಲಮಾಳಿಗೆ ಸೇರಬೇಕಾಯಿತು. ಅಲ್ಲಿ ಕ್ರಾಂತಿವೀರರ ಚರಿತ್ರೆಗಳ ಅಧ್ಯಯನಕ್ಕೆ ತೊಡಗಿದರು. "ಫ್ರೀ ಪ್ರೆಸ್" ಪತ್ರಿಕೆಯ ಸಂಪಾದಕರಾಗಿದ್ದ ಸದಾನಂದ ಮತ್ತು ವಾಣಿಜ್ಯೋದ್ಯಮಿ ದೀಕ್ಷಿತ್‌ಜಿ ಅವರು ಆಗಾಗ ನಾಯ್ಡು ಜೊತೆ ಸಮಾಲೋಚನೆ ನಡೆಸಿಕೊಂಡು ಹೋಗುತ್ತಿದ್ದರು. ನಾಯ್ಡು ಅವರು ಯುವಕರನ್ನು ಹುರಿದುಂಬಿಸುತ್ತಿದ್ದುದು ಪೊಲೀಸರಿಗೆ ತಲೆ ನೋವು ತಂದಿತು. ಅದನ್ನು ತಡೆಯಲಾಗದೆ ಗುಪ್ತಚಾರರು ಎಡೆಬಿಡದೆ ಅವರನ್ನು ಪತ್ತೆ ಮಾಡಲು ಪ್ರಯತ್ನಿಸಿದರು. ಕೊನೆಗೆ ನಾಯ್ಡು ಸೆರೆ ಸಿಕ್ಕಿ ಮತ್ತೆ ಜೈಲು ಶಿಕ್ಷೆ ಅನುಭವಿಸಬೇಕಾಯಿತು.

ರಾಜಕೀಯ ಬುದ್ಧಿಜೀವಿಗಳಾಗಿದ್ದ ಮೇಹರಾಲಿ, ಮೀನೂ ಮಸಾನಿ, ಅಶೋಕ ಮೆಹ್ತಾ ಮೊದಲಾದವರ ಜೊತೆ ನಾಯ್ಡು ಅವರೂ ಸೇರಿಕೊಂಡು ಸಮಾಜವಾದ ಪಕ್ಷ ಕಟ್ಟಿದರು. ಭಾರತದಲ್ಲಿ ಆರ್ಥಿಕತೆ ಬಗ್ಗೆ "ಪಿಕ್ಟೋರಿಯಲ್ ಎಕನಾಮಿಕ್ಸ್" ಎಂಬ ಸಚಿತ್ರ ವಾರಪತ್ರಿಕೆಯನ್ನು ಎಡೆಬಿಡದೆ ಪ್ರಕಟಿಸುತ್ತಿದ್ದರು. ಇಲ್ಲಿ ನಾಯ್ಡು ಅವರ ಪಾತ್ರ ಬಹು ಹೆಚ್ಚಿನದಾಗಿತ್ತು. ಅಂಥ ಸಚಿತ್ರ ಪತ್ರಿಕೆ ಭಾರತದಲ್ಲಿ ಮತ್ತೆಲ್ಲಿಯೂ ಕಾಣಲಿಲ್ಲ.

ನಾಯ್ಡು ಅವರ ಕ್ರಾಂತಿಕಾರಿ ಚಿತ್ರಗಳನ್ನು ಭಾರತ ಜ್ಯೋತಿ, ಹಿಂದು ಮೊದಲಾದ ಪ್ರಮುಖ ಪತ್ರಿಕೆಗಳು ಪ್ರಕಟಿಸುತ್ತಿದ್ದವು. ಇವುಗಳಲ್ಲಿ ಪ್ರಕಟವಾದ ವ್ಯಂಗ್ಯಚಿತ್ರಗಳನ್ನು ವಿದೇಶಿ ಪತ್ರಿಕೆ ಮ್ಯಾಂಚೆಸ್ಟರ್ ಗಾರ್ಡಿಯನ್ ಪ್ರಕಟಿಸುತ್ತಿತ್ತು. ಭಾರತದ ಬಹುಭಾಗದ ಪತ್ರಿಕೆಗಳು ಇವರ ಚಿತ್ರಗಳನ್ನು ಮರುಪ್ರಕಟಿಸುತ್ತಿದ್ದುವು.

**ಇಂಗ್ಲೆಂಡ್ ಪ್ರವಾಸ**

ಕ್ರಾಂತಿಕಾರಿ ನಾಯ್ಡು ಒಮ್ಮೆ ಇಂಗ್ಲೆಂಡಿಗೆ ಹೋದರು. ಲಂಡನ್ ಮುಟ್ಟುವ ಮೊದಲೇ ಅಲ್ಲಿನ ಪೋಲೀಸ್ ಅಧಿಕಾರಿಗಳಿಗೆ ನಾಯ್ಡು ಬಗ್ಗೆ ಸುದ್ದಿ ಮುಟ್ಟಿತು. ನಾಯ್ಡು ಅವರನ್ನು 'ಸ್ಕಾಟ್ಲೆಂಡ್ ಯಾರ್ಡ್' ಪೋಲೀಸರು ಠಾಣೆಗೆ ಒಯ್ದು ಒಂದು ತಾಸಾದರೂ ಅವರನ್ನು ವಿಚಾರಿಸಲೇ ಇಲ್ಲ. "ತಾವು ಇನ್ನು ಹೋಗಬಹುದೆಂದು" ಹೇಳಿ ಕಳಿಸಿದರು. ಅವರ ಹಿಂದೆ ಗೂಢಾಚಾರರು ಮಾತ್ರ ನಕ್ಷತ್ರಿಕರಂತೆ ಎಡೆಬಿಡದೆ ಬೆನ್ನು ಹತ್ತಿ ತಿರುಗಾಡುತ್ತಿದ್ದರು.

ಲಂಡನ್ನಿನಲ್ಲಿ ಇವರು ಇದ್ದಷ್ಟು ದಿನವೂ ಕಾರ್ಮಿಕರ ಗುಂಪಿನಲ್ಲಿ ಬೆರೆತಿದ್ದರು. ಅವರೊಡನೆ ಜ್ಯೋತಿಬಸು, ರಜನಿ ಪಟೇಲ್, ಕುಮಾರ ಮಂಗಲಂ ಮುಂತಾದ ಭಾರತೀಯರು ಇದ್ದು ಇವರಿಗೆ ನೆರವಾದರು. ಲಂಡನ್ನಿನಿಂದ ಮಾಸ್ಕೋಗೆ ಹೋಗಬೇಕೆಂಬ ಇಚ್ಛೆಯಿತ್ತು. ಆದರೆ ದ್ವಿತೀಯ ಮಹಾಯುದ್ಧ ಪ್ರಾರಂಭವಾಗಿ ಹೋಗಲಾಗಲಿಲ್ಲ. ಆ ವೇಳೆಗೆ ಭಾರತದಿಂದ ಕರೆ ಬಂದಿತು. ಆಗ ಓರ್ವ ವಿದ್ಯಾರ್ಥಿಮಿತ್ರನ ನೆರವಿನಿಂದ ನಾಯ್ಡು ಅವರು ಮರಳಿ ಮಾತೃಭೂಮಿಗೆ ಬಂದರು. ಸ್ವಾತಂತ್ರ್ಯ ಬಂದ ಮೇಲೆ ಅವರ ಗೆಳೆಯರು ರಷ್ಯಾಕ್ಕೆ ಕಳಿಸಲು ಏರ್ಪಾಡು ಮಾಡುವುದಾಗಿ ಹೇಳಿದರೂ ನಾಯ್ಡು ಅವರು ಇಚ್ಛಿಸಲಿಲ್ಲ .

ಬೊಂಬಾಯಿಯಲ್ಲಿ ಕೆಲವು ವರ್ಷ ಕಳೆದು ಒಮ್ಮೆ ಗುಜರಾತಿನ ಸ್ವಾರ್ಥಲಂಪಟರ ವ್ಯಂಗ್ಯಚಿತ್ರವನ್ನು ಶೀಶೆಯ ಆಕೃತಿಯಲ್ಲಿ ರಚಿಸಿ ಪ್ರಕಟಿಸಿದರು. ಆ ಚಿತ್ರದ ಬಗ್ಗೆ ಎಲ್ಲರ ಬಾಯಲ್ಲೂ ಮಾತುಗಳು ಓಡಾಡುತ್ತಿತ್ತು. ಕೊನೆಗೆ ಬೆಂಕಿಪೊಟ್ಟಣದ ಮೇಲೆಯೂ ಆ ಚಿತ್ರ ಕಾಣಿಸಿಕೊಂಡಿತು. ಬೊಂಬಾಯಿಯಿಂದ ಕಲ್ಕತ್ತದವರೆಗೂ ಇವರ ಕೀರ್ತಿ ಮೆರೆಯಿತು.

ಬೊಂಬಾಯಿ ಜೀವನ ಬೇಸರ ಬಂದು ನೇರ ಬೆಂಗಳೂರಿಗೆ ಬಂದು ಮಡಿವಾಳದಲ್ಲಿ ಕೆಲವು ವರ್ಷ ವಾಸವಾಗಿದ್ದರು. ಪ್ರಜಾವಾಣಿಯ ಆಗಿನ ಸಂಪಾದಕರಾಗಿದ್ದ ಟಿ.ಎಸ್. ರಾಮಚಂದ್ರರಾವ್ ಅವರ ಸ್ನೇಹದಿಂದಾಗಿ ಪ್ರಜಾವಾಣಿ, ಡೆಕ್ಕನ್ ಹೆರಾಲ್ಡ್ ಪತ್ರಿಕೆಯ ಮೂಲಕ ನಾಯ್ಡು ಅವರ ವ್ಯಂಗ್ಯಚಿತ್ರ ರೇಖಾಚಿತ್ರಗಳು ಪ್ರಕಟವಾಗಿ ಕನ್ನಡ ನಾಡಿಗೆ ನಾಯ್ಡು ಅವರ ಪರಿಚಯವಾಯಿತು. ಆಗ ಅನೇಕರ ಗಮನ ನಾಯ್ಡು ಅವರ ಚಿತ್ರ ಶಿಲ್ಪಕೃತಿಗಳ ಮೇಲೆ ಹರಿಯಿತು.

ಈ ವೇಳೆ ನಾಯ್ಡು ಪ್ಲಾಸ್ಟರ್ ಶಿಲ್ಪಗಳನ್ನು ರಚಿಸಿದರು. ಲೆನಿನ್, ಸ್ಟಾಲಿನ್, ಶಿವ, ಬುದ್ಧ, ಕ್ರಿಸ್ತ, ಮೇರಿ, ಷಾ, ಕೈಲಾಸಂ, ಮೆನನ್, ಕುವೆಂಪು, ಬೇಂದ್ರೆ, ಠಾಗೂರ್, ಬಿ.ಎಂ.ಶ್ರೀ. ಇವು ಮುಖ್ಯವಾದವು.

೧೯೫೭ರಲ್ಲಿ ನಾಯ್ಡು ಅವರು ಮೈಸೂರಿನ ರಾಜೇಂದ್ರ ನಗರದಲ್ಲಿನ ಕರ್ನಾಟಕ ಗೃಹ ನಿರ್ಮಾಣ ಮಂಡಳಿಯವರು ಕಟ್ಟಿಸಿದ ಕಾರ್ಮಿಕ ಕಾಲೋನಿ ಮನೆಯಲ್ಲಿ ನೆಲೆಸಿ ಅವರ ಕೊನೆ ಜೀವನದವರೆಗೂ ಅಲ್ಲಿಂದ ಕದಲಲಿಲ್ಲ. ಆ ಮನೆಯಲ್ಲೇ ಅವರ ಆಪ್ತಮಿತ್ರರೂ, ಗಣ್ಯವ್ಯಕ್ತಿಗಳೂ (ಪ್ರೊ. ಸಿ.ಡಿ. ನರಸಿಂಹಯ್ಯ, ದೇವರಾಜ ಅರಸ್, ಟೆಂಡೂಲ್ಕರ್, ಟಿ.ಎಸ್. ರಾಮಚಂದ್ರರಾವ್ ಇನ್ನೂ ಅನೇಕರು) ಬಂದು ಭೇಟಿಯಾಗುತ್ತಿದ್ದರು. ಈ ಅವಿವಾಹಿತ ಏಕಾಂಗಿ ಕಲಾತಪಸ್ವಿ ಇಲ್ಲಿ ಏಕಾಂತವಾಗಿ ಕೊನೆ ದಿನಗಳನ್ನು ಕಳೆದರು.

ಚಿತ್ರಗಳನ್ನು ರೇಖಿಸಿದ ಮೇಲೆ ಆರ್.ಎಸ್.ಎನ್. ಏನೋ ಹೊಳೆದು ಕೆಲವೊಮ್ಮೆ ಚಿತ್ರಕ್ಕೆ ಸಂಬಂಧಿಸಿದ ಕೆಲವು ವಾಕ್ಯಗಳನ್ನೂ ಬರೆಯುತ್ತಿದ್ದರು. ನನ್ನ ಸಂಗ್ರಹದಲ್ಲಿರುವ ಅವರ ಸ್ವಾಮಿನಾಥನ್ನರ ರೇಖಾಚಿತ್ರದ ಕೆಳಗೆ ಇಂಗ್ಲಿಷಿನಲ್ಲಿ

'ಪೂರ್ಣಮದಃ ಪೂರ್ಣಮಿದಂ–ಇದರ ಅರ್ಥವೇನು?' ಎಂದು ಪ್ರಶ್ನಿಸಿದ್ದರು. ನನಗೆ ಬರೆದ ಒಂದು ಖಾಸಗೀ ವ್ಯವಹಾರಿಕ ಪತ್ರದಲ್ಲಿ ಅನಿಮಿತ್ತವಾಗಿ ಇಂದಿರಾಗಾಂಧಿಯವರ ರೇಖಾಚಿತ್ರ ಮೂಡಿಸಿದ್ದರು. ಅದರ ಬದಿ ತೈಲಚಿತ್ರ ಬರೆಯ ಹೊರಡುವವನಿಗೆ ಧೈರ್ಯ ಬೇಕು ಎಂಬ ತಮ್ಮ ಅಭಿಪ್ರಾಯದ ವಾಕ್ಯವನ್ನು ಅಡ್ಡಲಾಗಿ ಬರೆದಿದ್ದರು. ಅವರ ಆಂತರ್ಯದಲ್ಲಿ ಸದಾ ಒಂದಲ್ಲ ಒಂದು ಚಿಂತನ ಮಥಿಸುತ್ತಿತ್ತು.

ಅವರು ತಮ್ಮ ಮಿತ್ರರಿಗೆ ಬರೆದ ಇಂಥ ಪತ್ರಗಳ ಸಂಗ್ರಹ ಒಂದು ಸಂಗ್ರಹಾಲಯಕ್ಕೆ ಇಲ್ಲವೆ ಒಂದು ಗ್ರಂಥಕ್ಕೆ ಯೋಗ್ಯವಾದೀತು. ಆದುದರಿಂದ ಇವರು ವಾಸಿಸುತ್ತಿದ್ದ ರಾಜೇಂದ್ರನಗರದಲ್ಲಿನ ಮನೆಯನ್ನೇ ಒಂದು ವಸ್ತುಸಂಗ್ರಹಾಲಯವನ್ನಾಗಿ ಪರಿವರ್ತಿಸುವುದು ತುಂಬಾ ಒಳ್ಳೆಯದು.

**ಸರಳ ವ್ಯಕ್ತಿ**

ನಾಯ್ಡು ಅವರು ಸರಳ ಸ್ವಭಾವದ ಪ್ರಾಮಾಣಿಕ ವ್ಯಕ್ತಿಗಳಾಗಿ ಬಾಳಿದ್ದರು. ಸಹಕಲಾವಿದರ ಬಗ್ಗೆ ಗೌರವ ಸಹಾನುಭೂತಿ ಇತ್ತು. ರಾಜ್ಯ ಪ್ರಶಸ್ತಿ, ಅಕಾಡೆಮಿ ಪ್ರಶಸ್ತಿಗಳು ಅವರ ಮನೆ ಬಾಗಿಲಿಗೇ ಬಂದಿತೇ ವಿನಾ ಅವರಾಗೇ ಆಸೆ ಪಟ್ಟವರಲ್ಲ. ಕರುಣಾಮೂರ್ತಿಗಳಾಗಿದ್ದ ನಾಯ್ಡು ಅವರು ಕಾರ್ಮಿಕರ ನಡುವೆ ವಾಸವಾಗಿ ಅವರ ಕಷ್ಟಸುಖಗಳಲ್ಲಿ ಭಾಗಿಗಳಾಗಿದ್ದರು.

ಓರ್ವ ಯೋಧನಂತೆ ಬಾಳಿದ್ದವರು. ಇವರು ಹುಟ್ಟಿದ್ದು ೨೭.೦೮.೧೯೦೬, ಹಾಗೂ ನಿಧನರಾದುದು ೦೬.೧೧.೧೯೮೬ನೇ ಭಾನುವಾರ. ರವಿಯು ಅಸ್ತಂಗತನಾಗುವಂತೆ ತಮ್ಮ ೮೦ ವರ್ಷಗಳ ಬ್ರಹ್ಮಚಾರಿ ಜೀವನದಲ್ಲಿ ಯಾರೊಬ್ಬರ ಹಂಗಿಗೂ ಜೀವಿಸದೆ ತಮ್ಮ ಇಹಲೋಕವನ್ನು ತ್ಯಜಿಸಿದರು.

ಇಳಿವಯಸ್ಸಿನಲ್ಲೂ ತಮ್ಮ ದಿನನಿತ್ಯದ ಎಲ್ಲಾ ಕರ್ತವ್ಯಗಳನ್ನು ತಾವೇ ಮಾಡಿಕೊಳ್ಳುತ್ತಿದ್ದರು. ಸಾಧ್ಯವಾದಷ್ಟೂ ಇನ್ನೊಬ್ಬರಿಗೆ ತೊಂದರೆ ಕೊಡಬಾರದೆಂಬ ನಿಯಮವನ್ನು ಪಾಲಿಸುತ್ತಿದ್ದರು.

ನಾಯ್ಡು ಅವರು ಮೂರು ಸಾರಿ ಸಾವಿನ ದವಡೆಯಿಂದ ಗೆದ್ದು ಹೊರಬಂದಿದ್ದರು. ಕರುಳುರೋಗ, ಕ್ಯಾನ್ಸರ್ ರೋಗದಿಂದ ಪಾರಾಗಿದ್ದರು. ೧೯೬೮ರಲ್ಲಿ ಕ್ಯಾನ್ಸರ್‌ಗೆ ತುತ್ತಾದರು. ಅದನ್ನು ಪತ್ತೆಮಾಡಿದ ವೈದ್ಯರು ಡಾ. ಸುಬ್ಬಯ್ಯನವರು. ಆಗ ನಾಯ್ಡು ಅವರನ್ನು ಕೆ.ಆರ್.ಆಸ್ಪತ್ರೆಗೆ ಸೇರಿಸಲಾಯಿತು. ಆ ಸಮಯದಲ್ಲಿ ಓರ್ವ ವ್ಯಕ್ತಿ ಇವರಿಂದ ಕೃತಿಗಳ ಸಂಪೂರ್ಣ ಸ್ವಾಮ್ಯವನ್ನು ಪಡೆಯಲು ಯತ್ನಿಸಿದ್ದ. ಇದನ್ನು ತಿಳಿದು ನಾನು ಆ ಕರಾರಿನ ಪತ್ರವನ್ನು ಹಿಂದಕ್ಕೆ ಪಡೆದಾಗ ನಾಯ್ಡು ಅವರಿಗೆ ಸಮಾಧಾನವಾಯಿತು. ಹಾಸಿಗೆ ಹಿಡಿದು ನರಳುತ್ತಿದ್ದ ನಾಯ್ಡು ಅವರು ಅರಿಯದೆ ಸಹಿ ಮಾಡಿದ್ದ ಪತ್ರ ಈಗಲೂ ನನ್ನ ಬಳಿ ಇದೆ.

ಕ್ಯಾನ್ಸರ್ ರೋಗದಿಂದ ಪಾರಾಗಲು ಮೈಸೂರಿನಿಂದ ಬೆಂಗಳೂರಿನ ವಿಕ್ಟೋರಿಯ ಆಸ್ಪತ್ರೆಗೆ ಕರೆತಂದು ನಾಯ್ಡು ಅವರ ಸೋದರಿಯ ಪುತ್ರಿ ಡಾ. ಶೀಲಾರಾವ್ ಅವರ ವಶಕ್ಕೆ ಬಿಟ್ಟೆ. ಆಗ ಡಾ. ಶೀಲಾ ಅವರು ವಿಕ್ಟೋರಿಯಾ ಆಸ್ಪತ್ರೆಯ ಡಾ. ಮಲ್ಲಿಕಾರ್ಜುನಯ್ಯನವರಿಂದ ಯಶಸ್ವಿ ಶಸ್ತ್ರಚಿಕಿತ್ಸೆ ಮಾಡಿಸಿದರು. ಇದರಿಂದಾಗಿ ನಾಯ್ಡು ಅವರಿಗೆ ಮರುಜನ್ಮ ಬಂದಂತಾಯಿತು.

ಮತ್ತೆ ೧೯೮೬ನೇ ಜುಲೈ ತಿಂಗಳಲ್ಲಿ ನಾಯ್ಡು ಅವರು ದೃಷ್ಟಿಹೀನರಾಗಿ ಬಳಲುತ್ತಿದ್ದರು. ಆಗ ಮತ್ತೆ ಡಾ॥ ಶೀಲಾ ಅವರೇ ಬಸಪ್ಪ ಮೆಮೋರಿಯಲ್ ಆಸ್ಪತ್ರೆಗೆ ಸೇರಿಸಿ ಅಲ್ಲಿನ ಮುಖ್ಯ ಆಡಳಿತಾಧಿಕಾರಿ ಡಾ.ಸಿ.ವಿ. ಮೂರ್ತಿಯವರಿಂದ ಶಸ್ತ್ರಚಿಕಿತ್ಸೆ ಮಾಡಿಸಿದರು. ಡಾ॥ ತಿರುಮಲಾಚಾರ್ ಅವರ ಸಹಾಯಕ ವೈದ್ಯರಾಗಿದ್ದರು. ನಾಯ್ಡು ಅವರಿಗೆ ಮತ್ತೆ ದೃಷ್ಟಿ ಸ್ವಲ್ಪ ಬರುವವರೆಗೂ ಡಾ. ಶೀಲಾ ಅವರೇ ನಾಯ್ಡು ಅವರನ್ನು ತಮ್ಮ ಮನೆಯಲ್ಲಿಟ್ಟುಕೊಂಡು ಶುಶ್ರೂಷೆ ಮಾಡುತ್ತಿದ್ದರು.

ಈ ಸಂದರ್ಭದಲ್ಲಿ ನನಗೆ ನಾಯ್ಡು ಅವರನ್ನು ಆಸ್ಪತ್ರೆಗೆ ಸೇರಿಸಿದ ಸುದ್ದಿ ತಿಳಿದು ಬಿ.ಎಂ. ಆಸ್ಪತ್ರೆಗೆ ಹೋದಾಗ ಡಾ. ಗೋವಿಂದಪ್ಪನವರು ಅವರಿಗೆ ಶರೀರ ತಪಾಸಣೆ ಮಾಡುತ್ತಿದ್ದ ಸಂದರ್ಭದಲ್ಲಿ ನನ್ನ ಕಡೆ ತಿರುಗಿ ಡಾ॥ ಗೋವಿಂದಪ್ಪನವರು ಕೈ ತೋರಿಸಿ "ಇವರು ನಿಮಗೆ ಪರಿಚಯವೇ?" ಎಂದು ಪ್ರಶ್ನಿಸಿದರು. ಅದಕ್ಕೆ ನಾಯ್ಡು ಅವರು ಅಭಿಮಾನ ತುಂಬಿ ಮಾತನಾಡಿಸಿದರು.

ನಾಯ್ಡು ಅವರ ಆರ್ಥಿಕ ಪರಿಸ್ಥಿತಿ ಅಷ್ಟಾಗಿ ಚೆನ್ನಾಗಿರಲಿಲ್ಲ. ಅವರಿಗೆ ೫೦೦ ರೂಗಳ ಗೌರವ ಧನ ಕೊಡಿಸಲು ಬಹಳಷ್ಟು ಹೋರಾಟಮಾಡಿ ಕನಕಪುರದ ಎಸ್. ಕರಿಯಪ್ಪ, ಹಾಸನದ ಕೆ.ಎಂ. ರುದ್ರಪ್ಪ ಮುಂತಾದ ಶಾಸಕರ ಮೂಲಕ ಪ್ರಯತ್ನಿಸಿ ಗೌರವ ಧನ ಪಡೆಯುವಂತಾಯಿತು.

ಈಗ ಮತ್ತೆ ಅಸ್ವಸ್ಥರಾಗಿ ಮೈಸೂರಿನ ಮಿಷನ್ ಆಸ್ಪತ್ರೆಗೆ ಸೇರಿಸಿದ ವಿಷಯ ರಾಜೇಂದ್ರನಗರದ ನಿವಾಸಿ ಹಾಗೂ ನಾಯ್ಡು ಅವರ ಅಭಿಮಾನಿ ಎಸ್.ಎನ್. ರಾಮಕೃಷ್ಣ ನಮ್ಮ ಮನೆಗೇ ಬಂದು ಸುದ್ದಿ ಮುಟ್ಟಿಸಿದರು. ಆಗ ತಕ್ಷಣವೇ ನಾನು ಮತ್ತು ಎಂ.ಇ. ಗುರು ಇಬ್ಬರೂ ಹೋಗಿ ಅವರ ಸ್ಥಿತಿಯನ್ನು ನೋಡಿದಾಗ ವ್ಯಾಕುಲವಾಯಿತು. ಅನಂತರ ಲಲಿತಕಲಾ ಅಕಾಡೆಮಿ ಮತ್ತು ಮುಖ್ಯಮಂತ್ರಿಗಳ ಗಮನಕ್ಕೆ ತರಲಾಗಿ ಒಟ್ಟು ಐದುಸಾವಿರ ರೂಪಾಯಿಗಳು ನಾಯ್ಡು ಅವರ ವೈದ್ಯಕೀಯ ನೆರವಿಗೆ ದೊರೆಯಿತು. ಜನತಾ ಮುಖ್ಯಮಂತ್ರಿ ರಾಮಕೃಷ್ಣ ಹೆಗ್ಗಡೆ ಅವರ ಉದಾರ ಗುಣಗಳನ್ನು ನಾಯ್ಡು ಕೊಂಡಾಡಿದರು.

ಗುಣಮುಖರಾಗಿ ಮನೆಗೆ ಹೋದವರು ಮತ್ತೆ ಶನಿವಾರ (೦೫.೧೦.೮೫) ಮಧ್ಯಾಹ್ನ ಆಸ್ಪತ್ರೆಗೆ ಸೇರಿಸಲಾಯಿತು. ಪ್ರಜ್ಞಾಹೀನರಾಗಿದ್ದರು. ತಕ್ಷಣ ನಾವು ಕೆಲವು ಕಲಾವಿದರು ಆಸ್ಪತ್ರೆಗೆ ಧಾವಿಸಿದೆವು. ಅವರ ಸ್ಥಿತಿ ಚಿಂತಾಜನಕವಾಗಿತ್ತು. ತೆರೆದ ಕಣ್ಣುಗಳು ಮರಣಮುಖದಲ್ಲಿದ್ದಾರೆ ಎಂದೆನಿಸಿತು. ನನಗೆ ದುಃಖ ತಡೆಯದಾಯಿತು. ಕೊನೆಯಲ್ಲಿ ನನ್ನೊಡನೆ ಮಾತನಾಡಲಿಲ್ಲವಲ್ಲ ಎನಿಸಿತು. 'ನಾನು ತಿಪ್ಪೇಸ್ವಾಮಿ' ಎಂದು ಗಟ್ಟಿಯಾಗಿ ಕೂಗಿಕೊಂಡೆ. ಪಕ್ಕದಲ್ಲಿರುವ ರೋಗಿಗಳಿಗೆ ನನ್ನ ಕೂಗು ವಿಚಿತ್ರವಾಗಿ ಕಂಡಿರಬೇಕು. ನನ್ನ ಕೂಗು ನಾಯ್ಡು ಅವರ ಸ್ಮೃತಿಗೆ ಮುಟ್ಟಿರಬೇಕು. ನನ್ನ ಕಡೆ ತಲೆ ಹೊರಳಿಸಿ 'ಊ' ಎಂದರು, ಅದೇ ಮಾತು ಕೊನೆಯಾಯಿತು.

ಕಲಾವಿದ ಸೂಫಿ, ಗುರು, ರಂಗಕಲಾವಿದ ಬಿ.ಎಸ್. ಕೇಶವಮೂರ್ತಿ, ಮೃತ್ಯುಂಜಯಾಚಾರ್ಯರ ಕಣ್ಣುಗಳು ತೇವಗೊಂಡವು. ಅಂದು ಭಾನುವಾರ ತಾ. ೦೬.೧೦.೮೫ರ ೪ ಗಂಟೆ ವೇಳೆಗೆ ಕೊನೆಯುಸಿರೆಳೆದರು.

ಪಕ್ಕದಲ್ಲಿ ಇವರ ಸೋದರಿಯ ಮಗಳು ಡಾ. ಶೀಲಾ ಮತ್ತು ಅವರ ತಾಯಿ ಸುಲೋಚನಮ್ಮ, ಪತಿ ಕೇಶವಗೋಪಾಲ್ ನಾಯ್ಡು ಇದ್ದರು. ಇವರ ಪಾರ್ಥಿವಶರೀರವನ್ನು ಇವರು ಬಾಳಿದ್ದ ರಾಜೇಂದ್ರನಗರದ ಮನೆಗೆ ಸಾಗಿಸಲಾಯಿತು. ಅಲ್ಲಿ ಯಾವ ಸಂಸ್ಕಾರವನ್ನೂ ಮಾಡದೆ (ನಾಯ್ಡು ಅವರು ಬದುಕಿದ್ದಾಗ ತಿಳಿಸಿದ್ದ ಇಚ್ಛೆಯಂತೆ) ಸ್ಮಶಾನ ಯಾತ್ರೆಗೆ ಸಿದ್ಧಪಡಿಸಲಾಯಿತು.

**ಅಂತಿಮ ದರ್ಶನ**

ರಾಜೇಂದ್ರನಗರದಲ್ಲಿ ನಾಯ್ಡು ಅವರಿಂದ ಬಿಸ್ಕತ್ತು, ಪೆಪ್ಪರಮೆಂಟನ್ನು ಪಡೆದ (ಈಗ ಯುವಕರಾಗಿದ್ದಾರೆ) ಬಾಲಕರು ಹಾಗೂ ನಿವಾಸಿಗಳು ಕ್ಷಣಮಾತ್ರದಲ್ಲಿ ಅವರ ಮನೆಯ ಮುಂದೆ ಸೇರಿ ತಮ್ಮ ದುಃಖವನ್ನು ವ್ಯಕ್ತಪಡಿಸಿ ಅಂತಿಮ ಗೌರವವನ್ನು ಅರ್ಪಿಸಿದರು. ಅಸಂಖ್ಯಾತ ಜನದಟ್ಟಣೆ. ಅಲ್ಲಿ ಬಡಕಾರ್ಮಿಕರ ನಡುವೆ ಬಾಳಿದ್ದ ೩೦ ವರ್ಷಗಳ ಬದುಕಿನ ಕೀರ್ತಿಯನ್ನು ಉಳಿಸಿಕೊಂಡ ಅವರ ಪಾರ್ಥಿವಶರೀರ ಸ್ಮಶಾನ ಯಾತ್ರೆಗೆ ತೆರಳಿತು.

ರುದ್ರಭೂಮಿಯಲ್ಲಿ ಮಾಜಿ ಶಾಸಕರಾದ ಹಾಗೂ ನಾಯ್ಡು ಅವರ ಹಿತಚಿಂತಕರಾದ ಎಂ. ಸತ್ಯನಾರಾಯಣರಾವ್, ಡಿ.ವಿ.ಕೆ. ಮೂರ್ತಿ, ಹಾಗೂ ನಾಯ್ಡು ಅವರ ಅತೀವ ಸಂಪರ್ಕದಲ್ಲಿದ್ದ ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್‌ನ ಮಾಲೀಕರಾದ ಶ್ರೀ ಜಿ.ಹೆಚ್. ರಾಮರಾವ್ ನಾಯ್ಡು ಅವರ ಪಾರ್ಥಿವಶರೀರವನ್ನು ಎದುರ್ಗೊಂಡು ತಮ್ಮ ನೆಚ್ಚಿನ ಗೆಳೆಯನಿಗೆ ಅಂತಿಮ ಗೌರವ ನೀಡಿದರು.

ರುದ್ರಭೂಮಿಯಲ್ಲಿ ಅವರ ಪಾರ್ಥಿವಶರೀರವನ್ನು ಚಿತೆಯ ಮೇಲೆ ಸಜ್ಜುಗೊಳಿಸಲು ೧೦೦೮ ಗಣಪತಿ ಸೇವಾ ಮಂಡಳಿಯವರು ಹಾಗೂ ರಾಜೇಂದ್ರ ನಗರದ ಗೆಳೆಯರ ಬಳಗದವರೂ ಕಲಾವಿದ ಗುರು, ಶಿಲ್ಪಿ ಮೃತ್ಯುಂಜಯಾಚಾರ್, ರೂಪರಾಜ್, ನಾಯ್ಡು ಅವರ ಕೊನೆಯ ದಿನಗಳಲ್ಲಿ ಆಸ್ಪತ್ರೆಗೆ ಸೇರಿಸಿ ಊಟೋಪಚಾರಗಳನ್ನು ನೋಡಿಕೊಳ್ಳುತ್ತಿದ್ದ ಜಗದೀಶ್, ರಂಗಕಲಾವಿದ ಬಿ.ಜಿ. ರಾವ್, ರಾಂಸಿಂಗ್ (ಬಾಬು) ಮಂಟೆಲಿಂಗಯ್ಯ ಹಾಗೂ ನಾಯ್ಡು ಅವರ ಮೊದಲಿನಿಂದಲೂ ಅಭಿಮಾನಿಗಳಾಗಿದ್ದ ರಾಮಕೃಷ್ಣ ಮೊದಲಾದವರು ಚಿತಾಸಿದ್ಧತೆ ಮಾಡಿದರು.

ನಾಯ್ಡು ಅವರ ಸೋದರಿಯ ಪತಿ ಕೇಶವಗೋಪಾಲನಾಯ್ಡು ಅವರು ಮೊದಲು ಚಿತೆಗೆ ಅಗ್ನಿ ಸ್ಪರ್ಶ ಮಾಡಿದರು. "ಆರ್.ಎಸ್.ಎನ್. ಅಮರವಾಗಲಿ" ಎಂಬ ಶಬ್ದ ಘೋಷದೊಂದಿಗೆ ಚಿತಾಗ್ನಿಯ ಮಡಿಲಲ್ಲಿ ನಾಯ್ಡು ಅವರ ಶರೀರ ಲೀನವಾಗಿ ಹೋಯಿತು.

ನಮ್ಮೆಲ್ಲರ ಕಣ್ಣುಗಳೂ ತೇವವಾದುವು. ಭಾರವಾದ ಹೃದಯದಿಂದ ಹಿಂದಿರುಗಿದೆವು. ೪೦ ವರ್ಷಗಳ ಹಿಂದೆ ನಿರಂಜನರಿಂದ ಪರಿಚಯವಾದ ನಾಯ್ಡು ನಮ್ಮೆಲ್ಲರಿಂದ ದೂರವಾದರು.

ವಿಶ್ವದಲ್ಲಿಯೇ  ಇಂತಹ ಶಿಲ್ಪಿ ಅಪರೂಪ. ಯಾವ ಕಲಾಶಾಲೆಯಲ್ಲಿಯೂ ಯಾವ ಗುರುವಿನಿಂದಲೂ ಕಲಾಭ್ಯಾಸ ನಡೆಸದೆ ಸ್ವಶಕ್ತಿಯಿಂದ ರೂಢಿಸಿಕೊಂಡ ಕಲೆ ಇವರದಾಗಿತ್ತು. ನಾಯ್ಡು ಅವರು ಯಾವುದೋ ಮಾನಸಿಕ ಒತ್ತಡದಿಂದ ತೆರೆಮರೆಯಾಗಿದ್ದಂತೆ ಕಾಣುತ್ತಿದ್ದರು.

ಕೀರ್ತಿಶನಿಗೆ ಎಂದೂ ನಾಯ್ಡು ಬಲಿಬಿದ್ದವರಲ್ಲ. ಕಷ್ಟಪರಿಸ್ಥಿತಿಯಲ್ಲಿರುವ ಯಾವ ಕಲಾವಿದನಿಗೇ ಆಗಲಿ, ಮತ್ತಾರಿಗೇ ಆಗಲಿ ತಮ್ಮ ಕೈಲಿ ಇದ್ದುದನ್ನು ದಾನಮಾಡುವ ದೊಡ್ಡ ಗುಣ ಇವರಿಗಿತ್ತು. ಒಳ್ಳೆಯ ಗುಣಕ್ಕೆ ಬೆಲೆ ಕೊಡುತ್ತಿದ್ದರು. ಯಾವ ಪ್ರತಿಷ್ಠಿತ ವ್ಯಕ್ತಿಗೂ ತಲೆಬಾಗುತ್ತಿರಲಿಲ್ಲ. ಈ ಸ್ವಾರ್ಥ ಪ್ರಪಂಚದ ನಮ್ಮ ನಡುವೆ ನಿಸ್ವಾರ್ಥಿಯಾಗಿ ತಮ್ಮ ಸುದೀರ್ಘ ೮೦ ವರ್ಷಗಳು ಪ್ರಾಮಾಣಿಕ ಜೀವನ ನಡೆಸಿಕೊಂಡು ಬಂದದ್ದು ಒಂದು ಪವಾಡ.

*(ಪ್ರಕಟನೆ: ಎಸ್.ಎನ್.ರಾಮಕೃಷ್ಣರಾವ್, ಮೈಸೂರು)*





# ಬ್ಯಾರೆಗೆ ಭ್ರಮಿಸಿದ ಆರ್.ಎಸ್.ಎನ್.

■ *ಬಿ.ವಿ.ಕೆ. ಶಾಸ್ತ್ರೀ*

**ಶಿಲ್ಪಿ, ಸ್ವಾಂತಂತ್ರ್ಯ ಯೋಧ, ವಿಚಾರವಾದಿ**

ಸುಮಾರು ೧೫-೨೦ ವರುಷಗಳ ಹಿಂದೆ ಇರಬಹುದು, ಪ್ರಜಾವಾಣಿ ಕಾರ್ಯಾಲಯಕ್ಕೆ ಹೋದಾಗ ನನ್ನ ಕೆಲವು ಸ್ನೇಹಿತರ ಬಳಿ ಪ್ಲಾಸ್ಟರ್ ಕೃತಿ ರಷ್ಯದ ಪ್ರಸಿದ್ಧ ಸಾಹಿತಿ ಮ್ಯಾಕ್ಸಿಂ ಗಾರ್ಕಿಯವರ ಪ್ರತಿಮೆಯೊಂದಿರುತ್ತಿತ್ತು. ನೋಡಿದೊಡನೆ ನಮ್ಮ ದೃಷ್ಟಿಯನ್ನು ಸೆಳೆದು ನಿಲ್ಲಿಸುವಂತಹ ಒಂದು ವಿಶೇಷ ಗುಣವಿದ್ದಿತು ಅದರಲ್ಲಿ, ಎಲ್ಲವೂ ದಿಟ್ಟ ಮತ್ತು ದೃಢ. ಅದನ್ನು ಮಾಡಿದವರಾರೆಂದು ವಿಚಾರಿಸಿದೆ. ಆಗಲೇ ನನಗೆ ಆರ್.ಎಸ್.ನಾಯುಡು ಅವರ ವ್ಯಕ್ತಿತ್ವದ ಅನುಭವವಾದುದು.

**ಚಿತ್ರಪತ್ರ**

ಈ ಶಿಲ್ಪವೇ ಅಲ್ಲದೆ ಆ ಕಚೇರಿಯಲ್ಲಿ ಅನೇಕರ ಬಳಿ ನಾಯುಡು ಅವರು ಬರೆದ ಕಾಗದಗಳೂ ಇದ್ದುವು. ಅವರಿಂದ ಬಂದ ಕಾಗದದ ವಿಷಯವು ಕಹಿ ಇರಬಹುದು, ಸಿಹಿ ಇರಬಹುದು. ಆದರೆ ಮಿಕ್ಕ ಕಾಗದಗಳಂತೆ ಅವುಗಳನ್ನು ಬಿಸಾಡಲು ಯಾರೂ ಇಷ್ಟಪಡುತ್ತಿರಲಿಲ್ಲ. ಏಕೆಂದರೆ ಒಂದೊಂದು ಕಾಗದವೂ ಒಂದೊಂದು ಚಿತ್ರಕೃತಿ. ಅದರಲ್ಲಿನ ಚಿತ್ರವಿನ್ಯಾಸ ಕಾಗದದಲ್ಲಿ ಬರೆದ ಒಕ್ಕಣೆಗೆ ಸಂಬಂಧಿಸಿರಬಹುದು. ಅಥವಾ ಇಲ್ಲದಿರಬಹುದು. ಆದರೆ ಕೃತಿಗಳಲ್ಲಿ ಒಂದು ರೀತಿಯ ಲವಲವಿಕೆ, ಒಂದು ರೀತಿಯ ನಿರ್ಣಯ ಅನುಭವವಾಗುತ್ತಿತ್ತು. ಕೆಲವು ಆಕೃತಿಗಳು "ಡೂಡ್ಲ್" ಮಾದರಿಯ ಗೀಚಿದ ಚಿತ್ತಾರ, ಇನ್ನು ಕೆಲವು ಒಳ್ಳೆಯ ಪ್ರಮಾಣದಿಂದ ಕೂಡಿದಂತಹವು. ಇವುಗಳ ಮಧ್ಯೆ ಆ ಕಾಗದಗಳಲ್ಲಿರುತ್ತಿದ್ದ ಒಕ್ಕಣೆಯದೇ ಒಂದು ವಿಶೇಷ ವೈಖರಿ. ಆ ಅಕ್ಷರಗಳು, ಆ ಕಾಗದ ಬರೆದ ರೀತಿ ಇವುಗಳನ್ನು ಒಟ್ಟು ನೋಡಿದಾಗ ಕೈಲಾಸಂ ಅವರ ನೆನಪು ಬರುತ್ತಿದ್ದಿತು.

ಆ ಹೋಲಿಕೆ ಒಂದು ರೀತಿ ಸರಿಯೇ ಎನ್ನಿಸುತ್ತದೆ. ಏಕೆಂದರೆ ಕೈಲಾಸಂ ಮತ್ತು ಆರ್.ಎಸ್.ನಾಯುಡು ಇವರಿಬ್ಬರ ಜೀವನದಲ್ಲಿಯೂ ಅನೇಕ ವಿಷಯಗಳಲ್ಲಿ ಸಾಮ್ಯವಿದೆ. ಇಬ್ಬರ ಜೀವನದ ಬಾಲ್ಯ ಕಾಲದ ಗುರಿಯೇ ಬೇರೆ, ಆದರೆ ಮುಂದೆ ಆದ ರೀತಿಯೇ ಬೇರೆ. ಆದರೆ ಮುಂದೆ ಮನಸ್ಸು ಮಾಡಿದ್ದರೆ ಅನೇಕರಂತೆ ಉದ್ಯೋಗ, ಸಂಸಾರ, ಮಕ್ಕಳು ಮೊಮ್ಮಕ್ಕಳು, ಕೈ ತುಂಬ ಹಣ ಸಂಪಾದಿಸಿ, ತಲತಲಾಂತರದಿಂದ ಸಮಾಜದಲ್ಲಿ ಬಂದ ಜಾಡನ್ನೇ ಅನುಸರಿಸಿ ನೆಮ್ಮದಿಯಿಂದ ಜೀವನವನ್ನು ತಳ್ಳಬಹುದಾಗಿತ್ತು. ಆದರೆ ಇಬ್ಬರ ಜೀವನವೂ ಎಲ್ಲಿಯೋ ಒಂದು ಘಟ್ಟದಲ್ಲಿ ಕಂಬಿ ಬಿಟ್ಟು ಸರಿಯಿತು. ತನ್ನದೇ ಒಂದು ಜಾಡು ಹಿಡಿಯಿತು. ಮಿಕ್ಕವರಿಗೆ ಅಶಿಸ್ತು ಎನ್ನಿಸಿದರೂ ಅದರದೇ ಒಂದು ರೀತಿಯ ಶಿಸ್ತು, ಒಂದು ಗುರಿ.

ನಾಯುಡು ಅವರನ್ನು ಏನೆಂದು ನಿಶ್ಚಯಿಸುವುದೇ ಕಷ್ಟ. ಒಂದು ರೀತಿಯ ಸಮಸ್ಯಾ ಪುರುಷ ಎನ್ನಲೂಬಹುದು. ಅವರ ಮಾತಿನ ವಿಷಯಗಳು, ಅದರ ಹಿಂದಿನ ಜ್ಞಾನ ವಾದವೈಖರಿ ಮುಂತಾದವನ್ನು ಗಮನಿಸಿದರೆ ನಾಯುಡು ಆಂಗ್ಲೇಯರು ನಡೆಸುವ "ಪಬ್ಲಿಕ್" ಸ್ಕೂಲ್ (ಹೆಂಗಸರ ಕಾನ್ವೆಂಟ್ ರೀತಿಯ ಗಂಡಸರ ಶಾಲೆ) ವಿದ್ಯಾರ್ಥಿಯಾಗಿದ್ದಂತೆ ಅನ್ನಿಸುವುದು. ಆದರೆ ಅವರು ಓದಿದುದೆಲ್ಲಾ ನಮ್ಮ ದೇಶೀ ಶಾಲೆಗಳಲ್ಲೇ. ಪತ್ರಿಕಾ ವ್ಯವಸಾಯ ಮಾಡಿದಾಗ ಆರ್.ಎಸ್.ಎನ್. ಬರೆದ ವ್ಯಂಗ್ಯ ಚಿತ್ರಗಳು ಭಾರತವೇ ಅಲ್ಲದೆ ವಿದೇಶಗಳಲ್ಲಿಯೂ ಪ್ರಸಿದ್ಧಿಯಾಗಿದ್ದುವು. ಆದರೆ ಅವರು ಪತ್ರಿಕೋದ್ಯಮಿಯಲ್ಲ. ಜೈಲು ವಾಸವು ಇಂದು ರಾಜಕೀಯದ ಲಾಭಕ್ಕೆ ಸರ್ಟಿಫಿಕೇಟ್ ಆದಲ್ಲಿ, ನಾಯುಡು ನೈಜ ಸತ್ಯಾಗ್ರಹಿ. ಗಾಂಧಿ, ಮಹದೇವ ದೇಸಾಯ್, ಜಮ್ನಾಲಾಲ್ ಬಜಾಜ್, ಅಚ್ಚುತ್ ಪಟವರ್ಧನ್ ಮುಂತಾದವರೊಂದಿಗೆ ಜೈಲು ವಾಸವನ್ನನುಭವಿಸಿ ಅಲ್ಲಿ ಕೋಲಾಹಲ ಉಂಟು ಮಾಡಿದವರು, ಆದರೆ ರಾಜಕಾರಣಿಯಲ್ಲ. "ಗರೀಬಿ ಹಟಾವ್" ಇಂದು ಮಾರ್ಜಾಲ ಜಪವೆನ್ನಿಸಿದೆ. ಆದರೆ ನಾಯುಡು ಹೃತ್ಪೂರ್ವಕವಾಗಿ ಗರೀಬರ ಪರ. ಅದು ಅವರ ಜೀವನದ ಧ್ಯೇಯ. ಅದಕ್ಕಾಗಿ ಜೈಲಿನಲ್ಲಿ ಕಷ್ಟಕ್ಕೊಳಗಾದರು. ಅದರಿಂದ ಮಾರ್ಕ್ಸ್‌ವಾದಿಗಳ ಆಪ್ತ ಸ್ನೇಹಿತರೂ ಆದರು. ಕಮ್ಯೂನಿಸ್ಟ್ ಪಕ್ಷದ ಪಿ.ಸಿ. ಜೋಷಿ, ಅಧಿಕಾರಿ, ರಣದಿವೆ, ಚಾರಿ ಮುಂತಾದವರೆಲ್ಲಾ ನಾಯುಡು ಅವರ ಆಪ್ತಮಿತ್ರರೇ. ಅವರಿಗೆ ನಾಯುಡು ಅವರು 'ಆರ್.ಎಸ್.ಎನ್.' ಆದರೆ ನಾಯುಡು ಕಮ್ಯೂನಿಸ್ಟ್ ಪಕ್ಷದ ಸದಸ್ಯರಲ್ಲ. ಕೇವಲ ನಿಮಿಷಗಳಲ್ಲಿ, ಬೇಕಾದರೆ ಕಣ್ಣು ಮುಚ್ಚಿಕೊಂಡು ಉತ್ತಮವಾದ ಹಾಗೂ ದಿಟ್ಟ ಮತ್ತು ಖಚಿತವಾದ ಚಿತ್ರಗಳನ್ನು ಬರೆಯಬಲ್ಲರು. ಮಣ್ಣಿನಲ್ಲಿ, ಕೇವಲ ಗಂಟೆಗಳ ಕಾಲದಲ್ಲಿ, ಹತ್ತಾರು ವರುಷ ನುರಿತ ಶಿಲ್ಪಿಗಳಂತೆ ಶಿಲ್ಪ ರಚಿಸಬಲ್ಲರು. ಆದರೆ ಕಲೆಯ ಕ್ರಮಬದ್ಧ ಓಂ ನಾಮವನ್ನೂ ಕಲಿತವರಲ್ಲ. ಅದರ ಜೊತೆಗೆ ತಾವು ಮಾಡಿದ ಈ ಉತ್ತಮ ಶಿಲ್ಪಗಳ ಪ್ರಶಂಸೆಯನ್ನೂ ಸಹಿಸರು. ಇಂತಹ ವೈವಿಧ್ಯಮಯ ಗುಣಗಳಿವೆ, ಇಂತಹ ಪ್ರತಿಭೆಯಿದೆ.

ಆದರೆ ನಾಯುಡು ಅದಾವುದಕ್ಕೂ ಭದ್ರವಾಗಿ ಅಂಟಿದಂತಿಲ್ಲ. ಇಂಗ್ಲಿಷಿನಲ್ಲಿ "ಮೈನಸ್ ಗ್ರಾವಿಟಿ" ಎನ್ನುವರಲ್ಲ ಹಾಗೆ ತೇಲುತ್ತಿದ್ದಾರೆ. ಇಂತಹ ವ್ಯಕ್ತಿಯನ್ನು ಏನೆಂದು ನಿರ್ಣಯಿಸಬಹುದು? ಕಷ್ಟವೇ ಹೌದು.

ಈ ಸಂದರ್ಭದಲ್ಲಿ ಮೊದಲೇ ಪ್ರಸ್ತಾಪಿಸಿದ "ಗಾರ್ಕಿ" ಪ್ರತಿಮೆಯನ್ನೇ ಅಂದರೆ ಅದು ನಿರ್ಮಿತವಾದ ರೀತಿಯನ್ನೇ ನೆನೆಸಿಕೊಳ್ಳಬಹುದು. ನಾಯ್ಡು ಅವರ ಮಾತಿನ ಪ್ರವಾಹದಲ್ಲಿ ಅನೇಕ ವಿಷಯಗಳು ತೇಲಿ ಬರುತ್ತವೆ. ನನ್ನ ಸ್ನೇಹಿತರಾದ ಸುಧಾ ಸಂಪಾದಕ ಇ.ಆರ್. ಸೇತೂರಾಮ್‌ರೊಂದಿಗೆ ಒಮ್ಮೆ ಹೀಗೆಯೇ ಕಲೆಯ ವಿಷಯ ಚರ್ಚೆಗೆ ಬಂದಿತು. ಚಿತ್ರ, ಅದರ ಗುಣಗಳು, ವಿಸ್ತಾರ ಇದಕ್ಕೆ ಇಂಗ್ಲಿಷಿನಲ್ಲಿ "ಡೈಮನ್ಷನ್" ಎನ್ನುತ್ತಾರೆ. "ಚಿತ್ರದಲ್ಲಿ ಎರಡು ರೀತಿಯ ವಿಸ್ತಾರ, ಉದ್ದ ಮತ್ತು ಅಗಲ. ಮೂರನೆಯ ವಿಸ್ತಾರ ಅಥವಾ ಆಳದ ಭ್ರಮೆಯನ್ನುಂಟು ಮಾಡುವಂತೆ ವರ್ಣ ವಿನ್ಯಾಸ ಮಾಡಬೇಕಾಗುತ್ತದೆ. ಆದರೆ ಶಿಲ್ಪದಲ್ಲಿ ಹಾಗಲ್ಲ. ಮೂರನೆಯ ವಿಸ್ತಾರವು ಬಹು ಮುಖ್ಯ. ಜೇಡಿಮಣ್ಣು ಕೊಡಿಸಿ, ಅದರ ವೈಖರಿಯನ್ನು ತೋರಿಸುತ್ತೇನೆ" ಎಂದರು. ಆರ್.ಎಸ್.ಎನ್. ಅವರನ್ನು ಶಿಲ್ಪಿ ವಾದಿರಾಜರ ಬಳಿ ಕರೆದುಕೊಂಡು ಹೋಗಿ ಜೇಡಿಮಣ್ಣಿಗೆ ವ್ಯವಸ್ಥೆ ಮಾಡಿದರು ಸೇತೂರಾಮ್.

### ಮೂರು ಗಂಟೆಗಳಲ್ಲಿ

ಅವರ ಪಾಡಿಗೆ ನಾಯುಡು ಮಣ್ಣಿನಲ್ಲಿ ಆಡುತ್ತಾ ಕೈ ಕೆಸರು ಮಾಡಿಕೊಳ್ಳುತ್ತಿರಬಹುದೆಂದು ನಮ್ಮ ಸ್ನೇಹಿತರು ಭಾವಿಸಿದರು. ಜೇಡಿಮಣ್ಣು ಗುಡ್ಡೆ ಹಾಕಿಕೊಂಡು ಕುಳಿತ ನಾಯುಡು ಆವೇಶ ಬಂದಂತೆ ಕೈ ಆಡಿಸುತ್ತಾ ಮೂರು ಗಂಟೆಗಳ ಕಾಲದಲ್ಲಿ ಗಾರ್ಕಿಯ ಪ್ರತಿಮೆಯನ್ನು ಸಿದ್ಧಪಡಿಸಿದರು. ವಾದಿರಾಜರ ಸಹಾಯದಿಂದ ಪ್ಲಾಸ್ಟರ್ ಅಚ್ಚನ್ನು ರಚಿಸಿಕೊಂಡರು. ಆನಂತರ ಕೃತಿಯ ಪ್ಲಾಸ್ಟರ್ ಪ್ರತಿಗಳನ್ನು ಸಿದ್ಧಪಡಿಸಿಕೊಂಡರು. ಇದಿಷ್ಟೂ ನಾಲ್ಕೈದು ದಿನಗಳಲ್ಲಿ. ಅದೊಂದು ವಿಶೇಷ ರೀತಿಯ ಅನುಭೂತಿ, ಸ್ಫೂರ್ತಿಯುತವಾದ ಕೈಚಳಕ ನಿರ್ಣಯ.

### ಅಪೂರ್ವ ಕೃತಿ

ಗಾರ್ಕಿಯ ಶಿಲ್ಪವು ಪ್ರಸಿದ್ಧ ಶಿಲ್ಪಿ ರೋದಾನ್ ಅವರ ಕೃತಿಗಳನ್ನು ನೆನಪಿಗೆ ತರುವಂತಿದ್ದರೆ, ಆರ್.ಎಸ್.ಎನ್. ರಚಿಸಿದ ಬರ್ನಾರ್ಡ್ ಷಾ ಶಿಲ್ಪ ಇನ್ನೊಂದು ರೀತಿಯದು, ಅದು "ಕ್ಯೂಬಿಸ್ಟ್" ಶೈಲಿಯದು. ಪಾಶ್ಚಾತ್ಯರಲ್ಲಿಯೂ ಈ ರೀತಿಯ

ಶಿಲ್ಪವು ವಿರಳವೆನ್ನಿಸಬಹುದು. ಎಲ್ಲಾ ನೇರವಾದ ಗೆರೆ, ಚೌಕ, ಕೋಣ, ತಿರುವುಗಳಿಲ್ಲ. ನೋಡಿದೊಡನೆಯೆ ಷಾ ಅವರ ವ್ಯಕ್ತಿತ್ವದ ಅನುಭವವಾಗುವಂತಿದೆ. ಇದಕ್ಕೆ ಮೂಲ ಸ್ಫೂರ್ತಿ ಹೊಸದಾಗಿ ಕಟ್ಟಿದ ಒಂದು ಚರ್ಚ್. ಅದರ ಚೌಕಾಕೃತಿಯ ಕಿಟಕಿ ಗೋಡೆಗಳ ಗೆರೆ ಮುಂತಾದುವನ್ನು ನೋಡುತ್ತಾ ನಾಯುಡು ಹೇಳಿದರಂತೆ "ಅದನ್ನು ಒಟ್ಟು ಸೇರಿಸಿ ನೋಡಿದರೆ ಬರ್ನಾರ್ಡ್ ಷಾ ಸ್ಮೃತಿಗೆ ಬರುತ್ತಿದೆ. ನೋಡುತ್ತಿರಿ. ಅವರದೇ ಒಂದು ಶಿಲ್ಪವನ್ನು ರಚಿಸುತ್ತೇನೆ" ಅಂದರಂತೆ. ಒಂದು ವಾರದೊಳಗೆ ಶಿಲ್ಪವೂ ಸಿದ್ಧವಾಯಿತು. ದಂಗು ಬಡಿಯುವಂತಹುದು–ಈ ಷಾ ಮೂರ್ತಿ. ಇದರಲ್ಲಿ ಇನ್ನೂ ಒಂದು ವಿಶೇಷವಿದೆ. ಬರ್ನಾರ್ಡ್ ಷಾ ಈ ಯುಗದ ಪ್ರಸಿದ್ಧ ನಾಟಕಕಾರನೇ ಸರಿ. ಆದರೆ ಅವನಿಗೂ ಹಿಂದೆ ಒಬ್ಬ ಪ್ರಸಿದ್ಧನಾದ ನಾಟಕಕಾರ ಇರಲಿಲ್ಲವೇ ಷೇಕ್ಸ್‌ಪಿಯರ್. ಇಂಗ್ಲಿಷ್ ನಾಟಕಗಳ ಪ್ರಸ್ತಾಪ ಬಂದಾಗ ಷಾ ಹೆಸರೆತ್ತಿದರೆ ಷೇಕ್ಸ್‌ಪಿಯರನ ಹೆಸರೂ ನೆನಪಿಗೆ ಬರುವುದಿಲ್ಲವೇ? ಅದರ ಸಂಕೇತವಾಗಿ ಈ ಶಿಲ್ಪದಲ್ಲಿ ಕಡೆದಿರುವ ಉದ್ದುದ್ದ ಚತುಷ್ಕೋಣಗಳ ಮಧ್ಯೆ ಗಡ್ಡದಲ್ಲಿ ಷೇಕ್ಸ್‌ಪಿಯರನ ಪುಟ್ಟ ಚಿತ್ರವನ್ನೂ ರಿಲೀಫ್ ಮಾದರಿಯಲ್ಲಿ ಕಡೆದಿದ್ದಾರೆ. ಇಲ್ಲಿ ವಿಶೇಷವೆಂದರೆ ಷಾ ಅವರ ಒಟ್ಟು ಶಿಲ್ಪದ ರಚನೆಯೆಲ್ಲಾ "ಕ್ಯೂಬಿಸ್ಟ್" ಶೈಲಿಯದು. ಈ ಷೇಕ್ಸ್‌ಪಿಯರ್ ಮಾತ್ರ ನಿಜ ಶೈಲಿಯದು. ಸ್ವತಂತ್ರ ರೀತಿಯ ಕಲ್ಪನೆ, ಅದು ಅಭಿವ್ಯಕ್ತವಾಗಿರುವ ವಿಶೇಷ ರೀತಿಯ ಶೈಲಿ, ವೈಖರಿ. ನಿರೂಪಣೆಯಲ್ಲಿ ಇರುವ ದಿಟ್ಟತನ ಮತ್ತು ನಿರ್ಣಯ ಈ ಹಿನ್ನೆಲೆಯಿಂದ ಆರ್.ಎಸ್.ಎನ್. ಅವರ ಈ ಬರ್ನಾರ್ಡ್ ಷಾ ಶಿಲ್ಪವನ್ನು ಬಹು ಅಪರೂಪ ಕಲಾಕೃತಿಯೆನ್ನಬಹುದು. ಅತಿಶಯವೆಂದು ಹೇಳಿದರೂ ತಪ್ಪಾಗಲಾರದು.

ಹೀಗೆ ಆರ್.ಎಸ್.ಎನ್. ರಚಿಸಿರುವ ಶಿಲ್ಪಗಳ ವಸ್ತು ವೈವಿಧ್ಯಮಯವಾದುದು, ಶೈಲಿಯು ವಿವಿಧ. ಅವರು ರಚಿಸಿರುವ ಬುದ್ಧನ ಶಿಲ್ಪದಲ್ಲಿ ಇತರ ಶಿಲ್ಪಗಳ ತೀಕ್ಷ್ಣವಿಲ್ಲ, ಸೌಮ್ಯವಾಗಿದೆ. ಆ ಶಿಲ್ಪವು ನವ್ಯಕ್ಕಿಂತ ಹಿಂದಿನ ಗಾಂಧಾರ ಶೈಲಿಯನ್ನು ಅನುಸರಿಸಿದೆ. ಆದರೆ ಅವರ ಕೃತಿಗಳಲ್ಲಿ ಬಹುತೇಕ–ಅದು ಚಿತ್ರವಾಗಲೀ ಅಥವಾ ಶಿಲ್ಪವಾಗಲೀ–ಒಂದು ವಿಶೇಷವಾದ ತೀಕ್ಷ್ಣತೆ ಅಥವಾ ಕಾವು ಇರುವಂತೆ ಅನುಭವವಾಗುತ್ತದೆ. ಮನಸ್ಸಿನ ಒಂದು ರೀತಿಯ ಅಶಾಂತಿ, ಒಂದು ರೀತಿಯ ತಳಮಳ ಈ ಶಿಲ್ಪಗಳಲ್ಲಿ ಪ್ರತಿಬಿಂಬಿತವಾದಂತೆ ಕಾಣಬರುತ್ತದೆ. ಭಾರತದ ಅನೇಕ ಸಾಹಿತಿ, ರಾಜಕಾರಣಿ, ಕಲಾವಿದ ಮುಂತಾದವರ ರೇಖಾಚಿತ್ರಗಳನ್ನು ರಚಿಸಿದ್ದಾರೆ. ಅವುಗಳೆಲ್ಲಾ ಬಹುತೇಕ ಒಂದು ಶಕ್ತಿ, ಪೌರುಷತ್ವದಿಂದ ತುಂಬಿ ತುಳುಕುವಂತೆ ಭಾಸವಾಗುತ್ತದೆ.

* * * * *

**ಸೆರೆಮನೆಯಲ್ಲಿ ಬಂಡಾಯ**

ಆದರೆ ಹೇಗೋ ಏನೋ ಸೀತಾಪತಿಯವರ ಜೀವನ ಬೇರೆ ದಿಕ್ಕಿಗೆ ತಿರುಗಿತು. ಆ ಜಾಡು ಬಿಟ್ಟು ಒಂಟಿ ಸಲಗನಂತೆ ಆಯಿತು. ಕಾಲೇಜು ವಿದ್ಯಾಭ್ಯಾಸ ಮುಗಿದ ಅನತಿ ಕಾಲದಲ್ಲಿಯೇ ರಾಜಕೀಯದ ಸೆಳೆತಕ್ಕೆ ಸಿಕ್ಕಿಕೊಂಡರು. ಅವರ ಮುಂದಿನ ಜೀವನದ ಸ್ವಾರಸ್ಯ, ಸಾಧನೆ ಮತ್ತು ದುರಂತ ಘಟನೆಗಳನ್ನು ಈ ಚಿಕ್ಕ ಲೇಖನದಲ್ಲಿ ವಿವರಿಸಲು ಸಾಧ್ಯವಿಲ್ಲ. ಒಂದು ಪುಸ್ತಕವೇ ಬರೆಯಬೇಕು. ೧೯೩೦ರ ದಂಡಿ ಸತ್ಯಾಗ್ರಹ ಆಗಲೇ ಸೀತಾಪತಿಯವರಿಗೆ ಪ್ರಸಿದ್ಧ ಸಮಾಜವಾದಿ ಯೂಸುಫ್ ಮೆಹರಾಲಿಯವರ ಪರಿಚಯವಾದುದು. ತಕ್ಷಣವೇ ಅದು ಆಪ್ತ ಸ್ನೇಹಕ್ಕೆ ತಿರುಗಿತು. ಮೊದಲು ೬ ತಿಂಗಳ ಕಾಲ ಸ್ಥಾನ ಬದ್ಧರಾಗಿದ್ದರು. ಆನಂತರ ೧೫ ತಿಂಗಳು ಶಿಕ್ಷೆಯಾಗಿ ಯೆರವಾಡ ಬಂದೀಖಾನೆಯಲ್ಲಿಡಲ್ಪಟ್ಟರು. ಕಠಿಣ ಸಜಾ, ಸಿ. ವರ್ಗ. ಅಂದರೆ ಜೋಳ ಬೀಸುವಂತಹುದು. ಬೀಸಲು ಒತ್ತಾಯ ಮಾಡಲಿಲ್ಲ. ಆದರೆ ಪ್ರತ್ಯೇಕವಾಗಿ ಕೂಡಿದ್ದರು, ಅಲ್ಲಿ ನಾಯುಡು ದಂಗೆ. "ನಮ್ಮಂತೆಯೇ ಕಾನೂನು ಮುರಿದು ಶಿಕ್ಷಿತರಾಗಿದ್ದ ಬಂದಿಗಳಲ್ಲಿ ಹಳ್ಳಿಗಾಡಿನವರು ಮತ್ತು ಬಡವರನ್ನು ತೀರಾ ಹೀನಾಯವಾಗಿ ನೋಡುತ್ತಿದ್ದುದನ್ನು ಕಂಡೆ. ಜೋಳ ಬೀಸಿ ಎದೆನೋವು ಬಂದು ಅನೇಕರು ರಕ್ತ ಕಾರುತ್ತಿದ್ದರು. ಹಗ್ಗದ ಚಾಪೆಗಳ ಮೇಲೆ ಮಲಗಿ ಮೈಯೆಲ್ಲಾ ಬಾತು ಹುಣ್ಣುಗಳಾಗುತ್ತಿದ್ದವು. ಆದರೆ ಸಮಾಜದ ಗಣ್ಯರಾಗಿದ್ದ ಸತ್ಯಾಗ್ರಹಿಗಳಿಗೆ ಈ ಹಿಂಸೆಯಿರಲಿಲ್ಲ. ನನ್ನ ರಕ್ತವೆಲ್ಲಾ ಈ ಅನ್ಯಾಯವನ್ನು ನೋಡಿ ಕುದಿಯುತ್ತಿತ್ತು. ಅವರನ್ನು ಪ್ರತಿಭಟಿಸುವಂತೆ ಪ್ರೇರಿಸಿದೆ. ಉಪವಾಸ ಮುಷ್ಕರವನ್ನು ಪ್ರಾರಂಭ ಮಾಡಿದೆವು" ಎನ್ನುತ್ತಾರೆ ನಾಯುಡು, ಆ ಸಂದರ್ಭವನ್ನು ನೆನೆಯುತ್ತ.

ಈ ಉಪವಾಸ, ಮುಷ್ಕರ ಕೋಲಾಹಲ ಎಬ್ಬಿಸಿತು. ಅಧಿಕಾರಿಗಳು ಸೀತಾಪತಿಯನ್ನು ಹೆದರಿಸಿದರು, ಬೆದರಿಸಿದರು. ಮಧ್ಯಸ್ಥಿಕೆಯನ್ನು ನಡೆಸಿದರು. ಮಹದೇವ ದೇಸಾಯರು ಮುಷ್ಕರವನ್ನು ನಿಲ್ಲಿಸಬೇಕೆಂದು ಬುದ್ಧಿವಾದ ಹೇಳಿದರು, ಕೇಳಲಿಲ್ಲ. "ಈ ಮುಷ್ಕರವು ಸತ್ಯಾಗ್ರಹ ತತ್ವಕ್ಕೆ ವಿರೋಧ" ಎಂದು ಚೀಟಿ ಬರೆದು ಕಳುಹಿಸಿದರು – ಜಮ್ನಾಲಾಲ್ ಬಜಾಜ್. "ಒಂದೇ ತಪ್ಪಿಗೆ ಬಡವರಿಗೇ ಒಂದು, ಅನುಕೂಲಸ್ಥರಿಗೆ ಒಂದು ಬಗೆಯ ಶಿಕ್ಷೆ. ಇದಾವ ತತ್ವ ನ್ಯಾಯ" ಎಂದು ಮರು ಚೀಟಿ ಕಳುಹಿಸಿದರು ಸೀತಾಪತಿ. ಕೊನೆಗೆ ಮುಷ್ಕರ ನಿಲ್ಲಿಸಬೇಕೆಂದು ಗಾಂಧೀಜಿ ಹೇಳಿ ಕಳುಹಿಸಿದ ಮೇಲೆ ಸೀತಾಪತಿ ನಿಲ್ಲಿಸಿದರು.

**ಅಪೂರ್ಣ ಯಾತ್ರೆ**

ಜೈಲಿನಿಂದ ಬಿಡುಗಡೆಯಾದ ನಂತರ ಕಾಂಗ್ರೆಸ್ ಸೋಷಿಯಲಿಸ್ಟ್ ಪತ್ರಿಕೆಯ ನಿರ್ವಹಣೆ. ಅದರಲ್ಲಿ ಆರ್.ಎಸ್.ಎನ್. ಬರೆದ ವ್ಯಂಗ್ಯ ಚಿತ್ರಗಳು ಬಹು ಪ್ರಸಿದ್ಧವಾದುವು. ಮೆಹರಾಲಿ, ಅಶೋಕಮೆಹತಾ, ಜಯಪ್ರಕಾಶ ನಾರಾಯಣ್, ಮಸಾನಿ ಮುಂತಾದವರ ಸಾಹಚರ್ಯ. ಎರಡು ವರ್ಷಗಳ ನಂತರ ಬೆಂಗಳೂರಿಗೆ ಹಿಂತಿರುಗಿದರು. ಮರಳಿ ಬೊಂಬಾಯಿಗೆ. ಈ ಸಲದ ಕೂಟ ಬೇರೆಯೇ. ಕಮ್ಯೂನಿಸ್ಟ್ ಪಕ್ಷದ ಪಿ.ಸಿ. ಜೋಷಿ, ಅಜಯ ಘೋಷ್, ರಣದಿವೆ, ಎ.ಎಸ್.ಆರ್. ಚಾರಿ, ಅಧಿಕಾರಿ, ಬೋಖಾರಿ ಮುಂತಾದವರು. ಆ ಪಕ್ಷದ ನ್ಯಾಷನಲ್ ಫ್ರಂಟ್, ಅನಂತರ "ಪೀಪಲ್ಸ್ ವಾರ್" ಪತ್ರಿಕೆಗಳಲ್ಲಿ ಕೆಲಸ. ಆರ್.ಎಸ್.ಎನ್.ವ್ಯಂಗ್ಯ ಚಿತ್ರಗಳೂ ಮತ್ತು ಅವರ "ಚಿತ್ರಮಯ ಅರ್ಥಶಾಸ್ತ್ರ" ಭಾರತದಲ್ಲಿ ಬಹುಮಾನ್ಯವಾದುದೇ ಅಲ್ಲದೆ ಇಂಗ್ಲೆಂಡಿನ ಕೆಲವು ಪತ್ರಿಕೆಗಳಲ್ಲಿಯೂ ಪುನರ್ಮುದ್ರಿತವಾಗುತ್ತಿದ್ದವು. ೧೯೩೯ರಲ್ಲಿ ಮಾಸ್ಕೋ ನಗರಕ್ಕೆ ಹೋಗಬೇಕೆಂದು ಹೊರಟ ಆರ್.ಎಸ್.ಎನ್. ಅವರನ್ನು ಲಂಡನ್ನಿನ ಪೊಲೀಸರು ಹಿಡಿದು ಭಾರತಕ್ಕೆ ಹಿಂತಿರುಗಿಸಿದರು. ಇಲ್ಲಿ ಬಂದೊಡನೆ ನಾಸಿಕದಲ್ಲಿ ಬಂಧನ. ೧೯೪೫ರಲ್ಲಿ ಬಿಡುಗಡೆ.

ನಾಸಿಕದ ಜೈಲಿನಿಂದ ಬಿಡುಗಡೆಯಾದ ನಂತರ ನಾಯುಡು ಅವರಲ್ಲಿ ಸ್ವಲ್ಪ ವ್ಯತ್ಯಾಸವಾದಂತೆ ಕಾಣಬರುತ್ತಿತ್ತು. ಅಲ್ಲಿ ಮನಸ್ಸಿಗೆ ಏನೋ ಅಘಾತವಾದಂತೆ ಅನುಭವವಾಗುತ್ತಿತ್ತು. ಮನಸ್ಸಿನ ತೀವ್ರ ಅಶಾಂತಿ ಮತ್ತು ತಳಮಳ ಮರೆಯಲು ಅವರು ಶಿಲ್ಪವನ್ನು ಪ್ರಾರಂಭಿಸಿದರು. ನಾಸಿಕದ ಜೈಲಿನಲ್ಲಿಯೇ ಒಂದು ಬಾರಿ ಒಂದೇ ರಾತ್ರಿಯಲ್ಲಿ ನಾಲ್ಕು ಅಡಿ ಎತ್ತರದ ಲೆನಿನ್ ಮಣ್ಣು ಪ್ರತಿಮೆಯನ್ನು ರಚಿಸಿದರು, ಮೂರನೆಯ ದಿನ ಅದನ್ನು ಅಧಿಕಾರಿಗಳು ಎತ್ತಿಕೊಂಡು ಹೋದರು. ಈ ಮನೋವೃತ್ತಿಯಲ್ಲಿದ್ದಾಗಲೇ ಅವರು ಗಾರ್ಕಿ ಪ್ರತಿಮೆಯನ್ನು ರಚಿಸಿದ್ದು. ಅನಂತರ ಅನೇಕ ಶಿಲ್ಪಗಳನ್ನು ರಚಿಸಿದರು. ಅಚ್ಚರಿಗೊಂಡವರೆಲ್ಲಾ ಹೊಗಳುತ್ತಿದ್ದರು. ಆದರೆ ಪ್ರಶಂಸೆ ಅವರಿಗೆ ಬೇಕಿಲ್ಲ. ಒಂದು ದಿನ ಯಾವುದೋ ವೇದನೆಯಲ್ಲಿ ಅವುಗಳ ಅಚ್ಚುಗಳನ್ನೆ ಒಡೆದು ಹಾಕಿದರು.

**ವಾಮಪಂಥ**

ಆರ್.ಎಸ್.ಎನ್. ಅವರ ಶಿಲ್ಪದ ವಸ್ತುಗಳೆಲ್ಲಾ ಬಹುತೇಕ ಕವಿ, ಸಾಹಿತಿ, ರಾಷ್ಟ್ರ ನಾಯಕರು, ಅದರಲ್ಲಿಯೂ ಅವರ ಒಲವು ರಷ್ಯಾ ದೇಶದ ಕಡೆಗೇ ವಾಲಿದಂತಿದೆ. ಹಿಂದೆ ಪ್ರಸ್ತಾಪಿಸಿದ ಶಿಲ್ಪಗಳೇ ಅಲ್ಲದೆ ಕವಿ ಮಾಯ ಕೋವ್‌ಸ್ಕಿ, ಟಾಲ್‌ಸ್ಟಾಯ್, ವಲ್ಲತ್ತೋಳ್, ಪ್ರೇಮ್‌ಚಂದ್, ಅರವಿಂದೋ, ಬಿ.ಎಂ.ಶ್ರೀ., ಬೇಂದ್ರೆ ಮುಂತಾದ ಶಿಲ್ಪಗಳು ಬಹು ಮೆಚ್ಚುವಂತಹವು. ಆರ್.ಎಸ್. ನಾಯುಡು ಎಂದರೆ ಬಹುತೇಕ ಜನ ಬೆಚ್ಚಿ ಬೀಳುವುದು ಸಹಜ. ಅವರ ಸಹವಾಸ 'ತೋರ ಮಾಣಿಕವೆಂದು ಪಿಡಿದರೆ ಭೂರಿ ಕೆಂಡವಿದಾಯ್ತು' ಎನ್ನುವಂತೆ ಎಂದು ಹೇಳುವವರೂ ಉಂಟು. ಆದರೆ ಈ ಭೂರಿ ಕೆಂಡವು ಬೆಣ್ಣೆಯಾದುದನ್ನೂ ನೋಡಿದ್ದೇವೆ. ಇದಕ್ಕೆ ಕಾರಣವಿಷ್ಟೆ. ನಾಯುಡು ಓದಿದವರು. ಬಹು ಜ್ಞಾನಸ್ಥರು, ಅವರೊಡನೆ ಸಂಭಾಷಣೆಯೇ ಒಂದು ಸೊಗಸು. ಬಹು ವಿಚಾರಪೂರಿತವಾದುದು. ಕಲೆ, ಸಾಹಿತ್ಯ, ಮನಶ್ಶಾಸ್ತ್ರದ ಬಗೆಗೆ ಅವರು ಮಾತನಾಡುವುದನ್ನು ಕೇಳುವುದೇ ಒಂದು ವಿಶೇಷ ಅನುಭವ, ಇಂತಹವರ ಮುಂದೆ ಅವಿವೇಕ ಪ್ರದರ್ಶನವಾದರೆ ಕೆಂಡವಾಗುವುದು ಸಹಜವೇ. ಆದರೆ ಅವರನ್ನು, ಅವರ ಮಾತನ್ನು ಅರ್ಥ ಮಾಡಿಕೊಂಡವರಿಗೆ ಅವರು ಬಹು ಸ್ನೇಹಪರರು.

## ನೃತ್ಯ-ಬ್ಯಾಲೆ

ಮನಸ್ಸಿನಲ್ಲಿ ಸಂತೋಷ ಉಕ್ಕಿದಾಗ ಅಥವಾ ಉದ್ರೇಕವಾದಾಗ ಮೈ ಕುಲುಕುವುದೂ, ನಲಿಯುವುದೂ, ಬಿರುಸಾಗಿ ಕೈ ಆಡಿಸುವುದೂ, ಹೆಜ್ಜೆ ಎತ್ತಿ ಇಡುವುದೂ, ಕಾಲು ಬೀಸುವುದೂ, ನೆಗೆಯುವುದೂ ಮುಂತಾದ ಚಲನಗಳು ಮನುಷ್ಯ ಜಾತಿಗೆ ಸ್ವಭಾವವಾಗಿ ಬಂದುದು. ಮನುಷ್ಯ ಜಾತಿಗೇ ಏಕೆ ಓಡಾಡುವ ಪ್ರಾಣಿವರ್ಗಕ್ಕೂ, ಹಾರಾಡುವ ಕೆಲವು ಜಾತಿಯ ಹಕ್ಕಿಗಳಿಗೂ ಇಂತಹ ಸಂಚಲನೆ ಸ್ವಾಭಾವಿಕವಾದುದು.

ನೆಗೆದಾಡುವುದೂ, ಕುಪ್ಪಳಿಸುವುದೂ ಮತ್ತು ಒಂದೇ ಗತಿಗೆ ಹೆಜ್ಜೆ ಹಾಕುವುದೂ, ಓಡುವುದೂ ದೇಹದ ಒಳಗೆ ಉದ್ಭವಿಸುವ ಭಾವಗಳ ಪ್ರತಿಕ್ರಿಯೆ. ಕುಣಿತಗಳ ನೆಲೆಗಟ್ಟು, ಕುಣಿತದ ಪರಿಷ್ಕಾರವಾದ ರೂಪ-ನೃತ್ಯ. ಇಲ್ಲಿನ ಒಂದೊಂದು ಚಲನೆಯೂ, ನಡೆಯೂ, ಅಂಗಾಂಗಳ ವಿನ್ಯಾಸವೂ ಪರಿಷ್ಕಾರಗೊಂಡದ್ದು. ಆದುದರಿಂದ ನರ್ತನವು ಕಣ್ಣಿಗೆ ಅಂದವಾಗಿರುವುದು. ಅಂಗಗಳ ಪರಸ್ಪರ ಹೊಂದಾಣಿಕೆಯಿಂದ ಕೂಡಿ ಪ್ರದರ್ಶಿತವಾಗುವ ನೃತ್ಯವು ನಯನ ಮನೋಹರವಾಗಿರುವುದು. ಅದರ ಹಿಂದಿನ ಲಯವು ನೋಡುವವರನ್ನೂ ಸ್ಫುರಿಸುವುದು. ಕೆಲವು ವೇಳೆ ಉದ್ರೇಕಿಸುವುದೂ ಉಂಟು. ಇಂದಿನದಲ್ಲ. ಮಾನವ ಇತಿಹಾಸದ ಮುಂಜಾನೆಯಿಂದಲೂ ಬಂದಿರುವಂತಹದು.

ನರ್ತನವನ್ನು ನೋಡಿ ಕೇವಲ ಉದ್ರೇಕಿತನಾಗದೇ ಆ ಮಾನವಾಕೃತಿಗಳ ಚಲಿಸುವ ಅಂಗಾಂಗಗಳ ಅಂದಗಳಿಂದ ಸ್ಫುರಿತರಾದ ಆದಿಮಾನವರಲ್ಲಿ ಕೆಲವರು ಆ ಅನುಭವಗಳನ್ನು ಚಿತ್ರಗಳಲ್ಲಿ ಗ್ರಹಿಸಿದ್ದಾರೆ. ಶಿಲಾಸರೆಗಳಲ್ಲಿ ದೊರೆವ ಪ್ರಾಚೀನ ಶಿಲಾಯುಗ ಚಿತ್ರಗಳಲ್ಲಿ ಈ ರೀತಿ ಕುಣಿವ ಆಕೃತಿಗಳೂ ಇವೆ. ಕೈಗಳನ್ನು ಬೀಸಿ ಕಾಲುಗಳನ್ನು ಎತ್ತಿ ಹಾಕಿರುವ ನೃತ್ಯ ಭಂಗಿಗಳು ಮಾನವ ರಚಿಸಿದ ಚಿತ್ರಗಳಲ್ಲಿ ಬಹುತೇಕ ಆಫ್ರಿಕಾದಲ್ಲಿ ದೊರೆವ ಚಿತ್ರಗಳಲ್ಲಿ ಕಾಣಬರುವುವು. ಮುಂದಿನ ನಾಗರಿಕ ಜನಾಂಗಗಳ ಚಿತ್ರಕಲೆಗಳಲ್ಲಿಯೂ ನರ್ತಕ ನರ್ತಕಿಯರ ಇಂತಹ ಹಾವಭಾವಗಳನ್ನು ಗ್ರಹಿಸಿದ ಚಿತ್ರಗಳು ಸಾಕಷ್ಟು ಪ್ರಮಾಣದಲ್ಲಿ ರಚಿತವಾಗಿರಬಹುದು. ಆದರೆ ಇವುಗಳಲ್ಲಿ ಬಹುಪಾಲು ನಾಶವಾಗಿವೆ. ಉಳಿದುಬಂದವುಗಳಲ್ಲಿ ಗ್ರೀಕ್ ದೇಶದ ಜಾಡಿಗಳೇ ಮುಂತಾದ ವಸ್ತುಗಳ ಮೇಲೆ ಮಾಡಿದ ಅಲಂಕಾರಿಕ ಚಿತ್ರಗಳಲ್ಲಿ ಈ ಬಗೆಯ ನೃತ್ಯ ಭಂಗಿಗಳು ಕಾಣಬರುತ್ತವೆ. ಅದರಂತೆ ಪುರಾತನ ರೋಮ್ ಸಾಮ್ರಾಜ್ಯದ ಕೆಲವು ನಗರಗಳ ಪಾಳುಗಳಲ್ಲಿ ದೊರೆತ ಭಿತ್ತಿ ಚಿತ್ರಗಳಲ್ಲಿಯೂ ಈ ಬಗೆಯ ನರ್ತಕ ನರ್ತಕಿಯರ ಚಿತ್ರಗಳು ಕಾಣಬರುತ್ತವೆ.

ಹೀಗೆಯೇ ಈಜಿಪ್ಟ್ ದೇಶದ ಪುರಾತನ ಭಿತ್ತಿ ಚಿತ್ರಗಳಲ್ಲಿಯೂ ವಿಧ ವಿಧ ಭಂಗಿಗಳಲ್ಲಿ ಕುಣಿವ ನರ್ತಕ ನರ್ತಕಿಯರ ಚಿತ್ರಗಳಿವೆ. ಮುಂದೆ ಪೌರ್ವಾತ್ಯ ದೇಶಗಳಲ್ಲಿ ನೋಡಿದಾಗ ಅಲ್ಲಿನ ಪುರಾತನ ಭಿತ್ತಿ ಚಿತ್ರಗಳಲ್ಲಿಯೂ ನರ್ತಕ ನರ್ತಕಿಯರ ಚಿತ್ರಗಳು ಕಂಡುಬರುತ್ತವೆ. ಈ ಚಿತ್ರಗಳಲ್ಲಿ ನೃತ್ಯವನ್ನು ಒಂದು ಧಾರ್ಮಿಕ ವಿಧಿಯ ಅಂಗವಾಗಿ ನಿರೂಪಿಸಲಾಗಿದೆ. ಇದಲ್ಲದೆ, ಲೌಕಿಕ ಜೀವನದ ಅಂಗವಾಗಿಯೂ ಈ ನೃತ್ಯಗಳನ್ನು ನಿರೂಪಿಸಿದ ಚಿತ್ರಗಳೂ ಇವೆ. ಈ ನೃತ್ಯ ಸೌಂದರ್ಯವನ್ನು ಚಿತ್ರದಂತೆಯೇ ಶಿಲ್ಪದಲ್ಲಿಯೂ ಗ್ರಹಿಸಲಾಗಿದೆ. ಪುರಾತನ ಚಿತ್ರ ಮತ್ತು ಶಿಲ್ಪಗಳು ಬಹುಪಾಲು ನಾಶವಾಗಿವೆ ನಿಜ. ಆದರೆ ಅವುಗಳಲ್ಲಿ ನಾಶವಾದ ಚಿತ್ರಗಳ ಪ್ರಮಾಣ ಅಧಿಕ. ಶಿಲ್ಪಗಳು ಸ್ವಲ್ಪ ಹೆಚ್ಚಾಗಿ ಉಳಿದು ಬಂದಿವೆ. ಸೊಂಟದ ಮೇಲೆ ಕೈಯಿಟ್ಟು ದಿಮಾಕಿನಿಂದ ನಿಂತ ಮೊಹೆಂಜೊದಾರೋ ನರ್ತಕಿಯ ಶಿಲ್ಪವೇ ಇದೆಯಲ್ಲ ಉದಾಹರಣೆಗೆ. ಸುಮಾರು ಐದು ಸಾವಿರ ವರ್ಷಗಳಷ್ಟು ಹಿಂದಿನದು.

ಅಂದರೆ ನರ್ತನ ಸೌಂದರ್ಯದ ಬಗೆಗೆ ನಮ್ಮ ಭ್ರಮೆ ಬಹು ಪುರಾತನವಾದುದು. ಬಹುಶಃ ರಕ್ತಗತವಾದುದು. ಅದರಿಂದ ಹೆಚ್ಚು ಸ್ಫುರಿತನಾದ ಕವಿ ಈ ಅನುಭವಗಳನ್ನು ಶಬ್ದಗಳಲ್ಲಿ ಗ್ರಹಿಸಲೆತ್ನಿಸುತ್ತಾನೆ. ಶಿಲ್ಪಿ ಕಲ್ಲಿನಲ್ಲಿ ಮತ್ತು ಲೋಹದಲ್ಲಿ, ಚಿತ್ರಕ ರೇಖೆ ಮತ್ತು ವರ್ಣಗಳಲ್ಲಿ ಈ ಅನುಭವವನ್ನು ಹಿಡಿದಿಡುತ್ತಾರೆ. ಆಯಾ ಭಾಗದಲ್ಲಿ ಬಹು ಹೆಚ್ಚು ಭ್ರಮಿತರಾದ ಕಲಾವಿದರೂ ಒಬ್ಬೊಬ್ಬರಿರುತ್ತಾರೆ. ಅವರು ನರ್ತನದಷ್ಟೇ ನರ್ತಕಿಯರ ಅಂಗಾಂಗ ಸೌಂದರ್ಯ, ಚಲನವಲನ, ನರ್ತನದ ಭಾವ ಮುಂತಾದವುಗಳನ್ನು ಹೇರಳವಾಗಿ ಚಿತ್ರಗಳಲ್ಲಿ ಗ್ರಹಿಸುವರು. ಅಂತಹವರಲ್ಲೊಬ್ಬನು ಎಡ್ಗರ್ ಡಗಾ, ಫ್ರಾನ್ಸ್ ದೇಶದ ಚಿತ್ರಕಾರ. ಕ್ರಿ.ಶ.೧೮೩೪ ರಿಂದ ೧೯೧೭ರ ಅಂತರದಲ್ಲಿ ಜೀವಿಸಿದ್ದವ.

೧೯ನೆಯ ಶತಮಾನಾಂತ್ಯ ಭಾಗದಲ್ಲಿ ರೂಪಿತವಾಗಿ ಬರುತ್ತಿದ್ದ ಇಂಪ್ರೆಷನಿಸ್ಟ್ ಪಂಥದ ಅಧ್ವರ್ಯುಗಳಲ್ಲಿ ಒಬ್ಬನಾದ

ಡಗಾ, ಅದರ ಪ್ರಚಾರದಲ್ಲಿ ಬಹುಪಾಲು ಉತ್ಸಾಹದಿಂದ ಭಾಗವಸಿದವನು. ಕಲೆಯಲ್ಲಿ ಎಷ್ಟೇ ನಿಷ್ಣಾತನಾಗಿದ್ದರೂ, ತನ್ನ ಕಲೆಯಲ್ಲಿ ಅದರ ಸಾಧನೆಯಲ್ಲಿ ತೃಪ್ತಿಯಿಲ್ಲ. ಪರಿಪೂರ್ಣವಾಗಿಲ್ಲ ಎಂಬ ಚಿಂತೆ. ಮರೀಚಿಕೆಯಂತೆ ಇರುವ ಈ ಪರಿಪೂರ್ಣತೆಯನ್ನು ಪಡೆಯಲು ಜೀವಮಾನವೆಲ್ಲಾ ಹೆಣಗಿದ. ಕಲೆಯ ಪರಿಪೂರ್ಣತೆಯನ್ನು ಕಾಣಲು ಆತನು ಆರಿಸಿಕೊಂಡ ಒಂದು ವಸ್ತು–ಹೆಣ್ಣು. ಆ ಅಂಗಾಂಗಗಳಲ್ಲಿ ಆಕೃತಿಗಳ ಆದರ್ಶ ರೂಪವನ್ನು ಕಾಣಲು ಆರಂಭಿಸಿದ. ನಾನಾ ವೃತ್ತಿಯ, ನಾನಾ ವರ್ಗದ, ನಾನಾ ಕಾರ್ಯಮಗ್ನರಾದ ಹೆಣ್ಣುಗಳ ಆಕೃತಿಗಳನ್ನು ಚಿತ್ರಿಸಿದ. ಆದರೆ ತನ್ನ ಕಲ್ಪನೆಯಲ್ಲಿದ್ದ ಸೌಂದರ್ಯವನ್ನು ಬ್ಯಾಲೆ ನರ್ತಕಿಯರಲ್ಲಿ ಕಾಣಲಾರಂಭಿಸಿದ. ಜೀವಮಾನದ ಕಡೆಯ ಭಾಗದವರೆಗೂ ನರ್ತಕಿಯರ ನೂರಾರು ಚಿತ್ರಗಳನ್ನು ರಚಿಸಿದ. ಈ ನರ್ತಕಿಯರ ನಾನಾ ಭಾವ ಭಂಗಿಗಳನ್ನು ನಾನಾ ದಿಕ್ಕಿನಿಂದ, ದೃಷ್ಟಿಯಿಂದ ಗ್ರಹಿಸಿದ್ದಾನೆ. ರಂಗಸ್ಥಳದ ಮೇಲೆ ನರ್ತಿಸುವ ನರ್ತಕಿಯರಿದ್ದಾರೆ, ಪರದೆಯ ಹಿಂದೆ ವಸ್ತ್ರಗಳನ್ನು ಧರಿಸುತ್ತಿರುವವರು, ಕಾಲಿಗೆ ಪಾದರಕ್ಷೆ ಕಟ್ಟುವವರು, ಶಿಕ್ಷಣ ಪಡೆಯುತ್ತಿರುವವರು... ಹೀಗೆ ಅಸಂಖ್ಯಾತ ಬ್ಯಾಲೆ ನರ್ತಕಿಯರು ಡಗಾನ ಕುಂಚ, ಪೆನ್ಸಿಲ್‌ಗಳು ಕೆಲಸ ಮಾಡಲು ಸ್ಫುರಿಸಿದ ವಸ್ತುಗಳಾದರು. ಈ ನರ್ತಕಿಯರ ನೋವು ನಲಿವುಗಳನ್ನು ಗ್ರಹಿಸುವುದರಲ್ಲಿ ತೈಲವರ್ಣ ಬಳಸಿದ್ದಾನೆ. ಪೆನ್ಸಿಲ್ ಬಳಸಿ ರೇಖಾ ಚಿತ್ರ ರಚಿಸಿದ್ದಾನೆ. ಪ್ಯಾಸ್ಟೆಲ್ ಬಣ್ಣಗಳಲ್ಲಿ ರಚಿಸಿದ್ದಾನೆ. ಕೊನೆಗೆ ಕಿರು ಶಿಲ್ಪಗಳನ್ನೂ ರಚಿಸಿದ್ದಾನೆ. ಒಟ್ಟಿನಲ್ಲಿ ಎಡ್ಗರ್ ಡಗಾ ಚಿತ್ರಿಸಿದ ಈ ಬ್ಯಾಲೆ ನರ್ತಕಿಯರ ಚಿತ್ರಗಳು ಜಗತ್ ಪ್ರಸಿದ್ಧವಾಗಿವೆ. ಕಲೆಯ ಇತಿಹಾಸದ ಒಂದು ಸ್ವಾರಸ್ಯ ಅಂಶವೆಂದು ಮಾನಿತವಾಗಿವೆ.

ಎಡ್ಗರ್ ಡಗಾ ಫ್ರಾನ್ಸಿನಲ್ಲಿ ಮಾಡಿದಂತೆ ಭಾರತದಲ್ಲಿಯೂ ಅನೇಕ ಕಲಾವಿದರು ಮಾಡಿದ್ದಾರೆ. ಹಿಂದಿನ ಚಿತ್ರಕಾರರು ಮತ್ತು ಶಿಲ್ಪಿಗಳು ನೃತ್ಯ ಹಾಗೂ ನರ್ತಕಿಯರ ಸೌಂದರ್ಯವನ್ನು ರೇಖೆ ಮತ್ತು ಬಣ್ಣಗಳಲ್ಲಿ ಗ್ರಹಿಸಿ ಅಂದವಾದ ಚಿತ್ರ ರಚನೆ ಮಾಡಿರುವುದು ಎಲ್ಲರೂ ಬಲ್ಲ ವಿಷಯ. ಹಾಗೆಯೇ ಈ ಅಂಗಾಂಗಗಳ ಚೆಲುವನ್ನು ಕಾರ್ಯಮಗ್ನೆಯರಾದ ನರ್ತಕಿಯರ ನಿಲುವನ್ನು ಸೌಂದರ್ಯವನ್ನು ಕಲ್ಲಿನಲ್ಲಿ ಗ್ರಹಿಸಿ ಹೆಪ್ಪುಗಟ್ಟಿಸಿದ್ದಾರೆ ಶಿಲ್ಪಿಗಳು.

ಹೀಗೆ ಭಾರತದಲ್ಲಿ ದೊರೆತಿರುವ ನರ್ತಕಿಯ ಹಳೆಯ ಶಿಲ್ಪವೆಂದರೆ ಮೊಹೆಂಜೊದಾರುವಿನದು. ಆಯತ ಸ್ಥಾನಕದಲ್ಲಿ ನಿಂತಹಾಗೆ ಅನುಭವವಾಗುವ ಈ ಶಿಲ್ಪವು ಸುಮಾರು ೫ ಸಾವಿರ ವರುಷಗಳಷ್ಟು ಹಿಂದಿನದು. ಮಾಡಿರುವ ರೀತಿ ಆಕಸ್ಮಿಕವೇ ಆಗಲಿ ಅಥವಾ ಉದ್ದೇಶಪೂರ್ವಕವಾಗಿರಲಿ ಮಾಡಿದ ಶಿಲ್ಪಿ ನರ್ತಕಿಯ ಒಂದು ನಿಲುವಿನ ಸತ್ವವನ್ನು ಚೆನ್ನಾಗಿ ಗ್ರಹಿಸಿದ್ದಾನೆ. ಅದರಂತೆ ಮುಂದಿನ ಶತಮಾನಗಳಲ್ಲಿ ಬಾರ್ಹುತ್, ಸಾಂಚಿ, ಅಮರಾವತಿ, ಎಲ್ಲೋರ, ಮಹಾಬಲಿಪುರ ಮುಂತಾದೆಡೆಗಳಲ್ಲಿ ಈ ಬಗೆಯ ನೃತ್ಯಶಿಲ್ಪಗಳು ಬಹು ಸಂಖ್ಯೆಯಲ್ಲಿ ಕಂಡುಬರುತ್ತಿವೆ. ಶಿಲೆಯಲ್ಲಿ ಕಂಡುಬರುತ್ತವೆ. ಶಿಲೆಯಲ್ಲಿ ಹೆಪ್ಪುಗಟ್ಟಿದಂತೆ ನರ್ತಕಿಯರ ವಿವಿಧ ಚಲನವಲನಗಳನ್ನು ಭಂಗಿಗಳನ್ನೂ ಗ್ರಹಿಸಿ ಒಟ್ಟು ರಚನೆಯ ಅಂದವು ಹೆಚ್ಚುವಂತೆ ಅಡಕ ಮಾಡಿದ್ದಾರೆ–ಶಿಲ್ಪಿಗಳು.

ಮುಂದೆ ಇದನ್ನೇ ಇನ್ನೂ ಪರಿಷ್ಕಾರವಾದ ರೂಪದಲ್ಲಿ ನಿರ್ಮಿಸಿದುದು ಕಂಡುಬರುತ್ತದೆ, ಖಜುರಾಹೋ, ಭುವನೇಶ್ವರ, ರನಕಪುರ, ಅಬು, ದೇವಘಡ, ಪಾಲಂಪೇಟ, ಬೇಲೂರು, ಹಳೇಬೀಡು ಮುಂತಾದ ದೇವಾಲಯಗಳಲ್ಲಿ ನಾಟ್ಯಶಾಸ್ತ್ರಗಳಲ್ಲಿ ವಿವರಿಸಲಾದ ರೀತಿಯಲ್ಲಿ ಕ್ರಮಬದ್ಧವಾಗಿ ರಚಿತವಾದ ನರ್ತಕಿಯರ ಶಿಲ್ಪಗಳು ಸಾಕಷ್ಟು ಸಂಖ್ಯೆಯಲ್ಲಿವೆ ಮತ್ತು ಆಯಾ ದೇವಾಲಯಗಳ ವೈಶಿಷ್ಟ್ಯಕ್ಕೂ ಕಾರಣವಾಗಿದೆ. ಇದರಂತೆ ಚಿದಂಬರ, ಕುಂಭಕೋಣ ಮುಂತಾದ ಸ್ಥಳಗಳಲ್ಲಿರುವ ದೇವಾಲಯಗಳಲ್ಲಿ ನಾಟ್ಯಶಾಸ್ತ್ರದಲ್ಲಿ ವಿವರಿಸಲಾದ ಕರಣ ಅಥವಾ ಆ ರೀತಿಯ ನಿಲುವುಗಳನ್ನು ಉದಾಹರಿಸುವ ಶಿಲ್ಪಗಳೂ ಇವೆ. ಇಲ್ಲಿ ನರ್ತಕಿಯರು ಘನಾಕೃತಿಯಲ್ಲಿದ್ದರೂ ಮೂಲದಲ್ಲಿ ರೇಖೆಯಿಂದ ರೂಪ ನಿರ್ಮಾಣವಾಗಿ ಆನಂತರ ಶಿಲ್ಪವಾಯಿತೆಂಬ ಅಂಶವನ್ನು ನೆನಪಿನಲ್ಲಿಡಬೇಕು.

ನಿದರ್ಶನವಾಗಿ ಬೇಲೂರು ದೇವಾಲಯದ ಮದನಿಕಾ ಪುತ್ಥಳಿಗಳಲ್ಲಿ ಪೂರ್ಣಮೋಹಿನಿ ನೃತ್ಯವೆನ್ನಲಾದ ಶಿಲ್ಪ. ಡಿ.ವಿ.ಜಿ.ಯವರ ಅಂತಃಪುರ ಗೀತೆಯಲ್ಲಿ ೨೧ನೆಯ ಭಸ್ಮಮೋಹಿನಿ ಎಂದು ಕರೆಯಲಾದ ಶಿಲ್ಪ. ತಲೆಯ ಮೇಲೆ ಕೈ ಎತ್ತಿ ನರ್ತಿಸುತ್ತಿರುವ ಈ ಶಿಲ್ಪದ ವಿಶೇಷವೆಂದರೆ ಬ್ರಹ್ಮಸೂತ್ರ ಅಥವಾ ಒಂದು ಪ್ರತಿಮೆಯನ್ನು ಅಥವಾ ಮೂರ್ತಿ ಚಿತ್ರವನ್ನು ಸಮವಾಗಿ ವಿಭಜಿಸುವ ರೇಖೆ ಹೇಗೆ ಹರಿದಿದೆ ಎಂಬುದು. ರೇಖೆ ಪುತ್ಥಳಿಯ ತಲೆಯ ಮೇಲೆ ಎತ್ತಿದ

ಕೈಯಿಂದ ಮೂಗು, ಎಡಸ್ತನ, ಎಡಗೈ ಹೆಬ್ಬೆಟ್ಟು ಮತ್ತು ಎಡಗಾಲಿನ ಹೆಬ್ಬೆಟ್ಟಿನ ಮೇಲೆ ಹರಿದು ಹೋಗಿದೆ. ಶಿಲ್ಪವು ಇಷ್ಟು ಖಚಿತವಾಗಿರಬೇಕಾದರೆ ಅದರ ಮೂಲ ರೇಖಾಚಿತ್ರವೂ ಅಷ್ಟೇ ಖಚಿತವಾಗಿರಬೇಕು. ಇಲ್ಲಿ ರೇಖಾಚಿತ್ರವು ಎಷ್ಟು ಮುಖ್ಯ ಅದನ್ನು ಬರೆದವನಿಗೆ ಎಂತಹ ಖಚಿತ ಕಲ್ಪನೆ ಮತ್ತು ರೇಖಾಸಿದ್ಧಿ ಇರಬೇಕು ಎಂಬ ಅಂಶವು ಸ್ಪಷ್ಟಪಡುತ್ತದೆ.

ಪಾಶ್ಚಾತ್ಯ ಚಿತ್ರಕಾರರಲ್ಲಿ ಡಗಾ, ನರ್ತನಕ್ಕೆ ಭ್ರಮಿಸಿದ್ದಂತೆ ಭಾರತದ ಚಿತ್ರಕಲಾವಿದರಲ್ಲಿಯೂ ನರ್ತಕಿಯ ಚಲನವಲನಗಳಿಗೆ ಮನಸೋತು ಗ್ರಹಿಸಿದವರಿದ್ದಾರೆ. ಅವರಲ್ಲಿ ಮುಖ್ಯರಾದವರು ಡಾ॥ ಕೆ.ಕೆ. ಹೆಬ್ಬಾರರು. ಅವರು ರಚಿಸಿದ ವರ್ಣಚಿತ್ರಗಳಂತೆಯೇ ಹೆಬ್ಬಾರರ ರೇಖಾಚಿತ್ರಗಳೂ ಅಷ್ಟೇ ಪ್ರಸಿದ್ಧವಾಗಿವೆ. ಈ ರೇಖಾಚಿತ್ರಗಳಲ್ಲಿ ಶಾಸ್ತ್ರೀಯ ನೃತ್ಯ ಸನ್ನಿವೇಶಗಳಿವೆ, ಜಾನಪದ ನೃತ್ಯ ಸನ್ನಿವೇಶಗಳಿವೆ. ಎಲ್ಲದರಲ್ಲಿಯೂ ಇರುವ ಅಂತರ್ಗತ ಲಯ, ಚಲನ ಅದರ ಫಲವಾಗಿ ಆಕೃತಿಯಲ್ಲಿ ಉಂಟಾದ ತಿರುಹು, ನಲಿವು ಮುಂತಾದವುಗಳನ್ನು ಒಟ್ಟು ನೋಡಿದಾಗ ಹೆಬ್ಬಾರರ ಈ ನೃತ್ಯಚಿತ್ರಗಳ ಸೊಗಸು ಮನದಟ್ಟಾಗುವುದು, ಅದರಲ್ಲಿಯೂ ಹೆಬ್ಬಾರರು ಬಲಿದ್ವೀಪಕ್ಕೆ ಹೋಗಿದ್ದಾಗ ಅಲ್ಲಿ ನಡೆದ ನೃತ್ಯ ಪ್ರದರ್ಶನವನ್ನು ನೋಡುತ್ತಾ ಆ ನೃತ್ಯ ಪ್ರಕಾರದ ನಡೆಯನ್ನು ನೋಡುತ್ತಾ ನೋಡುತ್ತಾ ಹಾಗೆಯೇ ರೇಖೆಯಲ್ಲಿ ಗ್ರಹಿಸಿದ್ದಾರೆ. ಒಂದು ಚಲನದಿಂದ ಮುಂದಿನದಕ್ಕೆ, ಅದರಲ್ಲಿ ಆದ ನಾನಾ ಅಂಗ ಚಲನಗಳು, ಭಂಗಿಗಳು ಮುಂತಾದವುಗಳನ್ನು ಮಿತವಾದ ರೇಖೆಗಳ ವಿನ್ಯಾಸದಿಂದ ಗ್ರಹಿಸಿದ್ದಾರೆ. ಹಾಗೆಯೇ ಭರತನಾಟ್ಯ ಪ್ರದರ್ಶನವಾಗಲೀ, ನಡೆವ ನರ್ತಕಿಯ ಚಲನವಲನ ಮುಂತಾದುವನ್ನು ದಿಟ್ಟ ರೇಖೆಯಲ್ಲಿ ಗ್ರಹಿಸಿದ್ದಾರೆ.

ನರ್ತಕಿಯರ ಚಲನವಲನಗಳ ಅಂದಚೆಂದಗಳಿಂದ ಹೆಬ್ಬಾರರಂತೆಯೇ ಆಕರ್ಷಿತರಾದ ಇತರ ಅನೇಕ ಕಲಾವಿದರಿದ್ದಾರೆ. ನಿದರ್ಶನವಾಗಿ ಚಾವ್ಡಾ ಅವರು ರಚಿಸಿದ ನರ್ತಕಿಯರ ರೇಖಾಚಿತ್ರಗಳಲ್ಲಿ ಚಲನದ ಸ್ಪಷ್ಟ ಅನುಭವವಾಗುವುದು. ಇದನ್ನು ಎತ್ತಿತೋರುವಂತೆ ರೇಖೆಗಳನ್ನು ಬಹು ಸಂಖ್ಯೆಯಲ್ಲಿ ಬಳಸಲಾಗಿದೆ. ಕೆಲವು ವೇಳೆ ಆಕೃತಿಯ ಮೂಲ ರೇಖೆ ಒಡೆದಂತೆ ಕಾಣುತ್ತದೆ, ಇನ್ನು ಕೆಲವು ವೇಳೆ ಉಪರೇಖೆಗಳು ಪಕ್ಕದಲ್ಲಿ ಹರಿದುಹೋಗಿ ಚಲನದ ನುಲಿವು ತಿರುವುಗಳ ಸ್ಪಷ್ಟ ಭ್ರಮೆ ಉಂಟುಮಾಡಿದ್ದಾರೆ. ಹೀಗೆಯೇ ಇನ್ನೂ ಇತರ ಅನೇಕ ಕಲಾವಿದರು ನೃತ್ಯದ ಅಂತರ್ಗತ ಸತ್ವ, ಅದರಿಂದ ಪ್ರಚೋದಿತವಾಗಿ ಆಕರ್ಷಣೀಯವಾಗಿ ನಡೆವ ನರ್ತನದ ಸೊಬಗನ್ನು ರೇಖೆಗಳಲ್ಲಿ ಗ್ರಹಿಸಿದ್ದಾರೆ.

ಹೀಗೆ ನೃತ್ಯದ ಲಯಕ್ಕೆ ಅದಕ್ಕನುಸಾರವಾದ ನರ್ತಕಿಯ ಚಲನವಲನಕ್ಕೆ ಅದಕ್ಕೆ ಫಲವಾದ ಅಂಗಾಂಗಗಳ ತಿರುವುಗಳಿಗೆ ಮನಸೋತ ಇನ್ನೊಬ್ಬ ಕಲಾವಿದ – ಆರ್.ಎಸ್.ನಾಯುಡು. ಬಹು ಪ್ರತಿಭಾವಂತ. ರೇಖೆಯ ಮೇಲೆ ಅವರ ಅಧಿಪತ್ಯವೆಂತಹುದೆಂಬುದು ಅವರ ಪರಿಚಿತರಿಗೆಲ್ಲಾ ತಿಳಿದ ವಿಷಯವೇ. ರೇಖೆಯು ಅವರು ಹೇಳಿದ ಹಾಗೆ ಕೇಳುತ್ತದೆ. ಇದಕ್ಕೆ ಅವರ ಪತ್ರಗಳೇ ನಿದರ್ಶನ. ಆರ್.ಎಸ್.ಎನ್. (ನಾಯುಡು ಅವರ ಆತ್ಮೀಯರು ಕರೆಯುವಂತೆ) ಅವರ ಪರಿಚಯಸ್ಥರಿಗೆ, ಸ್ನೇಹಿತರಿಗೆ ಕಾಗದಗಳನ್ನು ಬರೆಯುವುದೇ ಒಂದು ವೈಖರಿ. ಅದು ಕಾರ್ಡ್ ಇರಬಹುದು. ಇನೆಲೆಂಡ್ ಲೆಟರ್ ಇರಬಹುದು ಅಥವಾ ಲಕೋಟೆಯಲ್ಲಿಟ್ಟ ಪತ್ರವಾಗಿರಬಹುದು. ಅದರಲ್ಲಿ ಮೊದಲು ಕಾಣಬರುವುದು ಅಕ್ಷರಗಳು ಸ್ಫುಟವಾಗಿರುತ್ತವೆ, ಅವುಗಳ ರೇಖೆ ದೃಢ. ಒಂದೇ ಪ್ರಮಾಣ. ಒಂದು ಕಡೆಗೆ ವಾಲಿರುತ್ತವೆ. ತೆಳುವಾದ ಮನುಷ್ಯ ಮುಂದಕ್ಕೆ ಬಗ್ಗಿ ವೇಗವಾಗಿ ನಡೆಯುತ್ತಿರುವಂತೆ ಭಾಸವಾಗುತ್ತದೆ. ಪತ್ರವನ್ನು ಒಟ್ಟು ನೋಡಿದಾಗ ಪದಾತಿಗಳು ಬಿಗಿಯಾಗಿ ನಡೆದುಹೋಗುವಂತೆ ಭ್ರಮೆಯುಂಟಾಗುತ್ತದೆ.

ಪತ್ರದಲ್ಲಿ ಒಕ್ಕಣೆಯಷ್ಟೇ ಅಲ್ಲ. ಅದಕ್ಕಿಂತ ಸ್ವಾರಸ್ಯವಾದ ಇನ್ನೊಂದಂಶವೂ ಇರುತ್ತದೆ, ಅದು–ಚಿತ್ರ . ಆ ಚಿತ್ರವೂ ಸಮಯಸ್ಫೂರ್ತಿಗೆ ಅನುಸಾರವಾಗಿರುತ್ತದೆ. ಅದು ಯಾವುದಾದರೂ ಸಾಂಕೇತಿಕ ವಸ್ತುವಾಗಿರಬಹುದು. ಯಾವುದಾದರೂ ಮಾನವಾಕೃತಿಯಾಗಿರಬಹುದು ಅಥವಾ ಯಾರದಾದರೂ ವ್ಯಂಗ್ಯಚಿತ್ರವಾಗಿರಬಹುದು. ಚಿತ್ರವೂ ಯಾವುದೇ ಮನಸ್ಸಿನಲ್ಲಿದ್ದು ಡೂಡ್ಲ್ ಮಾದರಿಯಿರಬಹುದು ಅಥವಾ ದಿಟ್ಟವಾದ ರೇಖೆಗಳಿಂದ ವ್ಯಕ್ತವಾದ ನಿರ್ದಿಷ್ಟ ವಸ್ತುವಿರಬಹುದು. ಪ್ರಾಯಶಃ ಲೇಖನಿಯಿಂದ ಬರೆಯುವುದೇ ಪದ್ಧತಿ. ಚಿತ್ರ ಒಂದೇ ಬಣ್ಣದ ಗೆರೆಗಳಿಂದ ರಚಿತವಾಗಿರಬಹುದು. ಕೆಲವದರಲ್ಲಿ ಇನ್ನೂ ಒಂದೆರಡು ಬಣ್ಣಗಳನ್ನು ಅಲಂಕಾರಾರ್ಥವಾಗಿ ಉಪಯೋಗಿಸಿರಬಹುದು. ಅಂತಹ ಸಂದರ್ಭದಲ್ಲಿ ಕಾಗದದ ಒಕ್ಕಣೆ ಮತ್ತು ಚಿತ್ರ ಎರಡಕ್ಕೂ ರೂಪಿಸುದುದರಲ್ಲಿ ಸಾಮ್ಯವು ಅನುಭವವಾಗುವುದು. ಒಕ್ಕಣೆ ಮತ್ತು ಚಿತ್ರ ಎರಡೂ ಸೇರಿ

ಒಟ್ಟು ಕಾಗದವೇ ಒಂದು ಚಿತ್ರಕೃತಿಯಂತೆ ಭಾಸವಾಗುವುದು. ಒಟ್ಟು ಕಾಗದದ ರಚನೆಯಲ್ಲಿ ಆಂತರಿಕ ಲಯ, ಆಕಾರದಲ್ಲಿ ಲವಲವಿಕೆ ಮತ್ತು ರಚನೆಯಲ್ಲಿನ ನಿರ್ಣಯ ಮನಸ್ಸಿನ ಮೇಲೆ ಪರಿಣಾಮಕಾರಿಯಾಗುವಂತಹುದು.

ಆರ್.ಎಸ್.ಎನ್. ಅವರ ಈ ಪತ್ರಗಳ ಅಥವಾ ಅವುಗಳಲ್ಲಿನ ಚಿತ್ರಗಳಲ್ಲಿ ಗಮನಿಸಬೇಕಾದ ಬಹುಪಾಲು ಆಕೃತಿಗಳು ಕಾಣುವಂತೆ ಇರುತ್ತವೆ. ಇದರಿಂದ ಅವರಿಗೆ ರೇಖೆಯಷ್ಟೇ ನೃತ್ಯವೂ ಪ್ರಿಯವೆನ್ನಬಹುದು. ನೃತ್ಯದ ಬಹುಮುಖ ಸೌಂದರ್ಯವನ್ನು ನೂರಾರು ರೇಖಾಚಿತ್ರಗಳಲ್ಲಿ ಗ್ರಹಿಸಿದ್ದಾರೆ, ಆರ್.ಎಸ್.ಎನ್. ಇದರಲ್ಲಿ ಶಾಸ್ತ್ರೀಯ ನೃತ್ಯಪ್ರಕಾರವಾದ ಭರತನಾಟ್ಯದ ಸನ್ನಿವೇಶಗಳಿರಬಹುದು. ಜಾನಪದ ನೃತ್ಯಗಳಿವೆ. ಕೆಲವು ಚಿತ್ರಗಳಲ್ಲಿ ನರ್ತಕಿಗಿಂತ ಅಭಿವ್ಯಕ್ತವಾದ ಕಲೆ ಮತ್ತು ಅದರ ವೈಖರಿ ಮುಖ್ಯವಾಗಿರುತ್ತವೆ. ಇವೆಲ್ಲದರಲ್ಲಿಯೂ ಮಿತ ಪ್ರಮಾಣದ ರೇಖೆಯಲ್ಲಿ ನರ್ತಕಿಯ ಅಥವಾ ನೃತ್ಯದ ಬಾಹ್ಯ ಸೌಂದರ್ಯ ಮತ್ತು ಅಂತರ್ಗತವಾದ ಲಯದ ಚೈತನ್ಯ ಮುಂತಾದುವನ್ನು ಪರಿಣಾಮಕಾರಿಯಾಗಿ ಗ್ರಹಿಸಿದ್ದಾರೆ ಆರ್.ಎಸ್.ಎನ್. ಆದುದರಿಂದ ಅವರ ನೃತ್ಯ ಸನ್ನಿವೇಶಗಳ ರೇಖಾಚಿತ್ರಗಳಲ್ಲಿ ವಸ್ತುವಿನ ಹಾಗೂ ಅದರ ಚಲನವಲನದ ಒಂದು ಸೂಕ್ಷ್ಮ ದೃಷ್ಟಿ, ಅದರ ಅಂತರಂಗ ತಲುಪಿದ ಬಗೆಗೆ ಸ್ಪಂದನ, ಒಟ್ಟು ಪ್ರದರ್ಶನದ ಬಾಹ್ಯ ಮತ್ತು ಅಂತರ್ಗತ ಸೌಂದರ್ಯದ ಬಗೆಗೆ ಅಪೂರ್ವ ಗ್ರಹಣಶಕ್ತಿ, ಮಿಗಿಲಾಗಿ ಸಹೃದಯತೆ ಅನುಭವವಾಗುತ್ತದೆ.

**ಬ್ಯಾಲೆ**

ಆರ್.ಎಸ್.ಎನ್. ಅವರ ನೃತ್ಯ ರೇಖಾಚಿತ್ರಗಳಲ್ಲಿ ಗಮನಾರ್ಹ ಗುಚ್ಛವೊಂದಿದೆ. ಅದು ಪಾಶ್ಚಾತ್ಯ ನೃತ್ಯ ರೂಪಕವಾದ ಬ್ಯಾಲೆಗಳಿಗೆ ಸಂಬಂಧಪಟ್ಟದು. ಭಾರತೀಯ ನೃತ್ಯ ಪ್ರಕಾರಗಳು ಅವು ಜನಪದವಾಗಲೀ, ಶಾಸ್ತ್ರೀಯ ಪ್ರಕಾರವಾಗಲೀ ನಾಯುಡು ಅವರಿಗೆ ಪರಿಚಿತವಾದವು, ಇಲ್ಲಿಯ ಗಾಳಿ ಮತ್ತು ಮಣ್ಣಿನ ಸಂಪರ್ಕ ಪಡೆದಂತಹವು. ಆದುದರಿಂದ ಅವುಗಳ ಆಕಾರವಾಗಲೀ, ಭಾವವಾಗಲೀ, ಆರ್.ಎಸ್.ಎನ್. ಅವರಿಗೆ ಹೊಸತೇನಲ್ಲ. ಅವುಗಳ ಚಲನವಲನಗಳು ಅವರ ಮನಸ್ಸಿನಲ್ಲಿಯೇ ನೆಲೆಸಿವೆ. ರಕ್ತಗತವಾಗಿವೆ. ಆದರೆ ಬ್ಯಾಲೆ, ನಮಗೆ, ನಮ್ಮ ಸಂಸ್ಕೃತಿಗೆ ಹೊಸದು, ಅದರ ವಿನ್ಯಾಸ ಚಲನ, ನಿಲುವು ಮುಂತಾದುವೆಲ್ಲಾ ನಮಗೆ ಹೊಸದು. ಅನೇಕ ಭಾಗದಲ್ಲಿ ಊಹಿಸಲಶಕ್ಯವಾದವು. ಆರ್.ಎಸ್.ಎನ್. ಈ ಬ್ಯಾಲೆ ನೃತ್ಯಕ್ಕೆ ಹೇಗೆ ಮನಸೋತರು? ಏಕೆಂದರೆ ಈ ನೃತ್ಯ ಶೈಲಿಯ ಸತ್ವವನ್ನು ಗ್ರಹಿಸಿ ರೇಖೆಯಲ್ಲಿಳಿಸಬೇಕಾದರೆ ಮನೋಧರ್ಮದಲ್ಲಿ ಬದಲಾವಣೆ ಅವಶ್ಯಕ. ಹೀಗೆ ಬದಲಿಸಿ ಚಿತ್ರ ರಚನೆ ಮಾಡುವ ಸಂದರ್ಭವೇನಿತ್ತು?

ಇದಕ್ಕೆ ಕಾರಣ ಹುಡುಕಲು ಅಂತಹ ಕಷ್ಟಪಡಬೇಕಿಲ್ಲ. ಆರ್.ಎಸ್.ಎನ್. ಸ್ವಭಾವದಲ್ಲಿ ವಾಮ ಪಂಥದವರು ಗರೀಬರ ಶ್ರಮಜೀವಿಗಳ ನಿಜವಾದ ಅಭಿಮಾನಿಗಳು. ಅವರು ಕಮ್ಯೂನಿಸ್ಟ್ ಪಕ್ಷದ ಸದಸ್ಯರಾಗದಿರಬಹುದು. ಆದರೆ ಮಾರ್ಕ್ಸ್‌ವಾದಿಗಳು. ಅಥವಾ ಆ ಗುಂಪಿಗೆ ಸೇರಿದವರು. ಕಮ್ಯೂನಿಸ್ಟ್ ಪಕ್ಷದ ಹಿಂದಿನ ಪೀಳಿಗೆಯ ಅಧ್ವರ್ಯುಗಳಾದ ಪಿ.ಸಿ.ಜೋಷಿ, ಬಿ.ಟಿ. ರಣದಿವೆ, ಅಜಯಘೋಷ್ ಮುಂತಾದವರೆಲ್ಲಾ ಅವರ ಮಿತ್ರರು, ಮಾರ್ಕ್ಸ್‌ವಾದಿಗಳೆಂದ ಮೇಲೆ ಸೋವಿಯತ್ ರಷ್ಯ ಒಂದು ರೀತಿಯ ತಾಯಿನಾಡಿದ್ದ ಹಾಗೆ ಎಂದು ಹೇಳಬೇಕಾಗಿಲ್ಲ. ಅಲ್ಲಿನ ಸಂಸ್ಕೃತಿ ಕಲೆಗಳ ಬಗೆಗೆ ಅಭಿಮಾನವು ಸಹಜವಾದುದು. ಬ್ಯಾಲೆ ನರ್ತನದಲ್ಲಿ ರಷ್ಯಾ ಜಗತ್‌ಪ್ರಸಿದ್ಧವಲ್ಲವೇ? ಆರ್.ಎಸ್.ಎನ್. ಅವರ ಬ್ಯಾಲೆ ಚಿತ್ರಗಳಿಗೆ ಸ್ಫೂರ್ತಿ ಎಲ್ಲಿಯದು ಎಂದು ಹುಡುಕಬೇಕಿಲ್ಲ. ಬ್ಯಾಲೆನೃತ್ಯ ಕಲೆಯ ಅಭಿವೃದ್ಧಿಯಲ್ಲಿ ಫ್ರಾನ್ಸ್, ಇಂಗ್ಲೆಂಡ್ ಮುಂತಾದ ಪಾಶ್ಚಾತ್ಯ ರಾಷ್ಟ್ರಗಳ ಪಾತ್ರ ಮುಖ್ಯವಾದುದು ನಿಜ. ಆದರೆ ರಷ್ಯಾ ದೇಶದ ಪಾತ್ರ ಇನ್ನೂ ಮಹತ್ತರವಾದುದು. ಈ ಶತಮಾನದ ಆದಿ ಭಾಗದಲ್ಲಿ ರಷ್ಯಾದ ಪ್ರಸಿದ್ಧ ನಿರ್ದೇಶಕ ಸರ್ಜಿಪಾಪ್ಲೀವಿಜ್ ಡ್ಯಾಗಲೀಪ್ ಫ್ರಾನ್ಸಿನ ಪ್ಯಾರಿಸ್ ನಗರಕ್ಕೆ ಬಿರುಗಾಳಿಯಂತೆ ಬಂದು ಬ್ಯಾಲೆ ಕ್ಷೇತ್ರದಲ್ಲಿ ಒಂದು ಕ್ರಾಂತಿ ಎಬ್ಬಿಸಿದನು. ಅವರ ಜೊತೆಯಲ್ಲಿ ಚಿತ್ರಕಾರ ಲಿಯೋನ್ ಬಾಕ್ಸ್‌ಟ್ ಮತ್ತು ನೃತ್ಯ ಸಂಯೋಜಕ ಮಿಷೆಲ್ ಪೋಕಿನ್ ಬಂದರು. ಈ ಮೂವರು ರಂಗಸಜ್ಜಿಕೆ, ವಸ್ತ್ರವಸನ, ನೃತ್ಯದ ನಿರ್ವಹಣ ಮತ್ತು ವಿನ್ಯಾಸದಲ್ಲಿ ಅಂದಿನ ಪ್ರಪಂಚಕ್ಕೆ ಅಚ್ಚರಿಯುಂಟು ಮಾಡುವ ಹೊಸ ಅನುಭವವನ್ನು ಉಂಟುಮಾಡಿದರು. ನೇಪಥ್ಯದ ಅಲಂಕಾರಕ್ಕೆ ಅನೇಕ ಪ್ರಸಿದ್ಧ ಚಿತ್ರಕಲಾವಿದರು ಸಹಕರಿಸಿದ್ದರು, ಸಂಗೀತವೂ ಹೊಸತು.

ಅಂದು ಬ್ಯಾಲೆ ಕ್ಷೇತ್ರದಲ್ಲಿ ಮುನ್ನಡೆಯನ್ನು ಸಾಧಿಸಿಕೊಂಡ ರಷ್ಯಾ ಇಂದಿಗೂ ಆ ಸ್ಥಾನವನ್ನು ಉಳಿಸಿಕೊಂಡು ಬಂದಿದೆ. ಚಕ್ರವರ್ತಿಗಳ ಕಾಲದಲ್ಲಿಯೇ ಸ್ಥಾಪಿತವಾಗಿ ನಡೆದುಕೊಂಡು ಬರುತ್ತಿದ್ದ ರಾಜ್ಯ ನೃತ್ಯ ಶಾಲೆಯನ್ನು ಕ್ರಾಂತಿಯಾಗಿ

ಸೋವಿಯತ್ ರಷ್ಯವಾದ ನಂತರ ಕಾಲಾನುಗುಣವಾಗಿ ಇನ್ನೂ ಅಭಿವೃದ್ಧಿಪಡಿಸಲಾಯಿತು. ಇಂದು ಮಾಸ್ಕೋ ನಗರದಲ್ಲಿರುವ ರಾಜ್ಯ ಬ್ಯಾಲೆ ಕಲಾ ಶಾಲೆ ಮತ್ತು ಬಾಲ್ ಪೇಯ ರಂಗಮಂದಿರ ಜಗತ್‌ಪ್ರಸಿದ್ಧವಾದವುಗಳು. ರಷ್ಯಾ ದೇಶದ ಬ್ಯಾಲೆ ತಂಡಗಳು ಅಂತರರಾಷ್ಟ್ರಖ್ಯಾತವಾದವುಗಳು. ಅನಾ ಪಾವ್ಲೋವಾ, ಟಮಾರಾ ಕಾರ್ಸ್ಯಾವಿನಾ, ಅಲಿಷಿಯಾ ಮಾರ್ಕೋವಾ, ಗಾಲಿನ ಉಲಾನೋವಾ ಮುಂತಾದ ರಷ್ಯಾ ನರ್ತಕಿಯರು ಬ್ಯಾಲೆ ಇತಿಹಾಸದ ಪ್ರಸಿದ್ಧ ವ್ಯಕ್ತಿಗಳಾಗಿದ್ದಾರೆ.

ಇನ್ನು ಬ್ಯಾಲೆ ಎಂದರೇನು? ಅದೊಂದು ನೃತ್ಯ ರೂಪಕ. ನಿರ್ದಿಷ್ಟವಾದ ಸಂಗೀತಕ್ಕನುಸಾರವಾಗಿ ನರ್ತಿಸುವ ನೃತ್ಯ ಪ್ರಕಾರ. ಅದು ಕೇವಲ ವಾದ್ಯ ಸಂಗೀತವಾಗಿರಬಹುದು. ಗಾಯನವಿರಬಹುದು. ನೃತ್ಯದಲ್ಲಿ ಏಕ ಪಾತ್ರವಿರಬಹುದು, ಬಹುಪಾತ್ರವಿರಬಹುದು. ಒಟ್ಟಿನಲ್ಲಿ ನಮ್ಮ ನಾಟ್ಯಶಾಸ್ತ್ರದಲ್ಲಿ ವಿವರಿಸಲಾದ ನಾಟ್ಯವನ್ನೇ ಹೋಲುತ್ತದೆ. ಅಪೆರಾ ಅಥವಾ ಗೇಯ ನಾಟಕಗಳಿಂದ ಸ್ಫುರಿತವಾಗಿ ಬ್ಯಾಲೆ ಪ್ರಕಾರವು ಹುಟ್ಟಿತೆಂದು ಒಂದು ಭಾವನೆಯಿದೆ. ಇರಬಹುದು. ಒಟ್ಟಿನಲ್ಲಿ ಇದು ಬಹು ಆಕರ್ಷಣೆಯ ದೃಶ್ಯರೂಪಕವಾಗಿದೆ. ಯುರೋಪ್ ಖಂಡದಲ್ಲಿ ಪ್ರಚಲಿತವಿದ್ದ ನಾನಾ ನೃತ್ಯ ಪ್ರಕಾರಗಳು ಒಟ್ಟುಗೂಡಿ ಹದಿನಾರನೆಯ ಶತಮಾನದಲ್ಲಿ ನಿರ್ದಿಷ್ಟ ರೂಪಗಳಿಂದ ಬ್ಯಾಲೆ ಕಲೆಗೆ ಕ್ರಮವಾದ ನಿರ್ದಿಷ್ಟ ಸೂಕ್ತ ನಿಯಮಗಳು ರೂಪಿತವಾಗುತ್ತಾ ಬಂದಿತು. ನಿಲುವು, ಚಲನ, ಉಡುಪು ಇವುಗಳೆಲ್ಲಾ ನಿಯಾಮಾನುಸಾರವಾಗಿರುತ್ತವೆ. ನೂರಾರು ವರ್ಷಗಳಿಂದ ರೂಢಿಯಲ್ಲಿದ್ದು ಅನೇಕ ಉಪಪ್ರಕಾರಗಳು ಹುಟ್ಟಿಕೊಳ್ಳಲು ಆಸ್ಪದವಾಗಿದೆ.

ನಿದರ್ಶನವಾಗಿ ಬ್ಯಾಲೆ ಅಂಬುಲೇಟ್ವ ಇದು ಒಂದು ನೃತ್ಯ ಮತ್ತು ಅಭಿನಯದಿಂದ ಕೂಡಿದ ಪ್ರಕಾರ, ಮೆರವಣಿಗೆಯ ಪ್ರಕಾರದಲ್ಲಿರುತ್ತದೆ. ಯಾರಾದರೂ ಪ್ರಸಿದ್ಧ ವ್ಯಕ್ತಿಗಳು ಬಂದಾಗ ಅವರನ್ನು ಸ್ವಾಗತಿಸಲು ಉಪಯೋಗಿಸುತ್ತಿದ್ದ ಪ್ರಕಾರವಿದು. ಇಂಡೋನೇಷಿಯದ ಪೆಂಡೆಟ್ ನೃತ್ಯದ ಮಾದರಿ ಎನ್ನಬಹುದು. ಈಗ ಅದರ ಪ್ರಚಾರ ಕಡಿಮೆಯಾಗಿದೆ. ಇದರಂತೆ ಇನ್ನೊಂದು ಪ್ರಕಾರ ಬ್ಯಾಲೆ ಬ್ಲಾಂಕ್ ಅಥವಾ ಬಿಳಿಯ ಬ್ಯಾಲೆ ಎಂದು ಕರೆಯುತ್ತಾರೆ, ಕಾರಣ ಇದರಲ್ಲಿ ಬರುವ ಪಾತ್ರಗಳೆಲ್ಲಾ ಬಿಳಿಯ ಉಡುಪುಗಳನ್ನು ಧರಿಸಿರುತ್ತವೆ. ಲೆಸಿಲ್ ಫೈಡ್ಸ್, ಸ್ವಾನ್ ಲೇಕ್ ಮುಂತಾದ ನೃತ್ಯ ನಾಟಕಗಳು ಇದಕ್ಕೆ ಉತ್ತಮ ನಿದರ್ಶನ,

ಇದರಂತೆ ಇನ್ನೊಂದು – ಬ್ಯಾಲೆ ಆಕ್ಷನ್, ಇಲ್ಲಿ ಕಥಾ ಪ್ರಧಾನ. ಅದು ಎದ್ದು ಕಾಣುವಂತೆ ಇರುತ್ತದೆ. ಅಭಿನಯ ಹೆಚ್ಚು ಸಂಗೀತ ಮುಂತಾದವು ಇದಕ್ಕೆ ಸಹಾಯಕ ಮತ್ತು ಗೌಣ. ನಮ್ಮ ನಾಟ್ಯ ಪದ್ಧತಿಯಲ್ಲಿರುವಂತೆಯೇ ಹಸ್ತ, ಪದ ವಿನ್ಯಾಸ, ನಿಲುವು ಮುಂತಾದವುಗಳ ಬಗೆಗೆ ನಿಯಮಗಳಿವೆ. ಬ್ಯಾಲೆ ನೃತ್ಯದ ಚಲನ ವಲನದಲ್ಲಿ ಐದು ಆಧಾರಭೂತ ಸ್ಥಾನ ಅಥವಾ ನಿಲುವುಗಳಿವೆ. ಇವು ಪ್ರಧಾನವಾಗಿ ಪಾದ ಚಲನಕ್ಕೆ ಸಂಬಂಧಪಟ್ಟವು. ಇಂತಹ ಒಂದು ಚಲನೆಯಿಂದ ಸಾಂಪ್ರದಾಯಿಕ ಬ್ಯಾಲೆ ನೃತ್ಯ ಪ್ರಾರಂಭ ಹಾಗೆಯೇ ಅಂತ್ಯವಾಗುವುದು ಇನ್ನೊಂದು ನಿಯುಕ್ತ ಪಾದ ಚಲನೆಯಿಂದ, ಇದರಿಂದ ನೃತ್ಯವು ಏರುಪೇರುಗಳಿಲ್ಲದೆ ಸಮರ್ಪಕವಾಗಿ ನಡೆಯಲು ಅನುಕೂಲ. ಈ ಪಂಚಸ್ಥಾನ ಅಥವಾ ಭಂಗಿಗಳು ಕಾಲುಗಳ ಹಾಗೆಯೇ ಕೈಗಳಿಗೂ ಅನ್ವಯವಾಗುವ ಸ್ಥಾನಗಳು ಇವೆ.

ಮೊದಲನೆಯ ಸ್ಥಾನದಲ್ಲಿ ನರ್ತಕಿ ನೆಟ್ಟಗೆ ನಿಂತು ಕಾಲುಗಳನ್ನು ಒತ್ತಾಗಿ ಜೋಡಿಸಿರುವುದು. ಪಾದಗಳು ಮಾತ್ರ ಬಿಡಿಸಿ ಬಲ ಮತ್ತು ಎಡ ಮುಖವಾಗಿ ಒಂದೇ ಗೆರೆಯ ಮೇಲೆ ನಿಂತಂತೆ ಇರುತ್ತದೆ. ಇದು ಪ್ರಾಯಶಃ ನಮ್ಮ ನೃತ್ಯದ ದೇಸಿ ಸ್ಥಾನಕಗಳಲ್ಲಿ ಒಂದಾದ ವರ್ಧಮಾನಸ್ಥಾನಕವನ್ನು ಹೋಲುತ್ತದೆ.

ಎರಡನೆಯ ಸ್ಥಾನದಲ್ಲಿ ಅದೇ ಬಲ ಮತ್ತು ಎಡಮುಖವಾದ ಪಾದಗಳು ಒತ್ತಿಕೊಂಡಿದ್ದ ಹಿಮ್ಮಡಿಗಳಿಂದ ಬೇರ್ಪಟ್ಟು ಆಗಲಿಸಿ ನಿಲುವುದು ಹಾಗೆಯೇ ಎರಡೂ ಕೈಗಳನ್ನು ಪಕ್ಕ ಪಕ್ಕವಾಗಿ ಚಾಚಿರುವುದು, ಇದು ಪ್ರಾಯಶಃ ದೇಸಿ ಸ್ಥಾನಕಗಳಲ್ಲಿ ಒಂದಾದ ವಿಶಾಖ ದೇಸಿ ಸ್ಥಾನಕವನ್ನು ಹೋಲುತ್ತದೆ.

ಮೂರನೆಯ ಸ್ಥಾನದಲ್ಲಿ ಅದೇ ಬಲಕ್ಕೂ ಎಡಕ್ಕೂ ತಿರುಗಿದ ಪಾದಗಳಲ್ಲಿ ಬಲಪಾದವನ್ನು ತಂದು ಎಡಪಾದದ ಮುಂದೆ ಬರುವಂತೆ ಕಾಲುಗಳನ್ನು ಜೋಡಿಸಿ ನಿಲ್ಲುವುದು. ಇದು ಪ್ರಾಯಶಃ ದೇಸಿ ಸ್ಥಾನಕಗಳಲ್ಲಿ ಪೌರ್ಷ್ಣಿವಾಗದಂತೆ ಇರುವುದು.

ನಾಲ್ಕನೆಯ ಸ್ಥಾನದಲ್ಲಿ ಎರಡನೆಯದರಂತೆಯೇ ಆದರೆ ಒಂದು ಪಾದವನ್ನು ಒಂದಡಿಯಷ್ಟು ಮುಂದಕ್ಕೆ ಇಡುವುದು. ಎರಡೂ ಪಾದಗಳು ಯಥಾಪ್ರಕಾರ ಪಕ್ಕವಾಗಿ ತಿರುಗಿ ನಿಂತಿರುವುದು. ಬಲಗೈ ಪಕ್ಕಕ್ಕೆ ಚಾಚಿರುವುದು. ಎಡಗೈ ಮಡಚಿ ಹಸ್ತವು ವಕ್ಷಸ್ಥಲವನ್ನು ಮುಟ್ಟುತ್ತಿರುವುದು. ಇದು ಪ್ರಾಯಶಃ ನಮ್ಮ ನಾಟ್ಯದಲ್ಲಿ ಎರಡು ಮಿಳಿತವಾದಂತಹ ಚಲನೆಗಳನ್ನು ಹೋಲುವಂತಿದೆ. ಪೌರ್ಷ್ಣಿವಿದ್ಧ ಸ್ಥಾನದಲ್ಲಿರುವ ನರ್ತಕಿ ಎರಡು ಪಾದಗಳನ್ನು ಬಿಡಿಸಿ ಅದು ದೂರ ಸರಿವಾಗ ಬಲವಾಗಿ ಹಿಮ್ಮಡಿಯು ಎಡಗಾಲು ಹೆಬ್ಬೆಟ್ಟನ್ನು ಸ್ಪರ್ಶಿಸಿ ವಿಶಿಷ್ಟ ಭೌಮಿ ದೇಸಿ ಚಾರಿಯಲ್ಲಿ ಚಲಿಸುವಂತೆ ಕಾಣಬಹುದು. ಈ ನಾಲ್ಕನೆಯ ಸ್ಥಾನದಲ್ಲಿ ಇನ್ನೂ ಒಂದು ವಿಧವಿದೆ. ಅದರಲ್ಲಿ ಬಲಗೈ ಎಂದಿನಂತೆ ಪಕ್ಕಕ್ಕೆ ಚಾಚಿ, ಎಡಗೈ ಮೇಲಕ್ಕೆತ್ತಿರುವುದು. ನರ್ತಕಿಯು ಮುಂದೆ ಇಟ್ಟಿದ್ದ ಪಾದವನ್ನು ಹಿಂದಕ್ಕೆ ತಂದು ಎರಡು ಪಾದಗಳಿಗೆ ದೇಸಿ ಸ್ವಸ್ತಿಕ ಭಾಮಿ ಚಾರಿಯ ರೀತಿಯಲ್ಲಿ ನಿಲುಗಡೆಗೆ ತರುವುದು.

ಐದನೆಯ ಸ್ಥಾನದಲ್ಲಿ ನಿಂತ ನರ್ತಕಿಯ ಎರಡೂ ಪಾದಗಳು ಪಕ್ಕ ಪಕ್ಕವಾಗಿ ತಿರುಗಿ ಒಂದರ ಮುಂದೆ ಒಂದು ಒತ್ತಿಕೊಂಡಿರುತ್ತವೆ. ಎರಡೂ ಕೈಗಳು ಮೊದಲು ಸೊಂಟದ ಮೇಲೆ ನಂತರ, ಮಡಚಿ ಹಸ್ತಗಳು ವಕ್ಷಸ್ಥಲವನ್ನು ಮುಟ್ಟುವುದು. ಆನಂತರ ಮೇಲಕ್ಕೆತ್ತಿ ಇಡುವುದು ಪ್ರಾಯಶಃ ಇದು ಪಾರ್ಷ್ಣಿವಿದ್ಧ ದೇಸಿ ಸ್ಥಾನಕದಂತೆ ಅನುಭವವಾಗುವುದು.

ಈ ಮೂಲ ಹಾಗೂ ಮುಖ್ಯವಾದ ಪಂಚ ಭಂಗಿಗಳೇ ಅಲ್ಲದೆ ನಾನಾ ವಿಧವಾದ ನಿಲುಗಡೆಗಳು ಅಂಗರಚನೆಗಳು ಹಸ್ತ, ದೇಹ ಮತ್ತು ಪಾದ ಚಲನೆಗಳು ಅಂದವಾದ ಜೋಡಣೆಗಳು ಇವೆ. ಇವುಗಳನ್ನು ನೃತ್ಯ ಮಾಡುವಾಗ ಸಂದರ್ಭೋಚಿತವಾಗಿ ಉಪಯೋಗಿಸುವರು. ಇವುಗಳಲ್ಲಿ ಈಗ ಕೆಲವನ್ನು ವಿವರಿಸಿದೆ.

ಮೊದಲು ಅರಾಬೆಸ್ಕ್. ಇದರಲ್ಲಿ ನರ್ತಕಿಯ ಕಾಲ ಹೆಬ್ಬೆಟ್ಟಿನ ತುದಿಯ ಮೇಲೆ ನಿಲುಗಡೆ, ಇನ್ನೊಂದು ಕಾಲು ೯೦ ಡಿಗ್ರಿ ಅಂತರದಲ್ಲಿ ಚಾಚಿರುತ್ತದೆ. ಕೈಗಳು ಅಷ್ಟೆ, ಪಕ್ಷಿಯ ಬಿಚ್ಚಿದ ರೆಕ್ಕೆಗಳಂತೆ ಚಾಚಲಾಗಿರುತ್ತವೆ, ನೋಡಲು ಆಕಾಶದಲ್ಲಿ ಹಾರುತ್ತಿರುವ ವ್ಯಕ್ತಿಯಂತೆ ಅನುಭವವಾಗುವ ಈ ನಿಲುಗಡೆ ಬಹುಶಃ ಎಲೆಗಳಿಂದ ಅಥವಾ ಅವುಗಳನ್ನು ಬಳಸಿ ಯುರೋಪಿನಲ್ಲಿ ೧೫ನೆಯ ಶತಮಾನದ ನವಚೇತನ ಯುಗದಲ್ಲಿ ಮಾಡಿದ ಅಲಂಕಾರಗಳ ಸ್ಫೂರ್ತಿ ಇರಬಹುದೆಂದು ಭಾವಿಸಲಾಗಿದೆ. ಈ ಅರಾಬೆಸ್ಕ್ ನಿಲುಗಡೆ ನೋಡಲು ಬಹು ಆಕರ್ಷಣೀಯವಾದುದು, ಬ್ಯಾಲೆಗಳಲ್ಲಿ ಬಹುಮುಖ್ಯವಾದುದು. ಇದರಲ್ಲಿಯೇ ನಾನಾ ವಿಧಗಳಿವೆ, ಅವುಗಳ ಹೆಸರುಗಳು ಆಯಾ ದೇಶ ಮತ್ತು ಶಿಕ್ಷಣ ಸಂಪ್ರದಾಯಗಳಿಗನುಗುಣವಾಗಿ ಬೇರೆ ಬೇರೆ ಇರುತ್ತವೆ.

ಈ ಆರಾಬೆಸ್ಕ್ ನಿಲುಗಡೆ ಪ್ರಾಯಶಃ ನಮ್ಮ ನಾಟ್ಯ ಪದ್ಧತಿಯ ವೃಶ್ಚಿಕರೇಚಿತಕರಣವನ್ನು ಹೋಲುವಂತಿದೆ. ಆದರೆ ಕರಣದಲ್ಲಿ ನಿಂತ ಕಾಲು ಸಾಂಪ್ರದಾಯಿಕ ಅರ್ಧಮಂಡಲ ರೀತಿಯಲ್ಲಿ ಸ್ವಲ್ಪ ಬಗ್ಗಿದೆ, ಆದರೆ ಅರಾಬೆಸ್ಕ್‌ನಲ್ಲಿ ನೆಟ್ಟಗಿರುವುದು ಪಾಶ್ಚಾತ್ಯ ಬ್ಯಾಲೆ ನೃತ್ಯದ ವಿಶೇಷ ಅಂಶವಿದು. ದೇಹದ ಅಂಗಾಂಗಗಳು, ಕಾಲು ಕೈ ಮುಂತಾದವು ಚಾಚಿದಾಗ ನೇರವಾಗಿರುವುದು, ನೋಡಲು ಅಂದವಾಗಿರುವುದು. ಹಾರಲು ಸಿದ್ಧವಾಗಿರುವ ಪಕ್ಷಿಯಂತೆ ಅನುಭವ ಉಂಟುಮಾಡುವ ಈ ಅರಾಬೆಸ್ಕ್ ನಿಲುಗಡೆ ಪಾಶ್ಚಾತ್ಯ ಬ್ಯಾಲೆಯ ಒಂದು ವೈಶಿಷ್ಟ್ಯ.

ಇದರಂತೆ ಇನ್ನೊಂದು ನಿಲುಗಡೆಯನ್ನು ಆಟಿಟ್ಯೂಡ್ ಎಂದು ಕರೆಯುವರು. ಇದು ೧೬ನೆಯ ಶತಮಾನದ ಒಂದು ಗ್ರೀಕ್ ದೇವತಾ ವಿಗ್ರಹ ಮರ್ಕ್ಯುರಿ ಅಂದರೆ ಬುಧ ದೇವತಾ ವಿಗ್ರಹದಿಂದ ಸ್ಫುರಿತವಾದುದುದೆಂದು ಹೇಳಾಗಿದೆ. ಈ ನಿಲುಗಡೆಯ ವೃಶ್ಚಿಕರೇಚಿತಕರಣದಂತೆಯೇ ಅನುಭವವಾಗುವುದು. ಆದರೆ ಕೈಗಳ ವಿನ್ಯಾಸದಲ್ಲಿ ವ್ಯತ್ಯಾಸವಿದೆ.

ಇನ್ನು ಸುರ್‌ಲೆಪೀಡ್ ಈ ನಿಲುಗಡೆ ಕಾಲುಗಳಿಗೆ ಸಂಬಂಧಪಟ್ಟದು. ಇದರಲ್ಲಿ ಒಂದು ಪಾದವು ಭದ್ರವಾಗಿ ನೆಲದ ಮೇಲೆ ಊರಿದೆ ಮತ್ತು ಪಕ್ಕ ಪಾರ್ಶ್ವಕ್ಕೆ ತಿರುಗಿರುತ್ತದೆ. ಇನ್ನೊಂದು ಅದರ ಮುಂದುಗಡೆ ಹೆಬ್ಬೆಟ್ಟಿನ ಮೇಲೆ ನಿಂತಂತೆ ಇರುತ್ತದೆ. ಈ ಬಗೆಯದಕ್ಕೆ ಸೂಚಿ ಎಂದು ನಮ್ಮ ನೃತ್ಯ ಸಂಪ್ರದಾಯದಲ್ಲಿ ಕರೆಯುತ್ತಾರೆ. ಈ ಒಟ್ಟು ನಿಲುಗಡೆ ಸ್ಥೂಲವಾಗಿ ನಮ್ಮ ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಶ್ವಕ್ರಾಂತ ಎಂದು ಕರೆಯುವ ಮಾರ್ಗಶ್ರೀ ಸ್ಥಾನವನ್ನು ಹೋಲುವಂತೆ ಕಾಣಬರುತ್ತದೆ.

ಆನಂತರ ಕ್ರಾಸ್ ಅಂದರೆ ಅಡ್ಡಕಾಲುಗಳು ಎನ್ನೋಣ. ಇವುಗಳಲ್ಲಿಯೂ ನಾನಾ ವಿಧ, ಈ ನಿಲುಗಡೆಯಲ್ಲಿ ನರ್ತಕಿಯು ಸಭೆಗೆ ಸ್ವಲ್ಪ ಓರೆಯಾಗಿರುತ್ತಾಳೆ. ಸಭೆಗೆ ಹತ್ತಿರವಾದ ಪಾದವನ್ನು ಹೆಬ್ಬೆಟ್ಟಿನ ಮೇಲೆ ನಿಲ್ಲಿಸಿ ಕತ್ತರಿಯಂತೆ ಕಾಲುಗಳನ್ನು ಜೋಡಿಸಿದಾಗ ಕ್ರಾಸ್ಸ್ ಡೀವಾ ಎನ್ನುತ್ತಾರೆ. ಹೀಗೆ ಬೇರೆ ಬೇರೆ ವಿನ್ಯಾಸಕ್ಕೆ ಬೇರೆ ಬೇರೆ ಹೆಸರುಗಳಿವೆ. ಈ ನಿಲುಗಡೆಯನ್ನು ಒಟ್ಟಾಗಿ ಪರಿಶೀಲಿಸಿದಾಗ ನಮ್ಮ ನಾಟ್ಯಸಂಪ್ರದಾಯದ ಸಮೋತ್ಸಾರಿತ ಮತ್ತಲಿ ಎಂಬ ಭೂಮಿಚಾರಿಯ ನೆನಪುಂಟು ಮಾಡುವುದು.

ಅಗ್ರತಲ ಸಂಚಾರ ವಿಧಾನದಿಂದ ಒಂದು ಪಾದವನ್ನು ಹಿಂದಕ್ಕೆ ತಂದು ನೆಲದ ಮೇಲೆ ಊರಲಾಗುತ್ತದೆ. ಇನ್ನೊಂದನ್ನು ಮುಂದಿಟ್ಟು ಕಾಲುಗಳೆರಡೂ ಸ್ವಸ್ತಿಕ ಆಕಾರದಲ್ಲಿರುವಂತೆ ಕಾಣಬರುತ್ತದೆ. ಡಿಗೇಜ್ ಅಥವಾ ದಾಸ್‌ಡಿಗೇಜ್ ಅಂದರೆ ಪಾದವನ್ನು ಬಿಡಿಸಿದ ನಡೆ. ಇದರಲ್ಲಿ ಎರಡು ವಿಧ. ಜೊತೆಗೂಡಿದ ಪಾದಗಳಲ್ಲಿ ಒಂದನ್ನು ಬಿಡಿಸಿ ಮುಂದಕ್ಕೆ ಅಡಿ ಇಡುವುದು. ಇನ್ನೊಂದರಲ್ಲಿ ಅದೇ ರೀತಿ ಹಿಂದಕ್ಕೆ ಅಡಿ ಇಡುವುದು. ನಮ್ಮ ನಾಟ್ಯ ಸಂಪ್ರದಾಯದಂತೆ ಪ್ರಾಯಶಃ ವೇಟ್ಟಿತ ಎಂಬ ಮಾರ್ಗ ಸ್ತ್ರೀಸ್ಥಾನಕವನ್ನು ಹೋಲುವುದು. ಅಲ್ಪ ವ್ಯತ್ಯಾಸದಿಂದ ವೇಟ್ಟಿತದಲ್ಲಿ ಒಂದು ಪಾದವು ಸಮೀಪದಲ್ಲಿದ್ದು ಇನ್ನೊಂದು ಹೆಬ್ಬೆಟ್ಟು ನೆಲಕ್ಕೆ ತಾಗುವಂತೆ ಕುಂಚಿತ ರೀತಿಯಲ್ಲಿರುತ್ತದೆ. ಇಲ್ಲಿ ಕುಂಚಿತಪಾದವು ಮುಂದೆ ಇದ್ದು ಹಿಂದಿನ ಪಾದವು ನೆಲದ ಮೇಲೆ ಊರಿ ಪಾರ್ಶ್ವಕ್ಕೆ ತಿರುಗುತ್ತದೆ. ಇದರ ಇನ್ನೊಂದು ವಿಧದಂತೆ ನಿವೃತ್ತವು ಸ್ತ್ರೀಸ್ಥಾನಕವನ್ನು ಹೋಲುವುದು. ಈ ನಿವೃತ್ತವೆಂಬುದು ವೇಟ್ಟಿತವೇ. ಆದರೆ ಹಿಮ್ಮೊಗವಾಗಿ ನಡೆವುದು.

ಎಸ್‌ಕಾರ್ಟ್. ಹಾಗೆಂದರೆ ಹರಡುವುದು ಎಂದರ್ಥ. ಇದರಲ್ಲಿ ಶರೀರವು ಸಭೆಗೆ ಅಭಿಮುಖವಾಗಿ ಓರೆಯಾಗಿ ನಿಂತಿರುವುದು. ಇದರಲ್ಲಿ ಮುಂದಿನ ಕಾಲು ಕೈಗಳೆಲ್ಲಾ ಪಕ್ಕಕ್ಕೆ ಚಾಚಲಾಗಿ ಹರಡಿಕೊಳ್ಳುವುದು. ಇದರಲ್ಲಿಯೇ ಬೇರೆ ಬೇರೆ ವಿಧಗಳಿವೆ. ಡೆಕ್ರಾಸ್, ಡೆಪೇಸ್, ಎಪ್ಪೇಸ್, ಇತ್ಯಾದಿ. ಈ ಎಪ್ಪೇಸ್ ನಿಲುವು ಪ್ರಾಯಶಃ ನಮ್ಮ ನಾಟ್ಯ ಸಂಪ್ರದಾಯದ ಅಗ್ರತಲ ಸಂಚಾರದ ಚಲನೆಯಂತೆ ಅನುಭವವಾಗುವುದು.

ನಮ್ಮ ನಾಟ್ಯ ಸಂಪ್ರದಾಯದಂತೆ ಬ್ಯಾಲೆ ಕಲೆಯಲ್ಲಿಯೂ ಮೈಮ್ ಅಂದರೆ ಅನುಕರಣ ಅಥವಾ ಅಭಿನಯ ಉಂಟು. ಅಂತರ್ಗತ ಭಾವನೆಗಳನ್ನು ಪ್ರಕಟಪಡಿಸಲು ಮುಖ ಹಸ್ತ ಶರೀರ ಮತ್ತು ಇತರ ಅವಯವಗಳ ಕ್ರಮಬದ್ಧವಾದ ಚಲನೆಯಿಂದ ಯುಕ್ತವಾತಾವರಣ ಮತ್ತು ಭಾವೋತ್ಪತ್ತಿ ಮಾಡಲಾಗುವುದು. ಈ ನೂರಾರು ವರುಷಗಳ ಇತಿಹಾಸದಲ್ಲಿ ಇಂತಹ ಚಲನವಲನಗಳು ಉಪಯೋಗಿತವಾಗಿ ಈಗ ಕೆಲವು ಸಂಪ್ರದಾಯಬದ್ಧ ಚಲನೆಗಾಗಿ ರೂಪಿತವಾಗಿ ಉಪಯೋಗದಲ್ಲಿವೆ. ನಿದರ್ಶನವಾಗಿ ಇಲ್ಲ ಎಂದು ಸೂಚಿಸುವ ಹಸ್ತಮುದ್ರೆ. ಸ್ಥೂಲವಾಗಿ ಒಂದು ಕೈ ಲತಾಹಸ್ತ ರೀತಿ ಇದ್ದು ಇನ್ನೊಂದು ಕರೆಯುವಂತೆ ಅಭಯ ರೀತಿ ಇರುವುದು.

ಹಾಗೆಯೇ ಕೇಳು ಎಂಬುದನ್ನು ಸೂಚಿಸುವ ಹಸ್ತ ಸ್ಥೂಲವಾಗಿ ವಿಧೇಯತೆಯನ್ನು ಅಥವಾ ನಮ್ರತೆಯನ್ನು ಸೂಚಿಸುವ ಅಂಜಲಿ ಹಸ್ತಗಳ ರೀತಿ ಇರುವುದು.

ಇನ್ನೊಂದು ಮುದ್ರೆ ಕಿವಿಯ ಬಳಿ ಕೈ ಹೋಗಿ ಆಲಿಸುತ್ತಿರುವಂತೆ ಇರುವುದು, ಅದರ ಅರ್ಥವೂ ಅದೇ ಆಲಿಸುವ ಕಾರ್ಯವನ್ನು ಚತುರ ಹಸ್ತ ಹಿಡಿದು ಸೂಚಿಸುವ ರೀತಿ ಇದೆ.

ಕಣ್ಣಿಗೆ ಸಂಬಂಧಪಟ್ಟ ಚಲನೆ, ಎರಡೂ ಹಸ್ತಗಳು ಕಣ್ಣಿನ ಮೇಲೆ, ನಮ್ಮ ವರ್ತಾ ಹಸ್ತಗಳು ಕಣ್ಣನ್ನು ಸೂಚಿಸುವಂತೆ, ಇರುವುದು.

ಹಾಗೆಯೇ ಇನ್ನೊಂದು ಚಲನೆ ಎರಡೂ ಕೈಗಳನ್ನೂ ಚಾಚಿ ಬಲಗೈ ಎಡಗೈಯನ್ನು ತೋರುತ್ತಿರುವಂತಿರುವುದು, ಸ್ಥೂಲವಾಗಿ ನಮ್ಮ ಪದ್ಧತಿಯ ಬಲ ಸೂಚಿಹಸ್ತವು ಎಡಗೈ ಅಂಗುಳೀ ಬೆರಳನ್ನು ಸೂಚಿಸುವಂತಹ ಈ ಚಲನೆ ಬ್ಯಾಲೆ ನೃತ್ಯದಲ್ಲಿ ವಿವಾಹವನ್ನು ಸೂಚಿಸುವ ಮುದ್ರೆಯಾಗುವುದು. ಹೀಗೆಯೇ ಇತರ ಚಲನೆಗಳಲ್ಲಿಯೂ ನಮ್ಮ ಮುದ್ರೆಗಳಿಗೆ ಸ್ಥೂಲವಾಗಿ ಹೋಲುವ ಅಂಶಗಳನ್ನು ಕಾಣಬಹುದು.

ನಮ್ಮಲ್ಲಿ ವಿಧ ವಿಧ ಮುದ್ರೆ ಹಾಗೂ ಅಂಗ ವಿನ್ಯಾಸಗಳನ್ನು ಜೊತೆಗೂಡಿಸಿ ನಾಟ್ಯವಾಡುವಂತೆ ಈ ಬ್ಯಾಲೆಯಲ್ಲಿಯೂ ಮಾಡುತ್ತಾರೆ. ನಮ್ಮಲ್ಲಿಯೂ ಸಾಂಪ್ರದಾಯಿಕವಾಗಿ ಬಂದ ನೃತ್ಯ ನಾಟಕಗಳಂತೆಯೇ ಬ್ಯಾಲೆಯಲ್ಲಿಯೂ ಸಹ ಇವುಗಳಲ್ಲಿ ಕೆಲವು ಇಂದಿಗೂ ಮಾಗದಿರುವ ಮೌಲ್ಯ ಮತ್ತು ರಸಭಾವಗಳಿಂದ ಬ್ಯಾಲೆ ಕ್ಷೇತ್ರದ ಆಧಾರ ಸ್ಥಂಭಗಳಂತೆ ಆಗಿವೆ. ನಿದರ್ಶನವಾಗಿ ಗಿಸೆಲ್, ಹಾಗೆಯೇ ಸ್ವಾನ್‌ಲೇಕ್ ಅಥವಾ ಅರೋರಾ ದೇವತೆಯ ವಿವಾಹ. ಖ್ಯಾತ ಸಂಗೀತ ರಚನಾಕಾರ ಚೈಕೋವ್‌ಸ್ಕಿಯ ಸಂಗೀತ ರಚನೆಯ ಮೇಲೆ ಚಲಿಸುವ ಈ ಸ್ವಾನ್‌ಲೇಕ್ ಜಗತ್ ಪ್ರಸಿದ್ಧ ಬ್ಯಾಲೆ, ರಷ್ಯಾ ಬ್ಯಾಲೆ ಕಲೆಗೆ ಮುಕುಟಪ್ರಾಯವಾಗಿರುವಂಥದು. ಆನಂತರ ಲೆ ಸಿಲ್ ಫೈಡ್ಸ್, ಲೆಸ್ಪೆಕ್ಟರ್ ಡಿಲಾರೋಸ್, ಕಾರ್ನಿವಾಲ್, ಷಹರಜಾದೆ, ಪೆಟ್ರೋಚ್ಕ, ಸ್ಪಾರ್ಟಕಸ್ ಮುಂತಾದ ಬ್ಯಾಲೆಗಳು ಜಗತ್ ಪ್ರಸಿದ್ಧವಾಗಿವೆ. ಇವೆಲ್ಲ ರಷ್ಯಾ ದೇಶದ ನಿರ್ದೇಶಕರು, ನರ್ತಕ ನರ್ತಕಿಯರ ಹಿರಿಮೆಯಲ್ಲಿ ಜಗತ್‌ಪ್ರಸಿದ್ಧವಾದುವೇ.

ಈಗ ಆರ್.ಎಸ್.ಎನ್.ರವರ ನೃತ್ಯಚಿತ್ರಗಳನ್ನು ಪರಿಶೀಲಿಸುವ ಮೊದಲು ಅವುಗಳಿಗೆ ಸಂಬಂಧಿಸಿದಂತಹ ಬ್ಯಾಲೆ ಅಥವಾ ನೃತ್ಯ ನಾಟಕಗಳ ಸ್ಥೂಲ ಪರಿಚಯ ಮಾಡಿಕೊಡಬೇಕಾಗಿದೆ. ಈ ನಾಟಕಗಳೆಲ್ಲಾ ರಷ್ಯಾ ದೇಶದ ಬ್ಯಾಲೆ ತಂಡಗಳಿಂದ ಅಭಿನಯಿಸಲಾದಂತಹವು ಮತ್ತು ಈ ತಂಡಗಳಿಂದ ಜಗತ್ ವಿಖ್ಯಾತಿ ಪಡೆದಂತಹವು, ಇವುಗಳಲ್ಲಿ ಗಿಸೆಲ್ ಮತ್ತು ಸ್ವಾನ್‌ಲೇಕ್ ಮುಂತಾದವು ಪಾಶ್ಚಾತ್ಯ ರಾಷ್ಟ್ರಗಳ ನೃತ್ಯ ಕ್ಷೇತ್ರದಲ್ಲಿ ಮನೆಮಾತಾಗಿವೆ.

ಗಿಸೆಲ್ ಪಾಶ್ಚಾತ್ಯ ಬ್ಯಾಲೆ ನೃತ್ಯ ನಾಟಕಗಳಲ್ಲಿ ಬಹು ಹಳೆಯದು, ಮುಕುಟಪ್ರಾಯವಾದುದು ಎನ್ನಲೂಬಹುದು. ಇದು ರಚಿತವಾಗಿ ರಂಗಸ್ಥಳದ ಮೇಲೆ ಬಂದುದು ೧೮೪೧ರಲ್ಲಿ. ಅಂದಿನಿಂದ ಇಂದಿನವರೆಗೆ ಅದರ ಜನಪ್ರಿಯತೆ ಎಳ್ಳಷ್ಟೂ ಕುಗ್ಗಿಲ್ಲ, ಅದರ ಮುಖ್ಯ ಪಾತ್ರದಲ್ಲಿ ಕಾಣಿಸಿಕೊಳ್ಳಲು ನರ್ತಕಿ ಎನಿಸಿದವರಿಗೆಲ್ಲಾ ಹಂಬಲ.

ಎರಡು ಅಂಕಗಳಿರುವ ಈ ನೃತ್ಯ, ಇದರ ಕಥಾವಸ್ತುವನ್ನು ಬರೆದವನು ಗಯಟೆ. ಪ್ರಸಿದ್ಧ ಜರ್ಮನ್ ಸಾಹಿತಿ ಹೆನ್ರಿ ಹೈನ್ ಬರೆದ ಡೆಲ್ ಆಲಾಮೇನ್ ಎಂಬ ಕವಿತೆಗಳ ಗುಚ್ಛದ ಒಂದು ಭಾಗವು ಗಯೆಟೆಯನ್ನು ಆಕರ್ಷಿಸಿತು. ಹೆನ್ರಿ ಹೈನ್ ತನ್ನ ಕವಿತೆ ಮತ್ತು ಭಾವಗೀತೆಗಳ ಕಥಾವಸ್ತುವಾಗಿ ಜರ್ಮನಿಯಲ್ಲಿ ಅನೂಚಾನವಾಗಿ ಪ್ರಚಲಿತವಿದ್ದ ಅನೇಕ ಜಾನಪದ ಕಥೆಗಳಿಂದ ಆರಿಸಿಕೊಂಡಿದ್ದಾನೆ, ಇಂತಹದೊಂದು ಕತೆ ಅಥವಾ ನಂಬಿಕೆ ಕನ್ಯೆಯರಿಗೆ ಸಂಬಂಧಪಟ್ಟುದು.

ಹೆಣ್ಣುಮಕ್ಕಳಿಗೆ, ಕನ್ಯೆಯರಿಗೆ ಮದುವೆ ನಿಶ್ಚಿತವಾಗುವುದು ಜೀವನದ ಒಂದು ಮಾಮೂಲು ಘಟನೆ, ಹೀಗೆ ಮದುವೆ ನಿಶ್ಚಿತವಾದ ಮೇಲೆ ಆ ಕನ್ಯೆ ಮದುವೆಯಾಗುವ ಮುನ್ನವೇ ತೀರಿಕೊಂಡರೆ ಒಂದು ರೀತಿಯ ಗಾಳಿಯಾಗುತ್ತಾಳೆ. ನಮ್ಮಲ್ಲಿ ಮೋಹಿನಿಯರಿದ್ದ ಹಾಗೆ ಎನ್ನೋಣ. ಈ ಜರ್ಮನ್ ಜಾನಪದ ನಂಬಿಕೆಯಂತೆ, ಸತ್ತು ಹೋದ ಕನ್ಯೆ ಗಾಳಿಯ ರೂಪದಲ್ಲಿ ಹುಣ್ಣಿಮೆಯ ದಿನ ಧರೆಗಿಳಿದು ಬರುತ್ತಾಳೆ. ಆ ಮಂಜು ಬೆಳಕಿನಲ್ಲಿ ನರ್ತಿಸುತ್ತಾ ಎಲ್ಲರನ್ನೂ ಆಕರ್ಷಿಸುತ್ತಾಳೆ.

ಈ ಕತೆಯನ್ನು ಆಧಾರವಾಗಿಟ್ಟುಕೊಂಡು ಗಯಟೆ ಮತ್ತು ಸೆಂಟ್‌ಜಾರ್ಜ್ ಇಬ್ಬರೂ ಕೂಡಿ ಒಂದು ನಾಟಕವನ್ನು ರಚಿಸಿದರು. ಇದರ ಸಂಗೀತ ಸಂಯೋಜನೆ ಜರ್ಗ್‌ಮುಲ್ಲರ್. ನೃತ್ಯ ಸಂಯೋಜನೆಕಾರರಲ್ಲಿ ಪೆರೋ. ಮೊದಲನೆಯ ಅಂಕದಲ್ಲಿಯೇ ರುದ್ರ ಸನ್ನಿವೇಶ ಗಿಸೆಲ್ ಎಂಬ ಮುಗ್ಧ ಹಳ್ಳಿಯ ಹೆಣ್ಣು. ಆಲ್‌ಬರ್ಟ್ ಎಂಬುವನೊಂದಿಗೆ ಅವಳ ವಿವಾಹ ನಿಶ್ಚಯವಾಗಿರುತ್ತದೆ. ಆದರೆ ಅವನು ಮೋಸ ಮಾಡುತ್ತಾನೆ. ಇದರಿಂದ ಹತಾಶಳಾದ ಗಿಸೆಲ್ ಒಂದು ಕತ್ತಿಯಿಂದ ಇರಿದುಕೊಂಡು ಆತ್ಮ ಹತ್ಯೆ ಮಾಡಿಕೊಳ್ಳುತ್ತಾಳೆ.

ಎರಡನೆಯ ಅಂಕದಲ್ಲಿ ಗಿಸೆಲ್‌ಳ ಗಾಳಿ (ಪ್ರೇತ) ರಾತ್ರಿಯಲ್ಲಿ ಸಮಾಧಿಯಿಂದ ಎದ್ದು ಈಚೆಗೆ ಬರುತ್ತದೆ. ಇತರ ವಿಲಿಸ್ ಮೋಹಿನಿಯರೊಂದಿಗೆ ಮತ್ತು ತನ್ನ ಪ್ರಣಯಿ ಆಗಿದ್ದ ವಿಲಿಸ್‌ನೊಂದಿಗೆ ರಾತ್ರಿಯೆಲ್ಲಾ ನರ್ತಿಸುತ್ತದೆ. ಮೂಡು ಬೆಳಗಾಗುತ್ತಾ ಪುನಃ ಸಮಾಧಿಗೆ ಬಂದು ಸೇರಿಕೊಳ್ಳುತ್ತದೆ. ಕಥಾಸಂದರ್ಭವೇನೋ ಸರಳ. ಆದರೆ ಪಾತ್ರಧಾರಿಗಳಿಗೆ ಅದರಲ್ಲಿಯೂ ಗಿಸೆಲ್ ಪಾತ್ರಧಾರಿಯ ಜಾಣ್ಮೆಗೆ ಒಂದು ಸವಾಲ್ ಹಾಕಿದಂತಿದೆ. ಇದಕ್ಕೆ ಉತ್ತಮ ಮಟ್ಟದ ಅಭಿನಯ ಸಾಮರ್ಥ್ಯ ಬೇಕು ಮತ್ತು ತಂತ್ರಜ್ಞಾನ, ಸೂಕ್ಷ್ಮ ಸಂವೇದನಾಶಕ್ತಿಯೂ ಅವಶ್ಯಕ. ಅದರ ಆಕರ್ಷಣೆಗೆ ಸಂಗೀತ ಮತ್ತು ರಂಗ ಸಜ್ಜಿಕೆ ಇವೆಲ್ಲಾ ಪೂರಕವಾಗಿವೆ ನಿಜ. ಆದರೆ ಅದರ ಆಕರ್ಷಣೆ ಅವಲಂಬಿಸಿರುವುದು ಪಾತ್ರಧಾರಿಯ

ಪ್ರತಿಭೆಯನ್ನು. ಈ ಪಾತ್ರವಹಿಸುವ ನರ್ತಕಿಗೆ ನೃತ್ಯ ಕಲೆಯ ತಾಂತ್ರಿಕ ವಿಧಾನದಲ್ಲಿ ಬಹು ಪ್ರೌಢಿಮೆ ಬೇಕು. ಅಲ್ಲದೆ ನಾನಾ ಮನೋಭಾವಗಳನ್ನು ಗ್ರಹಿಸಿ, ಸಂದರ್ಭಾನುಸಾರ ತಕ್ಷಣ ಅಭಿವ್ಯಕ್ತ ಪಡಿಸುವ ಅಸಾಧಾರಣ ಸಾಮರ್ಥ್ಯ ಬೇಕು. ಈ ಪಾತ್ರದಲ್ಲಿ ವಿಧ ವಿಧ ಭಾವ ತರಂಗಗಳು ಅಡಗಿವೆ. ಪಾತ್ರದಲ್ಲಿ ಮೊದಲು ಯಾವ ಆತಂಕ ಅಥವಾ ಚಿಂತೆಯಿಲ್ಲದ ಮುಗ್ಧ ಹಳ್ಳಿಯ ತರುಣಿ ಹರ್ಷದಿಂದ ನಲಿವ, ಕುಣಿವ, ಪ್ರಣಯ ಪೀಡಿತಳಾದ ಮುಗ್ಧ ಹಳ್ಳಿಯ ತರುಣಿಯಂತೆ ರಂಗಸ್ಥಳದ ಮೇಲೆ ಬರುವಳು.

ಮುಂದೆ ಈ ಮುಗ್ಧೆ ಪ್ರಣಯದಲ್ಲಿ ದ್ರೋಹಕ್ಕೆ ಗುರಿಯಾಗಿ ಹುಚ್ಚು ಹಿಡಿದು ಆತ್ಮಹತ್ಯೆ ಮಾಡಿಕೊಂಡು ಸಾಯುವ ಸನ್ನಿವೇಶ. ಮುಂದಿನ ಅಂಕದಲ್ಲಿ ಪ್ರೇತವಾಗಿ ಕಾಣಿಸಿಕೊಂಡು, ಜೀವಂತವಾಗಿದ್ದ ಮುಗ್ಧ ತರುಣಿಗೂ ಅವಳ ಗಾಳಿಗೂ ಇರುವ ವ್ಯತ್ಯಾಸ ಸ್ಪಷ್ಟವಾಗಿರುವಂತೆ ಅಭಿನಯಿಸುವಳು. ಈ ಸಂದರ್ಭಗಳ ನಿರ್ವಹಣೆಯಲ್ಲಿ ಅನೇಕ ತೊಡಕುಗಳಿವೆ. ನಿದರ್ಶನವಾಗಿ ಹುಚ್ಚು ಹಿಡಿದ ಸನ್ನಿವೇಶ. ಇದರ ಅಭಿನಯ ಸಹಜ ರೀತಿಯಲ್ಲಿ ಇರಕೂಡದು. ಸಾಂಪ್ರದಾಯಿಕ ಬ್ಯಾಲೆ ರೀತಿ ನೀತಿಗೆ ಹೊಂದಿಕೊಂಡಿರಬೇಕು, ಅದರ ಕಟ್ಟುಪಾಡುಗಳ ಚೌಕಟ್ಟಿನೊಳಗೆ ನಿರೂಪಿತವಾಗಬೇಕು, ಇಂತಹ ಪಾತ್ರವನ್ನು ನಿರ್ವಹಿಸಲು ಪಾತ್ರಧಾರಿ ಶ್ರೇಷ್ಠ ನರ್ತಕಿಯಾಗಿರಬೇಕಲ್ಲದೆ ಉತ್ತಮ ಕಲಾವಿದೆಯೂ ಆಗಿರಬೇಕು.

ಅದರಿಂದಲೇ ಗಿಸೆಲ್ ಪಾತ್ರಕ್ಕೆ ಬ್ಯಾಲೆಯಲ್ಲಿ ಅಷ್ಟು ಪ್ರಾಮುಖ್ಯತೆ. ಅದನ್ನು ಅಭಿನಯಿಸಲು ನರ್ತಕಿಯರಿಗೆ ಆಸೆ. ಆದರೆ ಎಲ್ಲರೂ ಯಶಸ್ವಿಯಾಗಿಲ್ಲ. ಇದು ಒಬ್ಬ ನರ್ತಕಿಯ ಸಾಮರ್ಥ್ಯವನ್ನು, ಕಲಾಪ್ರೌಢಿಮೆಯನ್ನು ಅಳೆಯುವ ಅಳತೆ ಕೋಲಿನಂತೆ ಪರಿಣಮಿಸಿದೆ. ೧೮೪೧ರಲ್ಲಿ ಈ ಗಿಸೆಲ್ ನೃತ್ಯನಾಟಕವು ಪ್ಯಾರಿಸ್ಸಿನಲ್ಲಿ ಪ್ರದರ್ಶಿತವಾದಾಗಿನಿಂದ ಇದುವರೆಗೆ ಮುಖ್ಯಪಾತ್ರದಲ್ಲಿ ಕೆಲವು ನರ್ತಕಿಯರು ಬಹು ಯಶಸ್ವಿಯಾಗಿದ್ದಾರೆ.

| | |
|---|---|
| ಕಾರ್ಲೋಟ್‌ಗ್ರಿಸ್ (೧೮೪೨) | ಆಂದ್ರೆಯಾನೋವ (೧೮೪೨) |
| ಮೇರಿ ಆನ್‌ಲೀ (೧೮೪೬) | ಲೂಸೀಲ್ ಗ್ರಾಹನ್ (೧೮೪೯) |
| ಬೋಗ್ ಡಾನೋವ (೧೮೫೬) | ಅಮಾಲಿಯಾ ಫೆರಾರಿಸ್ (೧೮೫೯) |
| ಕಾರೊಲೀನ್ ರೊಸಾಟಿ (೧೮೬೨) | ಜಿನಾಮೆರಾಂಟೆ (೧೮೬೩) |
| ಓಲ್ಗಾ ಪ್ರಿಂಯೊಬ್ರಜೆನ್‌ಸ್ಕಾ (೧೮೯೯) | ಕಾರ್ಲೋಟಾಜಾಂಬೆಲ್ಲಿ (೧೯೦೧) |
| ಅನಾಪಾವ್ಲೋವಾ (೧೯೦೩) | ತಮಾರಾ ಕಾರ್ಸ್ಯಾವಿನಾ (೧೯೧೦) |
| ಗಾಲಿನಾ ಉಲಾನೋವ (೧೯೩೨) | ಆಲೀಷಿಯಾ ಮಾರ್ಕೋವಾ (೧೯೩೪) |
| ಮಾರ್ಗಾಟ್ ಫಾಂಟೀನ್ (೧೯೩೭) | ಟಮಾರ ಟೌಮನೋವ (೧೯೩೯) |
| ಇವೆಟ್ ಷಾವೀರ್ (೧೯೪೪) | ಸ್ಯಾಲಿಗಿಲ್‌ಮೋರ್ (೧೯೪೫) |
| ಬೋರಿಲ್ ಗೋಲ್ಡ್‌ವಿನ್ (೧೯೫೩) | ಸ್ವೆಟ್ಲಾನಾ ಬೇರಿಯೋಸೋವ (೧೯೫೬) |

ಹೀಗೆ ಪ್ರತಿಭಾವಂತ ನರ್ತಕಿಯರು ಗಿಸೆಲ್ ಪಾತ್ರದಲ್ಲಿ ಆಯಾ ವರುಷ ಜಗತ್‌ಪ್ರಸಿದ್ಧರಾದರು.

ಆದರೆ ಇಷ್ಟು ನರ್ತಕಿಯರ ಮಧ್ಯೆಯೂ, ಗಿಸೆಲ್ ಪಾತ್ರದ ಶ್ರೇಷ್ಠ ನಿರ್ವಹಣೆಯ ಸಂದರ್ಭದಲ್ಲಿ ಪದೇ ಪದೇ ಸ್ಮರಿಸಲಾದ ನರ್ತಕಿ ಎಂದರೆ ಅನಾಪಾವ್ಲೋವ. ಈ ಪಾತ್ರಕ್ಕೆ ಆಕೆಯು ಮಾಡಿಸಿಟ್ಟಂತೆ ಎಂಬ ಭಾವನೆ. ಗಿಸೆಲ್ ಪಾತ್ರದ ಅರ್ಥ, ಭಾವ ಮತ್ತು ಸೌಂದರ್ಯಗಳನ್ನು ಪೂರಾ ಗ್ರಹಿಸಿ ಅನುಭವಿಸಿ ಆ ದುರ್ದೈವಿ ತರುಣಿಯೇ ವೇದಿಕೆಯ ಮೇಲೆ ಬಂದ ರೀತಿಯ ಭ್ರಮೆ ಹುಟ್ಟಿಸುತ್ತಿದ್ದ ಅಸಾಧಾರಣ ಪ್ರತಿಭೆ ಪಾವ್ಲೋಮಾ ಅವರದು ಎಂದು ಹೇಳಲಾಗಿದೆ. ಇದಕ್ಕೆ ಉಚಿತವಾಗಿ ತನ್ನ ವಸ್ತ್ರವಸನಗಳನ್ನೂ ರೂಪಿಸಿಕೊಳ್ಳುತ್ತಿದ್ದಳಂತೆ. ನಿದರ್ಶನವಾಗಿ ಸಮಾಧಿಯಿಂದ ಎದ್ದ ಗಿಸೆಲ್ ಪ್ರೇತವು ನರ್ತಿಸುವಾಗ ಸಾಂಪ್ರದಾಯಿಕವಾದ ಬಿಳಿಯ ಲಂಗವನ್ನೇ ಧರಿಸುತ್ತಿದ್ದುದು ಅಂದಿನವರೆಗೆ ವಾಡಿಕೆ. ಆದರೆ ಪಾವ್ಲೋವ ಅದನ್ನು ಬದಲಾಯಿಸಿ ಆ ಸಂದರ್ಭಕ್ಕೆ ಮಲಿನವಾದ ವಸ್ತ್ರಗಳನ್ನು ಧರಿಸಿ, ಸ್ಮಶಾನ ವಾತಾವರಣವು ಮೂಡಿಬರುವಂತೆ ಮಾಡುತ್ತಿದ್ದಳೆಂದು ಹೇಳಲಾಗಿದೆ.

ಗಿಸೆಲ್‌ನ ಹಾಗೆಯೇ ಪ್ರಸಿದ್ಧವಾದ ಇನ್ನೊಂದು ಬ್ಯಾಲೆ ಲೆಸಿಲ್‌ಫೈಡ್ಸ್ ಇದು ಇನ್ನೊಂದು ರೀತಿಯದು. ಇಲ್ಲಿ ಕಥಾ ಸನ್ನಿವೇಶ ಸ್ವಲ್ಪ. ಪಾತ್ರಧಾರಿಗಳು ಸಂಗೀತದ ಭಾವವನ್ನು ಅಭಿವ್ಯಕ್ತಪಡಿಸಬೇಕು. ಖ್ಯಾತ ಸಂಗೀತಗಾರ ಷೋಪಾನನ ಕೃತಿಯೊಂದರ ಆಧಾರದ ಮೇಲೆ ರೂಪಿತವಾದ ಬ್ಯಾಲೆ ಲೆಸಿಲ್ ಫೈಡ್ಸ್ ಒಂದೇ ಅಂಕದ ನೃತ್ಯ ನಾಟಕವಿದು. ಮೂಲತಃ ಷೋಪಾನಿಯಾನ ಎಂದು ಹೆಸರಿತ್ತು. ಇದನ್ನು ಪ್ರಸಿದ್ಧ ನೃತ್ಯ ವ್ಯವಸ್ಥಾಪಕ ಡ್ಯಾಗಿ ಲೀಫ್ ಲೆಸಿಲ್ ಫೈಡ್ಸ್ ಎಂದು ಬದಲಾಯಿಸಿ ಸೇಂಟ್ ಪೀಟರ್ಸ್ ಬರ್ಗ್‌ನಲ್ಲಿ ೧೯೦೯ರಲ್ಲಿ ಪ್ರದರ್ಶನ ಮಾಡಿದ. ಪಾತ್ರವರ್ಗದಲ್ಲಿ ಅನಾಪಾವ್ಲೋವ ಟಮಾರಾಕಾರ್ಸ್ಯಾವಿನಾ, ವಾಪ್ಲಾಫ್ ನಿಜಿಸ್ಕಿ ಮುಂತಾದವರೆಲ್ಲಾ ಇದ್ದರು. ಪರಿಷ್ಕೃತವಾದ ಈ ನೃತ್ಯ ರೂಪಕದ ಸಂಗೀತವೂ ಅಖಂಡವಾದುದಲ್ಲ. ಷೋಪಾನನ ನಾಲ್ಕು ಕೃತಿಗಳನ್ನು ಹೆಣೆದು ಮಾಡಿದುದು.

ರೂಪಕದ ಪ್ರಾರಂಭ ಪ್ರಿಯಾಡ್ ಅಥವಾ ಪ್ರಾಸ್ತಾವಿಕ ರಚನೆಯಿಂದ. ಪರದೆ ಏಳುತ್ತಲೇ ರಾತ್ರಿಗೆ ಉಚಿತ ಸಂಗೀತ ಪ್ರಾರಂಭ. ವೃಂದದ ಎಲ್ಲಾ ನರ್ತಕಿಯರೂ ಈ ಸಂಗೀತಕ್ಕನುಸಾರ ನರ್ತಿಸುವರು. ಆನಂತರ ಪ್ರಧಾನ ನರ್ತಕಿಯ ನರ್ತನ. ಮುಂದೆ ಮಜೂರ್ಕನೃತ್ಯ ತ್ರಿಶ್ರಗತಿಯದು ಇದನ್ನೂ ಪ್ರಧಾನ ನರ್ತಕಿ ನಿರ್ವಹಿಸುವಳು. ಅನಂತರ ಯುಗಳ ನರ್ತನ ಪಾಸ್‌ಡೆಡೂ ನರ್ತಕ-ನರ್ತಕಿ ನಿರ್ವಹಿಸುವರು. ಉಪಸಂಹಾರದ ಗ್ರಾಂಡ್‌ವಾಲ್ಸ್ ನೃತ್ಯ. ಇದರಲ್ಲಿ ವೃಂದದ ಎಲ್ಲಾ ನರ್ತಕ ನರ್ತಕಿಯರೂ ಭಾಗವಹಿಸುವರು.

ಏಕಪಾತ್ರ ನರ್ತನ, ಯುಗಳ ನರ್ತನ ಮತ್ತು ವೃಂದ ನರ್ತನ ಹೀಗೆ ಮೂರು ಹಂತಗಳಲ್ಲಿ ನೃತ್ಯ ಕಲೆಯ ವೈಖರಿ ವ್ಯಕ್ತವಾಗುವ ಈ ಲೆಸಿಲ್ ಫೈಡ್ಸ್ ಬ್ಯಾಲೆ ದೃಶ್ಯ ಭಾಗದಲ್ಲಿ ಬಹುಜನರಿರುವಂತಹುದು. ಈ ಮೂರೂ ಹಂತಗಳೂ ಒಟ್ಟು ಸೇರಿ ಒಂದು ಅಖಂಡವೆನಿಸುವ ದೃಶ್ಯಾನುಭವ ಕೊಡುವವು. ಇಲ್ಲಿ ಕತೆ ಅಂತಹುದೇನಿಲ್ಲ. ಭಾವಪ್ರಧಾನವಾದುದು. ಅದನ್ನು ಮೂಡಿಸುವುದು - ಸಂಗೀತ. ಈ ಸಂಗೀತಕ್ಕನುಸಾರ ಚಲನವಲನದಿಂದ ರೂಪಕದ ಅರ್ಥ-ಭಾವಗಳನ್ನು ಮೂಡಿಸಬೇಕು. ಇದರ ನರ್ತಕ ನರ್ತಕಿಯರ, ಕೋರ್‌ಡಿಬ್ಯಾಲೆ ಅಂದರೆ ನೃತ್ಯ ವೃಂದದ ಜಾಣ್ಮೆಯನ್ನು ಪರೀಕ್ಷಿಸುವಂತಹುದು.

ಬ್ಯಾಲೆ ನೃತ್ಯ ನಾಟಕಗಳಲ್ಲಿ ಅದರಲ್ಲಿಯೂ ರಷ್ಯಾ ದೇಶದ ಬ್ಯಾಲೆಗಳಲ್ಲಿ ಬಹು ಪ್ರಸಿದ್ಧವಾದುದು - ಸ್ವಾನ್ ಲೇಕ್ ಅಥವಾ ಹಂಸ ಸರೋವರ. ಪ್ರಸಿದ್ಧ ಸಂಗೀತ ರಚನಾಕಾರ ಚೈಕೋವ್‌ಸ್ಕಿಯ ಸಂಗೀತ ಕೃತಿಯೊಂದರ ದೃಶ್ಯರೂಪ, ಸ್ವಾನ್ ಲೇಕ್ ಎನ್ನಬಹುದು. ಇದರ ಮೊದಲ ಪ್ರದರ್ಶನವಾದುದು ೧೮೭೭ರಲ್ಲಿ, ಅಲ್ಲಿಂದ ಮುಂದೆ ಈ ರೂಪಕವನ್ನು ಹಲವಾರು ನೃತ್ಯ ಸಂಯೋಜಕರು ಆಗಾಗ ಪರಿಷ್ಕರಿಸಿ ಇಂದಿನ ರೂಪವನ್ನು ತಳೆದಿದೆ. ಇದರಲ್ಲಿ ಕಥಾವಸ್ತು ಮಿತವಾದುದು, ಜಾನಪದ ಕತೆ ಒಂದರ ಮೇಲೆ ಆಧಾರಿತವಾದುದು.

ಪೂರ್ವ ಏಷ್ಯಾ ರಾಜ್ಯದ ರಾಜಕುಮಾರ ಸೀಗ್ ಫ್ರೀಡ್ ಒಂದು ದಿನ ಬೇಟೆಯಾಡಲು ಹೋಗಿದ್ದಾಗ ಒಂದು ಸರೋವರ ತೀರದಲ್ಲಿ ಸಾಯುತ್ತಾ ಬಿದ್ದಿದ್ದ ಹಂಸೆಯೊಂದನ್ನು ನೋಡುತ್ತಾನೆ. ಯಾವುದೋ ಬೇಟೆಗಾರನ ಬಾಣಕ್ಕೆ ಗುರಿಯಾಗಿ ಬಿದ್ದು ಸಾಯುವ ಸ್ಥಿತಿಯಲ್ಲಿದ್ದ ಹಂಸೆಯದು. ಅದನ್ನು ನೋಡಿದ ರಾಜಕುಮಾರನಿಗೆ ಮರುಕವುಂಟಾಗುವುದರ ಜೊತೆಗೆ ಹಂಸ ಕನ್ಯೆಯೆಂಬ ಭ್ರಮೆಯುಂಟಾಗುತ್ತದೆ, ಪ್ರಣಯ ಉಕ್ಕಿ ಬುರುತ್ತದೆ. ತನ್ನ ಕನಸಿನ ಈ ಕನ್ಯೆಯನ್ನು ಅರಸುತ್ತಾ ಕಾಡು, ನದಿ, ಸರೋವರ ತೀರಗಳಲೆಲ್ಲಾ ಅಲೆಯುವನು. ಒಮ್ಮೆ ಅವನ ಅರಮನೆಯಲ್ಲಿ ಒಂದು ಉತ್ಸವ, ನೆರೆ ರಾಜ್ಯದ ಪಾಳೆಗಾರನೊಬ್ಬನು ಆಹ್ವಾನಿತನಾಗಿದ್ದಾನೆ. ಅವನಿಗೆ ಒಬ್ಬ ಮಗಳು-ಒಡೀಲಿಯಾ ಸ್ವಲ್ಪ ಧಾರ್ಷ್ಟ್ಯ ಸ್ವಭಾವದವಳು, ಸೀಗ್ ಫ್ರೀಡ್‌ನ ಬಗೆಗೆ ಒಲುಮೆ, ಅವನ ಮನವೊಲಿಸಿ ತನ್ನವನನ್ನಾಗಿ ಮಾಡಿಕೊಂಡು ಮದುವೆಯಾಗಲೇಬೇಕೆಂಬ ಛಲ, ಇದರಲ್ಲಿ ಬಹುಪಾಲು ಸಾಧಿಸುತ್ತಾಳೆ. ಆಗ ಆಕಸ್ಮಿಕ ಸನ್ನಿವೇಶ, ಉತ್ಸವದಲ್ಲಿ ನೃತ್ಯವಾಗುತ್ತಿರುವಾಗ್ಗೆ ಹಂಸೆಯಂತೆ ವೇಷ ಧರಿಸಿದ ನರ್ತಕಿಯೊಬ್ಬಳು ವೇಗವಾಗಿ ಚಲಿಸುತ್ತಿರುವಳು, ಇದನ್ನು ನೋಡಿದೊಡನೆಯೇ ರಾಜಕುಮಾರನಿಗೆ ಹಂಸೆಯ ಅಥವಾ ಅವನ ಭ್ರಮೆಯ ಹಂಸಕನ್ಯೆಯ ನೆನಪು ಉಂಟಾಗಿ ಹುಚ್ಚು ಹಿಡಿದಂತೆ ಕಾಡಿನ ಕಡೆಗೆ ಓಡಿ ಹೋಗುವನು, ಕಾಡಿನಲ್ಲೆಲ್ಲಾ ಭ್ರಮಿಸಿ ಅಲೆವನು, ಕೊನೆಗೆ ಸರೋವರದ ಕಡೆಗೆ ಬರುವನು. ಅಲ್ಲಿ ನೋಡಿದರೆ ರಾಜಕುಮಾರಿ ಒಡಿಲಿಯಾ ಮರಣ ಸಮಯದಲ್ಲಿರುವಳು. ಅವನನ್ನು ಅರಸಿ ಬಂದು ಯಾವನೋ ಬೇಟೆಗಾರನ ಬಾಣಕ್ಕೆ ಗುರಿಯಾಗಿ ಬಿದ್ದು ಸಾಯುವ ಸ್ಥಿತಿಯಲ್ಲಿದ್ದಾಳೆ. ಅವಳನ್ನು ಎತ್ತಿದಾಗ ಅವನ ಬಾಹುಗಳಲ್ಲಿ ಮಲಗಿ ಸಾಯುತ್ತಾಳೆ. ದುಃಖವನ್ನು ತಡೆಯಲಾರದೆ ರಾಜಕುಮಾರನೂ ಸಾಯುತ್ತಾನೆ.

ಈ ನೃತ್ಯ ರೂಪಕದ ಕತೆ ದಾರುಣವಾಗಿದ್ದರೂ ಅಂತಹ ವಿಶೇಷವೇನಿಲ್ಲ. ಆದರೆ ರೂಪಕದ ಆಕರ್ಷಣೆ ಇರುವುದು– ಅಭಿನಯದಿಂದ. ಚೈಕೋವ್‌ಸ್ಕಿಯ ಸಂಗೀತದ ಭಾವನೆಗಳನ್ನು ದೃಶ್ಯ ರೂಪದಲ್ಲಿ ಅಭಿವ್ಯಕ್ತ ಪಡಿಸಬೇಕಾಗಿರುವುದರಿಂದ. ಅದಕ್ಕೂ ಹೆಚ್ಚಿನ ಆಕರ್ಷಣೆ–ನೃತ್ಯದಲ್ಲಿ. ಬಿಡಿ ಬಿಡಿಯಾಗಿ, ಒಟ್ಟಾಗಿ ಅನೇಕ ನೃತ್ಯ ಸನ್ನಿವೇಶಗಳಿವೆ. ಅದರಲ್ಲಿಯೂ ಸ್ವಚ್ಛ ಬಿಳುಪಾದ ಅರೆಲಂಗಗಳನ್ನು ಧರಿಸಿದ ಹಂಸಪಾತ್ರಧಾರಿಗಳಾದ ೩೦–೩೫ ನರ್ತಕಿಯರು ರಂಗಸ್ಥಳದ ಮೇಲೆ ಬಿಡಿ ಬಿಡಿಯಾಗಿ ಗುಚ್ಛವಾಗಿ, ಒಟ್ಟಾಗಿ ನರ್ತಿಸುವಾಗ, ವೇಗವಾಗಿ ಚಲಿಸುವಾಗ ನೋಡುವವರಿಗೆ ಭ್ರಮೆಯಾಗುವುದು ಸಹಜ. ಮುಖ್ಯ ಪಾತ್ರದ ನರ್ತಕಿಗೂ ಇದು ಒಂದು ಸವಾಲಿನಂತಿದೆ. ದ್ವಂದ್ವಭಾವ ನಿರೂಪಿಸಬೇಕು. ರಷ್ಯಾದ ಗಾಲಿನ ಉಲಾನೋವ, ಮಾಯಾ ಪ್ಲಿಸೆಟ್‌ಸ್ಕಯಾ, ಇಂಗ್ಲೆಂಡಿನ ಮಾರ್ಗ್‌ಾಟ್ ಪಾಂಟೇನ್, ಅಡಿಕ್ಸಿಯಾ ಪೂರ್ಕೇವಾ, ಅಮೆರಿಕದ ಮೇರಿಯಾ ಟಲ್‌ಚೀಫ್ ಮುಂತಾದವರು ಈ ಪಾತ್ರಗಳಲ್ಲಿ ಪ್ರಸಿದ್ಧರು.

ಹಂಸ ಸರೋವರದಂತೆಯೇ ರಷ್ಯಾ ದೇಶದ ಬ್ಯಾಲೆ ನೃತ್ಯ ರೂಪಕಗಳಲ್ಲಿ ಪ್ರಸಿದ್ಧವಾದುದು. ಇನ್ನೊಂದು ಡಾನ್ ಕ್ವಿಕ್ಸಾಟ್. ೫ ಅಂಕಗಳ ಈ ನೃತ್ಯ ಸಂಯೋಜನೆಗಳಲ್ಲಿ ಅನೇಕ ಆಕರ್ಷಣೀಯ ಅಂಶಗಳಿವೆ, ಎಂದು ಹೇಳಲಾಗಿದೆ. ಇದರಲ್ಲಿ ಸಣ್ಣ ಸಣ್ಣ ತಿರುವುಗಳು, ಬಹು ಧೈರ್ಯ ಮತ್ತು ದೃಢವಾದ ಉದ್ಧತಿ ಅಥವಾ ನೆಗೆತಗಳು ಬಹು ಸ್ಫುರಿಸುವಂತಹವು, ಇದರಲ್ಲಿ ಬರುವ ಪ್ರಧಾನ ನಾಯಕಿ ಕಿತ್ರಿಯಾ ಪಾತ್ರವು ಬಹು ಕಷ್ಟಕರ ಮತ್ತು ನರ್ತಕಿಯ ಸಾಮರ್ಥ್ಯವನ್ನು ಪರೀಕ್ಷಿಸುವಂತಹುದೆನ್ನಲಾಗಿದೆ. ಈ ಪಾತ್ರದಲ್ಲಿ ಯಶಸ್ಸು ಗಳಿಸಿದ ಕೆಲವೇ ನರ್ತಕಿಯರಲ್ಲಿ ಓಲ್ಗಾ ಲೆಪಿಕ್ಷಿನಸ್ಕಾಯ, ಮಾರ್ಗಟ್ ಫಾಂಟಿನ್ ಮುಂತಾದವರು ನೆನಪಿಗೆ ಬರುತ್ತಾರೆ.

ಹಾಗೆಯೇ ರಷ್ಯಾ ದೇಶದ ಪ್ರಸಿದ್ಧವಾದ ಮತ್ತು ಜನಪ್ರಿಯವಾದ ಬ್ಯಾಲೆ ನೃತ್ಯ ರೂಪಕಗಳಿವೆ. ಲೆಕಾರ್‌ಸೇರ್, ಸ್ಲೀಪಿಂಗ್ ಬ್ಯೂಟಿ (ನಿದ್ರಾ ಸುಂದರಿ), ಕ್ರಿಸ್‌ಮಸ್ ಸೇಲ್ಸ್, ರೆಡ್ ಪಾಪಿ, ರೋಮಿಯೋ ಜೂಲಿಯಟ್. ಫ್ಲೇಮ್ ಆಫ್ ಪ್ಯಾರಿಸ್, ಫೌಂಟನ್ ಆಫ್ ಬಾಖಿಸರೈ, ಲೈಲಾ ಮಜ್ನು, ಸ್ಪಾರ್ಟಕಸ್, ಸ್ಟೋನ್‌ಫ್ಲವರ್, ಫೈರ್‌ಬರ್ಡ್ ಮುಂತಾದುವುಗಳನ್ನು ಹೇಳಬಹುದು. ಈ ಎಲ್ಲಾ ನೃತ್ಯ ರೂಪಕಗಳಲ್ಲಿಯ ನರ್ತಕ ನರ್ತಕಿಯರ ಖಚಿತ ನಿಲುವುಗಳು, ಲಲಿತವಾಗಿ ಹರಿವ ಚಲನಗಳು, ಸ್ಥೈರ್ಯದಿಂದ ಕೂಡಿ ಆಚ್ಚರಿಯುಂಟುಮಾಡುವ ನೆನಪುಗಳು, ವೃಂದ ನೃತ್ಯಗಳಲ್ಲಿನ ಶಿಸ್ತು, ಅವುಗಳ ಒಪ್ಪಂದ ಪಾತ್ರಗಳಲ್ಲಿ ಬರುವ ನಾಟಕೀಯ ಅಂಶಗಳು, ರಂಗ ಸಜ್ಜಿಕೆ ಒಳ್ಳೆಯ ಕಲ್ಪನೆಯಿಂದ ಕೂಡಿ ಒಟ್ಟಿನಲ್ಲಿ ರೂಪಕವು ದೃಶ್ಯ ಮತ್ತು ಶ್ರವ್ಯ ಎರಡೂ ಭಾಗಗಳಿಂದಲೂ ಮನೋಹರವಾಗಿರುವಂತೆ ಮಾಡುವುವು, ಇದು ಈ ನರ್ತಕ ನರ್ತಕಿಯರಿಗೆ ಕೊಡುವ ಕ್ರಮಬದ್ಧವಾದ, ಕಠಿಣವಾದ ಮತ್ತು ಬಹು ಶಿಸ್ತಿನಿಂದ ಕೂಡಿದ ಶಿಕ್ಷಣದ ಫಲ, ಅದು ಪರಿಪೂರ್ಣತೆಯೆಡೆಗೆ ಒಯ್ಯುವುದು.

ಈ ನೃತ್ಯ ನಾಟಕಗಳ ಹಿನ್ನೆಲೆಯಲಿ ಆರ್.ಎಸ್. ನಾಯುಡು ಅವರು ರಚಿಸಿರುವ ನೃತ್ಯ ರೇಖಾ ಚಿತ್ರಗಳನ್ನು ಪರಿಶೀಲಿಸುವ. ಈಗ ಮೊದಲನೆಯದಾಗಿ ಬಲಗಾಲು ಉಂಗುಷ್ಟವನ್ನೂರಿ ಇನ್ನೊಂದು ಕಾಲನ್ನು ೯೦ ಡಿಗ್ರಿಗಳಷ್ಟು ಚಾಚಿ ಎರಡೂ ಕೈಗಳನ್ನು ರೆಕ್ಕೆಗಳಂತೆ ಮಾಡಿ ಹಾರಲು ಸಿದ್ಧವಾಗಿರುವ ನರ್ತಕಿಯಂತೆ ಕಾಣುವ ರೇಖಾಚಿತ್ರ. ಇದು ಬ್ಯಾಲೆಯ ನರ್ತನದ ಎಲ್ಲಾ ಪಾತ್ರಗಳಲ್ಲಿಯೂ ಕಂಡುಬರುವಂತಹುದು. ಸ್ಥೂಲವಾಗಿ ನಮ್ಮ ಅಡವುಗಳಂತೆ ಎಂದು ಹೇಳಬಹುದು. ಚಲನೆಯ ಒಂದು ಸಂದರ್ಭವನ್ನು ರೇಖೆಯಲ್ಲಿ ಹಿಡಿದಿಟ್ಟಂತೆ ಅನುಭವವಾಗುವ ಈ ಚಿತ್ರ ಅರಾಬೆಸ್ಕ್, ಆಟಿಟ್ಯೂಡ್ ಮುಂತಾದುವನ್ನು ಹೋಲುವುದು. ಇವೆರಡನ್ನೂ ಆಗಲೇ ವಿವರಿಸಿದೆ.

ಎರಡನೆಯ ಚಿತ್ರ ಹಿಂದಿನ ಭಂಗಿಯಂತಹುದೇ ಅಥವಾ ಅವರದೇ ಪ್ರಭೇದದಂತಿದೆ. ಇದನ್ನು ಪಾಸ್ ಡಿಪೋಸನ್ ಅಥವಾ ಎಸ್‌ಕಾರ್ಟ್ ಎಂದು ಕರೆಯುತ್ತಾರೆ. ಇವುಗಳನ್ನು ಆಗಲೇ ವಿವರಿಸಲಾಗಿದೆ.

ಮೂರನೆಯ ಚಿತ್ರ, ಈ ನಿಲುವನ್ನು ಪಾಸ್‌ಡೆಡೋ ಎಂದು ಕರೆಯುತ್ತಾರೆ. ಪಾಸ್ ಎಂದರೆ ಹೆಜ್ಜೆ ಇಡುವುದು ಎಂದರ್ಥ. ಪಾಸ್‌ಡೆಡೋ ಎಂದರೆ ಇಬ್ಬರು ಹೆಜ್ಜೆ ಇಡುವುದು ಅಥವಾ ದ್ವಂದ್ವ ನೃತ್ಯ ಎಂದು. ಬ್ಯಾಲೆ ರೂಪಕಗಳಲ್ಲಿ ಜೊತೆ ನರ್ತನಗಳ ಸನ್ನಿವೇಶಗಳು ಬಹಳ ಬರುತ್ತವೆ. ಈ ಚಿತ್ರದ ಸನ್ನಿವೇಶವು ಬಹುಶಃ ಕಾರ್ಸೇರ್ ನೃತ್ಯ ನಾಟಕದಲ್ಲಿ ಬರುವಂತಿದೆ.

ನಾಲ್ಕನೆಯ ಚಿತ್ರ ಷೋಪಾನಿಯಾನಾ ವೃತ್ತ, ನಾಟಕದಲ್ಲಿನ ಸನ್ನಿವೇಶ ಒಂದರಂತಿದೆ. ಈ ನೃತ್ಯ ನಾಟಕವು ಹೆಚ್ಚು ಪರಿಚಿತವಾಗಿರುವುದು ಲೆಸಿಲ್‌ಫೈಡ್ಸ್ ಎಂಬ ಹೆಸರಿನಿಂದ. ಈ ಬ್ಯಾಲೆಯನ್ನು ಆಗಲೇ ವಿವರಿಸಲಾಗಿದೆ.

ಐದನೆಯ ಚಿತ್ರ, ಸುಪ್ರಸಿದ್ಧ ಗಿಸಲ್ ಬ್ಯಾಲೆಯ ಒಂದು ಪಾತ್ರವೆನ್ನುವಂತಿದೆ.

ಆರನೆಯ ಚಿತ್ರ ಹಿಂದಿನ ಭಂಗಿಯ ಒಂದು ಪ್ರಭೇದ. ಬಹುಶಃ ಹಿಂದಕ್ಕೆ ತಿರುಗುವ ಒಂದು ಸಂದರ್ಭ ಎನ್ನಬಹುದು.

ಏಳನೆಯ ಚಿತ್ರ, ಇದೊಂದು ವಿಶೇಷ ಭಂಗಿ ಜೆಟೆ ಎಂದು ಹೆಸರು, ಇದರ ಅರ್ಥ–ಬೀಸು ಎಂದು, ಅಂದರೆ ನೆಗೆದು ಕಾಲನ್ನು ಮುಂದಕ್ಕೋ ಅಥವಾ ಹಿಂದಕ್ಕೋ ಬೀಸುವುದು. ಅಂದರೆ ಒಂದು ಕಾಲಿನ ಉಂಗುಷ್ಟವನ್ನು ನೆಲಕ್ಕೆ ಬಡಿದು ಕಾಲನ್ನು ಮುಂದಕ್ಕೋ, ಹಿಂದಕ್ಕೋ ನೆಟ್ಟಗೆ ಬೀಸಿ ಚಲಿಸುವುದು, ಇದರಲ್ಲಿ ಎನ್ ಆವಂತ ಅಂದರೆ ಈ ನೆಗೆತ ಹಾಗೂ ಬೀಸುಕಾಲಿನ ಚಲನೆ ಮುಂದುಗಡೆಗೆ ಎನ್ ಅರಿಯೇ ಎಂದರೆ ಅದೇ ರೀತಿ ಆದರೆ ಚಲನೆ ಹಿಂದುಗಡೆಗೆ, ಡೆಕೇಟ್ ಎಂದರೆ ಈ ಚಲನೆಗಳು ಪಕ್ಕದ ಕಡೆಗೆ, ಈ ಬಗೆಯ ನೆಗೆತಗಳಿಗೆ ಭಾರತೀಯ ನೃತ್ಯದಲ್ಲಿ ಉತ್‌ಪ್ಲುತಿ ಎನ್ನುತ್ತಾರೆ. ಈ ಬಗೆಯ ನೆಗೆತಗಳು ಅವುಗಳ ವಿವಿಧ ಚಲನೆಗಳು ಬ್ಯಾಲೆಗಳ ಒಂದು ಪ್ರಧಾನ ಆಕರ್ಷಣೆ, ಇದರಲ್ಲಿ ಒಂದು ಕಾಲಿನ ಉಂಗುಷ್ಟ ಒತ್ತಿ ಹಾರುವುದು ಅಥವಾ ಇನ್ನೊಂದು ಕಾಲಿನ ಉಂಗುಷ್ಟ ಒತ್ತಿ ಹಾರುವುದು, ಕಾಲುಗಳನ್ನು ಭೂಮಿಗೆ ಸಮಾಂತರವಾಗುವಂತೆ ಬೀಸಿ ಇನ್ನೊಂದು ಪಾದದ ಮೇಲೆ ಬಂದು ನಿಲ್ಲುವುದು, ನೆಗೆದಾಗ ಸಾವಕಾಶವಾದ ತಿರುವು ಚುರುಕಾದ ಬುಗುರಿಯ ರೀತಿಯ ತಿರುವು ಮುಂತಾದ ನಾನಾ ಚಲನೆಗಳಿಂದ ಕೂಡಿ ಆಕರ್ಷಣೀಯವಾಗಿರುತ್ತವೆ. ಚಿತ್ರದ ಭಂಗಿ ಪಾಸ್ ಡೆ ಜಾಟ್ ಎಂಬುದನ್ನು ಸೂಚಿಸುವಂತೆ ಅನುಭವವಾಗುವುದು, ಅಂದರೆ ನೆಗೆದು ಒಂದು ಕಾಲನ್ನು ಇನ್ನೊಂದರ ಮೇಲೆ ಇರಿಸುವುದು, ಇನ್ನೊಂದರ ಮೊಣಕಾಲಿನ ಸಮಕ್ಕೆ ಮಡಿಸುವುದು ಮುಂತಾದ ಚಲನೆಗಳು, ಒಟ್ಟಿನಲ್ಲಿ ಬಹು ದಿಟ್ಟ ಹಾಗೂ ಆಕರ್ಷಣೀಯ ಚಲನೆ.

ಎಂಟನೆಯ ಚಿತ್ರ ಬ್ಯಾಲೆಯ ನೃತ್ಯ ಒಂದರ ಅಂತಿಮ ಘಟ್ಟ, ಅಥವಾ ಕೊನೆಗೆ ಬರುವ ನಿಲುಗಡೆ, ನಮ್ಮ ಭರತನಾಟ್ಯದ ತೀರ್ಮಾನದಂತೆ, ನಾನಾ ವಿಧವಾಗಿ, ಹೆಜ್ಜೆ ಹಾಕಿ, ತಿರುವಿ, ತಿರುಗಿ, ನುಲಿದು ನಲಿದು ಕೊನೆಗೆ ಬಂದು ಥಟ್ಟನೆ ನಿಲ್ಲುವ ಭಂಗಿ. ಈ ಫಿನಾಲೆ ಅಥವಾ ಅಂತಿಮ ನಿಲುಗಡೆ ಇದು ಎಲ್ಲಾ ಬ್ಯಾಲೆಗಳಲ್ಲಿಯೂ ಕಂಡುಬರುವಂತಹುದು. ಬುಗುರಿಯಂತೆ ತಿರುಗುತ್ತಾ ಕೊನೆಯ ಭಾಗದ ತುದಿಯಲ್ಲಿ ಕೈಗಳನ್ನು ರೆಕ್ಕೆಗಳಂತೆ ಬಿಚ್ಚಿ ಟುಟು ಅಂದರೆ ತುಂಡು ಲಂಗವು ಚಲನೆಯ ವೇಗಕ್ಕೆ ಕೊಡೆಯಂತೆ ಹರಡಿಕೊಂಡು ಒಂದರ ಮುಂದೆ ಇನ್ನೊಂದರಂತೆ ಅಡಿ ಇಟ್ಟು ಥಟ್ಟನೆ ನಿಲ್ಲುವ ಈ ಕಡೆಯ ನಿಲುಗಡೆ ಸ್ಫುರಿಸುವಂತಹದು.

ಒಂಬತ್ತನೆಯ ಚಿತ್ರ ನರ್ತಕಿಯು ನೃತ್ಯದ ಒಂದು ಘಟ್ಟದಲ್ಲಿ ವಿಧ ವಿಧ ವಿನ್ಯಾಸ ಮಾಡುತ್ತಿರುವುದು ಈ ಸಂದರ್ಭ ಬಹುಶಃ ಗಿಸೆಲ್ ಬ್ಯಾಲೆಯಿಂದ ಆರಿಸಿರಬಹುದು.

ಹತ್ತನೆಯದನ್ನು ಬ್ಯಾಲೆ ಪರಿಭಾಷೆಯಲ್ಲಿ ಪಾಸ್‌ಡೆಡಾ ಎನ್ನುತ್ತಾರೆ. ಅಂದರೆ ಯುಗಳ ನೃತ್ಯ, ನಮ್ಮ ಜೋಡಿ ಮೇಳಗಳಿದ್ದ ಹಾಗೆ ನರ್ತಕ ನರ್ತಕಿಯರು ಜೋಡಿಯಾಗಿ ಕಥಾ ಸಂದರ್ಭವನ್ನು ನೃತ್ಯದ ಮೂಲಕ ನಿರೂಪಿಸುವುದು, ಈ ಚಿತ್ರವು ಬಹುಶಃ ಸ್ವಾನ್‌ಲೇಕ್ ಅಥವಾ ಹಂಸಸರೋವರ ಬ್ಯಾಲೆಯ ಒಂದು ಸನ್ನಿವೇಶದಿಂದ ಸ್ಫುರಿತವಾಗಿದೆ ಎನ್ನಬಹುದು. ಆ ಬ್ಯಾಲೆಯಲ್ಲಿ ಇಂತಹ ಜೋಡಿ ನೃತ್ಯಗಳ ಅನೇಕ ಸನ್ನಿವೇಶಗಳಿವೆ.

ಹನ್ನೊಂದನೆಯ ಚಿತ್ರವೂ ಇಂತಹದೇ ಜೋಡಿ ನೃತ್ಯ. ಈ ನರ್ತಕ ನರ್ತಕಿಯರ ಉಡುಪುಗಳನ್ನು ನೋಡಿದರೆ ಸ್ಪಾರ್ಟಕಸ್ ಬ್ಯಾಲೆಯ ಸನ್ನಿವೇಶವಿರಬಹುದೆನ್ನಿಸುತ್ತದೆ ಅಥವಾ ಡಾನ್‌ಕ್ವಿಕ್ಸೊಟ್ ಬ್ಯಾಲೆಯ ಒಂದು ಸನ್ನಿವೇಶವೂ ಆಗಿರಬಹುದೆನಿಸುತ್ತದೆ.

ಹನ್ನೆರಡನೆಯ ಚಿತ್ರವೂ ಅಂತಹುದೇ ಪಾಸ್‌ಡಿಡೋ ಜೋಡಿ ನೃತ್ಯ. ಬಹುಶಃ ಟರಾಸ್ ಬುಲ್ವಾ ಎಂಬ ಬ್ಯಾಲೆಗೆ ಸಂಬಂಧಪಟ್ಟಂತಿದೆ.

ಹದಿಮೂರನೆಯ ಚಿತ್ರ ರಾಬರ್ಟ್ ಹೆಲ್ಪ್‌ಮನ್ ನೃತ್ಯ ಸಂಯೋಜನೆ ಮಾಡಿದ ಬ್ಯಾಲೆ ಹಾಮ್ಲೆಟ್‌ನಿಂದ ಒಂದು ಸನ್ನಿವೇಶ. ಇದರ ಸಂಗೀತ ಸಂಯೋಜನೆ ಚೈಕೋವ್‌ಸ್ಕಿಯವರದು. ಇದೊಂದು ಪ್ರಸಿದ್ಧ ಬ್ಯಾಲೆ.

ಹದಿನಾಲ್ಕನೆಯ ಚಿತ್ರ ಕಾರ್ಯಕ್ರಮಕ್ಕೆ ಮುನ್ನ ಉಡುಗೆ ತೊಡುಗೆಗಳನ್ನು ಧರಿಸಿಕೊಳ್ಳುತ್ತಿರುವ ನರ್ತಕಿಯ ಒಂದು ಭಂಗಿ. ಒನಾತಿನ ಮೆಟ್ಟುಗಳನ್ನು ಧರಿಸಿ ದಾರಗಳನ್ನು ಕಟ್ಟುತ್ತಿದ್ದಾಳೆ.

ಆರ್.ಎಸ್.ಎನ್. ಅವರು ನೃತ್ಯದ ವಿವಿಧ ಸನ್ನಿವೇಶಗಳನ್ನು ಗ್ರಹಿಸಿದ ನೂರಾರು ರೇಖಾಚಿತ್ರಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಬ್ಯಾಲೆಯ ಪ್ರಕಾರದವುಗಳಿವೆ. ಭರತನಾಟ್ಯ ನರ್ತಕಿಯರದಿದೆ. ಜಾನಪದ ನೃತ್ಯಗಳ ದೃಶ್ಯಗಳಿವೆ. ಹೀಗೆ ಅವರಿಗೆ ಸ್ಫೂರ್ತಿ ಬಂದಾಗ ಕೈ ಸುಮ್ಮನಿರದು. ನೆನಪಿನಿಂದಲೇ ಯಾವುದಾದರೂ ಚಿತ್ರಗಳನ್ನು ನೋಡಿಯೇ ತಕ್ಷಣ ರೇಖಾಚಿತ್ರ ತಯಾರಿಸುತ್ತಿದ್ದರು. ಆ ರೇಖೆಗಳಲ್ಲಿ ಒಂದು ದೃಢತೆ ಇದೆ ಗೆಲುವು ಇದೆ, ಸತ್ಯವಿದೆ. ಅವರ ಅಸಂಖ್ಯಾತ ರೇಖಾಚಿತ್ರಗಳು ಈಗ ಒಂದು ಹಿಡಿಯಷ್ಟು ಮಾತ್ರ ಆರಿಸಿ ಸೂಕ್ತವಾದ ವಿವರಣೆಗಳೊಂದಿಗೆ ಕೊಡಲಾಗಿದೆ. ಇದಿಷ್ಟರಲ್ಲಿಯೇ ಆರ್.ಎಸ್.ಎನ್. ಅವರ ಸೂಕ್ಷ್ಮದೃಷ್ಟಿ ಮತ್ತು ರೇಖಾಸಿದ್ಧಿ ಮುಂತಾದ ಗುಣಗಳ ಪರಿಚಯವಾಗುವುದು. ನಿಷ್ಠಾವಂತ ಕಲಾವಿದ ಆರ್.ಎಸ್. ನಾಯುಡು.

*(ಜನಪದ ಅಕಾಡೆಮಿ ಪ್ರಕಟಿಸಿರುವ ಪುಸ್ತಿಕೆಯಿಂದ)*

## ಅನುಬಂಧ – ೧

## ಮೆಚ್ಚುಗೆ

ಕರ್ನಾಟಕ ಜಾನಪದ ಕ್ಷೇತ್ರದಲ್ಲಿ ಕೆ.ಆರ್. ಕೃಷ್ಣಸ್ವಾಮಿ (ಕ.ರಾ.ಕೃ.) ಅವರ ಹೆಸರನ್ನು ಕೇಳದವರು ವಿರಳ. ಜಾನಪದ ಕ್ಷೇತ್ರದ ಸೊಗಸನ್ನು ಸಾರ್ವಜನಿಕ ದೃಷ್ಟಿಗೆ ತಂದು, ಅದರ ಬಗೆಗೆ ಜಾಗೃತಿ ಉಂಟುಮಾಡಿದ ಧುರೀಣರಲ್ಲಿ ಒಬ್ಬರು. ಕ.ರಾ.ಕೃ. ಅವರು ಈ ಕೆಲಸವನ್ನು ಧ್ವನಿಮುದ್ರಿಕೆಯ ಸಂಗ್ರಹ ಮತ್ತು ಪುಸ್ತಕ ಪ್ರಕಟಣೆಗಳ ಮೂಲಕ ಮಾಡಿದ್ದಾರೆ. ಅದಕ್ಕಾಗಿ ಜನಪದ ಅಕಾಡೆಮಿ ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಕ.ರಾ.ಕೃ. ಅವರು ಈ ಕೆಲಸವನ್ನೆಲ್ಲಾ ಸ್ವಂತ ಶ್ರಮದಿಂದ ಮತ್ತು ಹೆಚ್ಚಿನ ವೆಚ್ಚದಿಂದ ಮಾಡಿದುದು ಗಮನಾರ್ಹವಾಗಿದೆ, ಈ ಅಕಾಡೆಮಿಯು ಯಾವುದೇ ಹಣವನ್ನು ಸರ್ಕಾರದಿಂದ ಅಥವಾ ಯಾವುದೇ ನಿಧಿಯಿಂದ ಪಡೆಯುತ್ತಿಲ್ಲವೆಂದು ನಾನು ದಾಖಲೆಗಳಲ್ಲಿ ನೋಡಿದ್ದೇನೆ. ಆದುದರಿಂದ ಕ.ರಾ.ಕೃ. ಅವರದು ನಿಸ್ವಾರ್ಥ ಸೇವೆ ಎನ್ನಬಹುದು. ಒಮ್ಮೆ ಅವರ ಅದ್ಭುತವಾದ ಅಪರೂಪದ ಸಂಗ್ರಹವನ್ನು ನೋಡುವ ಅವಕಾಶ ನನಗೆ ದೊರಕಿತು. ಆಗ ಅನೇಕ ಹಿರಿಯ ಕಲಾವಿದರ ರೇಖಾ ಕೃತಿಗಳನ್ನು ನೋಡಿದೆ. ಅದರಲ್ಲಿ ಆರ್.ಎಸ್. ನಾಯುಡು ಅವರ ರೇಖಾ ಚಿತ್ರಗಳ ಸಂಪುಟಗಳನ್ನು ಕಣ್ಣಾಡಿಸಿದೆ. ಇಂತಹ ಪ್ರಖ್ಯಾತರೆನಿಸಿದ ಇಂಥವರ ರೇಖಾಚಿತ್ರಗಳ ಬಗೆಗೆ ಒಂದು ಪುಸ್ತಕ ಪ್ರಕಟಗೊಂಡಿರುವುದು ಸ್ವಾಗತಾರ್ಹವಾದುದು.

ನಮ್ಮ ಭಾರತೀಯ ಆದಿವಾಸಿಗಳ ಹಿತರಕ್ಷಣೆಗಾಗಿ ದುಡಿದ ಮಾನವಶಾಸ್ತ್ರಜ್ಞ ಡಾ॥ ವೆರಿಯರ್ ಎಲ್ವಿನ್ ಅವರ ಜೀವನ ಚಿತ್ರಮಾಲೆಯನ್ನು ರೇಖೆಗಳಲ್ಲಿ ಬಿಡಿಸಿದ ಮತ್ತು ಆದಿವಾಸಿಗಳ ನೃತ್ಯ, ಸಂಪ್ರದಾಯಗಳ ಸೌಂದರ್ಯವನ್ನು ಹತ್ತಿರದಿಂದ ಕಂಡವರಂತೆ ಚಿತ್ರಿಸಿದ ಮೂಲ ಚಿತ್ರಗಳನ್ನು ನಾನು ನೋಡಿ ಬೆರಗಾಗಿದ್ದೇನೆ. ರೇಖಾಲೋಕದ ಈ ಚಿತ್ರಗಳು ಭಾರತೀಯ ಹಿರಿಯ ಕಲಾವಿಮರ್ಶಕರ ಮತ್ತು ವಿದ್ವಾಂಸರ ಗಮನ ಸೆಳೆದ ದಾಖಲೆಗಳಲ್ಲಿ ನಾನು ಕಂಡಿದ್ದೇನೆ.

ಕ್ರಿಸ್ತನಾಗುವ ಮಹಾತ್ಮ ಗಾಂಧೀಜಿಯವರನ್ನು ಸ್ಮರಿಸಿ ಅವರನ್ನು ನಾನಾ ರೇಖೆಗಳಲ್ಲಿ ಚಿತ್ರಾವಳಿ ಬಿಡಿಸಿದ ಸಂಪುಟವನ್ನು ನಾನು ನೋಡಿದ್ದು ಇನ್ನೂ ನನಗೆ ಕಣ್ಣಿಗೆ ಕಟ್ಟಿದಂತಿದೆ.

ಷೇಕ್ಸ್‌ಪಿಯರ್, ಕುವೆಂಪು, ಮೋತಿಲಾಲ್ ನೆಹರು – ಜವಹರಲಾಲ್ ನೆಹರು ಅವರ ರೇಖಾಚಿತ್ರಗಳು ಒಂದೇ, ಎರಡೇ, ನೂರಾರು ಹರಡಿ ಹೋಗಿವೆ. ಮೃದುವಾದ ಸ್ವಭಾವದ, ಮಾನವೀಯತೆಯಿಂದ ಮರುಗುವ ಆರ್.ಎಸ್.ಎನ್. ತಮ್ಮ ಅನುಕಂಪವನ್ನು ಮಿಡಿದು ಇವರು ಬರೆದಿರುವ ಪ್ರತಿ ಒಂದೊಂದೂ ವಿವರಣೆಯನ್ನು ಸೂಚಿಸುವ ಚಿತ್ರ ಕೃತಿಗಳಾಗಿವೆ,

ವರ್ಣರಂಜಿತವಾಗಿವೆ. ಆದರೆ ಇವರು ಬರೆದಿರುವ ಈ ಚಿತ್ರಗಳು ನಶಿಸಿ ಹೋಗದೆ ಇಂದು ಒಂದು ಗ್ರಂಥ ರೂಪದಲ್ಲಿ ಪ್ರಕಟಣೆಗೆ ಸಿದ್ಧವಾಗಿರುವುದು ನನಗೆ ಹೆಚ್ಚಿನ ಸಂತೋಷವನ್ನು ಉಂಟುಮಾಡಿದೆ. ಈ ಬ್ಯಾಲೆಯ ಚಿತ್ರಗಳೇ ಅವರು ಲೋಕ ವಿಖ್ಯಾತಿಯನ್ನು ಗಳಿಸುವುದೆಂದು ನಾನು ತಿಳಿದಿರುವೆನು. ಈ ಪುಸ್ತಕ, ೧೯೮೫ರಲ್ಲಿ ಅಕ್ಟೋಬರ್ ೬ರಂದು ನಿಧನರಾದ ಆರ್.ಎಸ್.ಎನ್. ಅವರ ೯೦ನೇ ಜಯಂತಿಯ ಉತ್ಸವದ ನೆನಪಿನ ಕಿರು ಸಂಪುಟವಾಗುತ್ತದೆಂದು ನಾನು ನಂಬಿರುವೆನು. ಈ ಗ್ರಂಥವನ್ನು ಇನ್ನೂ ವಿಸ್ತರಿಸಿ ಇಂಗ್ಲಿಷ್ ಭಾಷೆಯಲ್ಲಿ ಇದನ್ನು ಪ್ರಕಟಿಸಿದರೆ, ನಮ್ಮ ಭಾರತೀಯ ಕಲಾ ಪರಂಪರೆಗೆ ಮಹೋನ್ನತವಾದ ಕೃತಿಯಾಗುವುದರಲ್ಲಿ ಮತ್ತು ವಿದೇಶಗಳಲ್ಲಿ ಪ್ರಶಂಸೆಯನ್ನು ಗಳಿಸುವುದರಲ್ಲಿ ಮುಂದಾಗುವುದೆಂದು ನನಗೆ ಸಂದೇಹವಿಲ್ಲ. ಈ ಕೆಲಸವನ್ನು ಬಿ.ವಿ.ಕೆ. ಅವರು ವಿಳಂಬವಿಲ್ಲದೆ, ತಾಳ್ಮೆಯಿಂದ ಮಾಡುವಲ್ಲಿ ಯಶಸ್ವಿಯಾಗಬಲ್ಲರೆಂದು, ಜೊತೆಗೆ ಕೃಷ್ಣಸ್ವಾಮಿ ಅವರ ಬೆಂಬಲವು ದೊರಕುವುದೆಂದು ಭಾವಿಸಿರುವೆನು. ಗಾತ್ರದಲ್ಲಿ ಚಿಕ್ಕದಿರುವ ಈ ಸಂಪುಟವು ದೊಡ್ಡ ಗಾತ್ರದ ಸಂಪುಟಕ್ಕಿಂತಲೂ ಹೆಚ್ಚು ಅಮೂಲ್ಯವಾಗಿದೆಯೆಂದು ನಾನು ತಿಳಿದಿದ್ದೇನೆ.

ನಮ್ಮ ರಾಷ್ಟ್ರದ ಪ್ರಖ್ಯಾತರಾದ ಉಮಾಶಂಕರ್ ದೀಕ್ಷಿತ್, ಜವಹರಲಾಲ್ ನೆಹರು, ಜಯಪ್ರಕಾಶ್ ನಾರಾಯಣ್, ಮೀನೂಮಸಾನಿ, ಅಶೋಕ ಮೆಹತ, ಯೂಸೆಫ್ ಮೆಹರಾಲಿ, ಡಿ.ಜಿ. ತೆಂಡೋಲಕರ್, ಕುಮಾರ ಮಂಗಳಂ, ಕವಿ ಹರೀಂದ್ರನಾಥ ಚಟ್ಟೋಪಾಧ್ಯಾಯ, ಕೆ.ಎ. ಅಬ್ಬಾಸ್, ಕೆ.ಎಂ.ಮುನ್ಷಿ, ಜಮುನಾದಾಸ್ ದ್ವಾರಕದಾಸ್, ಕವಯಿತ್ರಿ ಸರೋಜಿನಿ ನಾಯ್ಡು, ಜ್ಯೋತಿಬಸು (ಈಗಿನ ಪಶ್ಚಿಮ ಬಂಗಾಳದ ಮುಖ್ಯಮಂತ್ರಿ) ಮುಂತಾದವರು ಇವರ ಆಪ್ತಮಿತ್ರರೆನಿಸಿದ್ದರು. ಇವರ ಸಮಕಾಲೀನರು ಹೌದು. ಆದರೆ ಯಾರ ಸಹಾಯವನ್ನು ಕೋರಿ ಯಾರ ಬಳಿಯೂ ಇವರು ಹೋಗಲಿಲ್ಲವೆಂದು ನಾನು ಕೇಳಿದ್ದೇನೆ.

ಆರ್. ಸೀತಾಪತಿ ನಾಯ್ಡು ಅಸಾಧಾರಣ ಪುರುಷ, ಜ್ಞಾನಿ, ಆದರ್ಶವಾದಿ, ಅವರದೆ ಒಂದು ಪ್ರಪಂಚ. ಅಮಾನಸಿಕ ಅಥವಾ ಪ್ರಪಂಚಗಳ ಯಾವ ಘಟನೆಯಾಗಲೀ ಅವರ ಪ್ರತಿಕ್ರಿಯೆ ಕಾವೇರಿ ಉಕ್ಕಿದಾಗ ಅಭಿವ್ಯಕ್ತವಾಗುತ್ತಿದ್ದುದು ಲಿಖಿತ ರೂಪದಲ್ಲಿ. ಅವುಗಳಲ್ಲಿ ಎದ್ದು ಕಾಣುವ ಒಂದು ಅಂಶ–ರೇಖೆಗಳ ಮೇಲೆ ಆರ್.ಎಸ್.ಎನ್. ಅವರಿಗಿದ್ದ ಆಧಿಪತ್ಯ, ಅವರ ಮನಸ್ಸನ್ನು ಸ್ಫುರಿಸಿದ ಯಾವ ಸಂದರ್ಭವಾಗಲಿ ಅಥವಾ ಪ್ರತಿಕ್ರಿಯೆಯಾಗಲಿ ರೇಖಾ ರೂಪದಲ್ಲಿ ಪ್ರತಿಬಿಂಬವಾಗುತ್ತಿತ್ತು. ಈ ಚಿತ್ರಗಳೂ ವೈವಿಧ್ಯಮಯವಾದವು. ಅಂತಹ ಒಂದು ಈ ಬ್ಯಾಲೆ ಚಿತ್ರಮಾಲೆ. ಒಂದು ರೀತಿಯ ಸ್ವಪ್ನಸೀಮೆಯ ಅನುಭವ.

ಈ ಶತಮಾನದ ಮಧ್ಯಭಾಗದಲ್ಲಿ ಬೆಂಗಳೂರಿನ ಇಂಟಲೆಕ್ಚುಯಲ್ಸ್ ಅಥವಾ ಬುದ್ಧಿ ಜೀವಿಗಳೆನಿಸಿಕೊಂಡವರಿಗೆಲ್ಲಾ ಬಹು ಪರಿಚಿತವಿದ್ದ ವ್ಯಕ್ತಿ ಆರ್.ಎಸ್. ನಾಯುಡು. ಇದಕ್ಕೆ ಅವರ ವಾಮಪಂಥದ ಒಲವು ಒಂದು ಕಾರಣವಿರಬಹುದು. ಅದಕ್ಕಿಂತ ಹೆಚ್ಚಾಗಿ ಅವರ ಕಲಾತ್ಮಕತೆ. ಇದರಲ್ಲಿ ಒಂದು ಬಹುಮುಖ ಪ್ರತಿಭೆ, ಆರ್.ಎಸ್.ಎನ್. ಚಿತ್ರಕಾರ ಅಲ್ಲದೆ ಶಿಲ್ಪಿ. ಎರಡರಲ್ಲಿಯೂ ಅವರದೇ ಸ್ವಂತ ನಿಲುವು. ಜಾರು–ರೇಖೆ ಅವರಿಗೆ ಕವಿಗೆ ಶಬ್ದ ಸಂಪತ್ತಿದ್ದಂತೆ. ಅದನ್ನು ಬಳಸಿ ಅಪಾರವಾಗಿ ಚಿತ್ರ ರಚನೆ ಮಾಡಿದ ಆರ್.ಎಸ್.ಎನ್. ಅವರ ಕಲಾಕೃತಿಗಳ ಸಂಖ್ಯೆಯೇ ತಿಳಿಯದೆಂದು ಕೇಳಿದ್ದೇನೆ. ಭಾವಚಿತ್ರಗಳಿಂದ ಹಿಡಿದು ನಾನಾ ಸನ್ನಿವೇಶಗಳನ್ನು ರೇಖೆಯಲ್ಲಿ ಹಿಡಿದಿಟ್ಟ ರೀತಿಯ ಚಿತ್ರಗಳವರೆವಿಗೂ ಇವೆ. ಇಂತಹ ರೇಖಾಚಿತ್ರಗಳನ್ನು ಬಹು ಸಂಖ್ಯೆಯಲ್ಲಿ ಆರ್.ಎಸ್.ಎನ್. ಅವರ ಹತ್ತಿರದ ಮಿತ್ರರಾಗಿದ್ದ ಶ್ರೀ ಕ.ರಾ. ಕೃಷ್ಣಸ್ವಾಮಿ ಅವರು ಕೆಲವು ಸಂಪುಟಗಳಲ್ಲಿ ಸಂಗ್ರಹಿಸಿದ್ದಾರೆ. ಈ ಸಂಪುಟಗಳಲ್ಲಿ ಬ್ಯಾಲೆಗಳಿಗೆ ಸಂಬಂಧಪಟ್ಟ ಒಂದು ಗುಚ್ಛವನ್ನು ಹಿನ್ನೆಲೆ ಮತ್ತು ವಿವರಗಳ ಸಹಿತವಾಗಿ ಈಗ ನಮ್ಮ ಕಲಾಭಿಮಾನಿಗಳಿಗೆ ಅರ್ಪಿಸಲಾಗಿದೆ. ಪ್ರಖ್ಯಾತಿ ಹೊಂದಿರುವ ಕಲಾವಿಮರ್ಶಕರೂ, ಲೇಖಕರೂ ಆದ ನನ್ನ ಆತ್ಮೀಯ ಮಿತ್ರರಾದ ಬಿ.ವಿ.ಕೆ. ಶಾಸ್ತ್ರೀ ಅವರು ಸೊಗಸಿನಿಂದ ಈ ಗ್ರಂಥವನ್ನು ಸಿದ್ಧಪಡಿಸಿದ್ದಾರೆ. ಭಾರತೀಯ ಕಲಾಸಂಪ್ರದಾಯದಲ್ಲಿ ನಾನಾ ಕಲೆಗಳಿಗೆ ಇರುವ ಪರಸ್ಪರ ಸಂಬಂಧವನ್ನು ಬಿ.ವಿ.ಕೆ. ಶಾಸ್ತ್ರೀ ಅವರು ಇಲ್ಲಿ ಒತ್ತಿ ಹೇಳಿದ್ದಾರೆ. ಈ ಕಿರುಹೊತ್ತಿಗೆಯು ಅಂತಹ ಸಂಬಂಧವನ್ನು ನೆನಪಿಗೆ ತರುವಂತಾಗಬಹುದೆಂದು ನನ್ನ ಭರವಸೆಯೆನಿಸಿದೆ. ಈ ಗ್ರಂಥವನ್ನು ಕೊಡುಗೆಯಾಗಿ ಕಲಾ ಪ್ರಪಂಚಕ್ಕೆ ನೀಡಿದ್ದಕ್ಕಾಗಿ ಅವರನ್ನು ನಾನು ಅಭಿನಂದಿಸುತ್ತೇನೆ.

*–ಐ.ಎಂ. ವಿಠ್ಠಲಮೂರ್ತಿ*

## ಅನುಬಂಧ – ೨

# ನನ್ನ ಮಾತು*

**ಕ.**ರಾ.ಕೃ. ಎಂದು ಪರಿಚಿತರಾದ ಕೆ.ಆರ್.ಕೃಷ್ಣಸ್ವಾಮಿಯವರು ಜಾನಪದ ಕ್ಷೇತ್ರದಲ್ಲಿ ಹಲವಾರು ವರುಷ ಕೃಷಿ ಮಾಡಿದ ಉತ್ಸಾಹಿ. ಕರ್ನಾಟಕ ಜಾನಪದ ಕ್ಷೇತ್ರದ ಬಗೆಗೆ ಜಾಗೃತಿ ಉಂಟುಮಾಡಿದ ಆದ್ಯರಲ್ಲೊಬ್ಬರು ಎಂದೂ ಹೇಳಬಹುದು. ಹಳ್ಳಿ ಹಳ್ಳಿಗಳಿಗೂ ತಿರುಗಿ ಅಲ್ಲಿನ ಜೀವನದ ಸೊಬಗನ್ನೂ, ಸೊಗಡನ್ನೂ ಧ್ವನಿಮುದ್ರಿಕೆ, ಫೋಟೋ ಮುಂತಾದವುಗಳ ಮುಖಾಂತರ ಸಂಗ್ರಹಿಸಿದ್ದಾರೆ. ಇದರ ಜೊತೆಗೆ ಈ ಜೀವನ ಮತ್ತು ಕಲೆಗಳ ಬಗೆಗೆ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ ಬಹುಪಾಲು ಚಿತ್ರಗಳಿಂದ ಕೂಡಿವೆ. ಇದರಲ್ಲಿ ಛಾಯಾಚಿತ್ರಗಳಿವೆ, ರೇಖಾಚಿತ್ರಗಳಿವೆ. ಇವಿಷ್ಟನ್ನೂ ತಮ್ಮ ಸ್ವಂತ ಶ್ರಮದಿಂದ ಹಾಗೂ ವೆಚ್ಚದಿಂದ ಮಾಡಿರುವುದು ಗಮನಾರ್ಹ. ಈ ಎಲ್ಲಾ ಪ್ರಯತ್ನಗಳು ಮೂರ್ತೀಭವಿಸಿರುವುದು ಅವರ ಜನಪದ ಅಕಾಡೆಮಿಯಲ್ಲಿ, ಅದರಲ್ಲಿರುವ ಅಪೂರ್ವ ಜಾನಪದ ಕಲಾ ಸಂಗ್ರಹದಲ್ಲಿ, ಅದರಲ್ಲಿ ಜಾನಪದ ಕ್ಷೇತ್ರ ಅಂದೇ ಅಲ್ಲ ಕ.ರಾ.ಕೃ. ಅವರ ಈ ಕೆಲಸದ ಬಗೆಗೆ ಆಸಕ್ತಿ ತೋರಿ, ಹಾಗೂ ಸಹಕರಿಸಿದ ಅನೇಕ ಕಲಾವಿದರ ಕೃತಿಗಳೂ ಇವೆ.

ಅಂತಹ ಕಲಾವಿದರಲ್ಲೊಬ್ಬರು ಆರ್.ಎಸ್.ನಾಯ್ಡು. ಮೇಧಾವಿ, ಪ್ರತಿಭಾವಂತ. ಅವರು ಸಾವಿರಾರು ರೇಖಾಚಿತ್ರಗಳ ಮೂಲಕ ತಮ್ಮ ಸಾಮಾನ್ಯ ಜನಜೀವನದ ವಿವಿಧ ಮುಖಗಳನ್ನು ಹಿಡಿದಿಟ್ಟಿದ್ದಾರೆ, ಅಲ್ಲದೆ ಅವರಿಗೆ ಆಕರ್ಷಣೀಯವಾದ ಇತರ ಸನ್ನಿವೇಶಗಳ ರೇಖಾಚಿತ್ರಗಳನ್ನೂ ರಚಿಸಿದ್ದಾರೆ. ಅವುಗಳಲ್ಲಿ ಒಂದು ಭಾಗ ಪಾಶ್ಚಾತ್ಯ ನೃತ್ಯ ನಾಟಕವಾದ ಬ್ಯಾಲೆಗೆ ಸಂಬಂಧಿಸಿದುದು. ಅದರ ನರ್ತನದ ನುಲಿವು, ನಲಿವು, ಅಂತರ್ಗತ ಲಯ ಮುಂತಾದವುಗಳಿಂದ ಆಕರ್ಷಿತರಾದ ನಾಯುಡು ಸಾಕಷ್ಟು ಸಂಖ್ಯೆಯ ರೇಖಾಚಿತ್ರಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಕೆಲವು ಆರಿಸಿದ ಚಿತ್ರಗಳನ್ನು ಈ ಕಿರುಪುಸ್ತಕದಲ್ಲಿ ಪ್ರಕಟಿಸಲಾಗಿದೆ. ಜೊತೆಗೆ ವಿವರಿಸಿರುವ ಟಿಪ್ಪಣಿಗಳನ್ನೂ ಕೊಡಲಾಗಿದೆ. ಅಲ್ಲದೆ ನಾಯುಡು ಅವರ ಜೀವನ ಚಿತ್ರವನ್ನೂ ಕೊಡಲಾಗಿದೆ. ಅದರ ಮಧ್ಯೆ ನಾಯುಡು ಅವರ ಕಲ್ಪನಾ ವೈವಿಧ್ಯದ ನಿದರ್ಶನವಾಗಿ ಬೇರೆ ಕೆಲವು ರೇಖಾಚಿತ್ರಗಳನ್ನೂ ಸೇರಿಸಲಾಗಿದೆ. ಪುಸ್ತಕದಲ್ಲಿ ಅಲ್ಲಲ್ಲಿ ಕಂಡುಬಂದ ಮುದ್ರಣದೋಷಗಳ ಬಗೆಗೆ ಕೊನೆಯಲ್ಲಿ ತಪ್ಪು ಒಪ್ಪೋಲೆಯನ್ನು ಸೇರಿಸಲಾಗಿದೆ. ಒಬ್ಬ ಪ್ರತಿಭಾವಂತ ಕಲಾವಿದನ ಕಲೆಯ ಒಂದು ಅಂಶವನ್ನು ಪರಿಚಯಿಸುವಂತಹ ಕ.ರಾ.ಕೃ. ಅವರ ಈ ಪ್ರಯತ್ನವನ್ನು ಸ್ವೀಕರಿಸಬೇಕೆಂದು ಕೋರುವೆ.

ನನ್ನ ಆಪ್ತರು, ಕಲಾಪ್ರಿಯರು ಆಗಿರುವ ಮಾನ್ಯರಾದ ಐ.ಎಂ. ವಿಠ್ಠಲಮೂರ್ತಿಯವರು ಈ ಗ್ರಂಥಕ್ಕೆ ತಮ್ಮ ಅಭಿಮಾನದ ಮೆಚ್ಚುಗೆಯನ್ನು ಬರೆದಿದ್ದಾರೆ. ಇದಕ್ಕಾಗಿ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸಿದ್ದೇನೆ.

*–ಬಿ.ವಿ.ಕೆ. ಶಾಸ್ತ್ರೀ*

---

* *ಬ್ಯಾಲೆಗೆ ಭ್ರಮಿಸಿದ ಆರ್.ಎಸ್.ಎನ್. ಕೃತಿಯ ಲೇಖಕರ ಮಾತು*





# ಕಲಾವಿದ ಆರ್.ಎಸ್.ಎನ್. ನಾನು ಕಂಡಂತೆ

■ *ಸಿ.ಆರ್.ಕೃಷ್ಣರಾವ್*

**ಅ**ಪರೂಪದ ಕಲಾವಿದ ಆರ್. ಸೀತಾಪತಿ ನಾಯ್ಡು, ಅಷ್ಟೇ ಅಪರೂಪದ ವ್ಯಕ್ತಿ ಕೂಡ. ಆರ್.ಎಸ್.ಎನ್. ಎಂದೇ ಬಲ್ಲವರಿಗೆ ಪರಿಚಿತರಾಗಿದ್ದ ಅವರದು ವಿಶಿಷ್ಟ ವ್ಯಕ್ತಿತ್ವ. ಅವರ ರೇಖಾಚಿತ್ರಗಳು, ಶಿಲ್ಪಗಳು ನೋಡುಗರನ್ನು ವಿಸ್ಮಯಗೊಳಿಸುವಂತೆಯೇ ಅವರ ಬದುಕೂ ವಿಸ್ಮಯ. ಬಯಸಿದ್ದರೆ, ಬೇಕಾದಷ್ಟು ಗಳಿಸಬಹುದಾಗಿದ್ದ ಆರ್.ಎಸ್.ಎನ್. ಅರಸಿ ಕೊಂಡದ್ದು ಸರಳಜೀವನವನ್ನು, ಒಂಟಿಬಾಳನ್ನು. ಅವರ ಆತ್ಮೀಯ ವಲಯವೂ ಕೂಡ ಸೀಮಿತವಾದ್ದು. ತಮ್ಮ ಆಕರ್ಷಕ ವ್ಯಕ್ತಿತ್ವದಿಂದ ನಿರರ್ಗಳ ಮಾತಿನಿಂದ ಯಾರನ್ನಾದರೂ ತನ್ನಡೆಗೆ ಸೆಳೆಯಬಲ್ಲವರಾಗಿದ್ದರು. ವಿಲಕ್ಷಣ ವ್ಯಕ್ತಿಯಾಗಿದ್ದ ನಾಯ್ಡು ಹೆಚ್ಚಿನ ಸಮಯವನ್ನು ಏಕಾಂತವಾಗಿಯೇ ಕಳೆಯ ಬಯಸುತ್ತಿದ್ದರು. ರೇಖಾಚಿತ್ರಗಳಲ್ಲಿ ಶಿಲ್ಪಕೃತಿಗಳಲ್ಲಿ ತಮ್ಮದೇ ಆದ ಛಾಪು ಮೂಡಿಸಿದ್ದ ನಾಯ್ಡು ತಮ್ಮ ಬದುಕಿನಲ್ಲೂ ವಿಶಿಷ್ಟತೆಯನ್ನು ರೂಢಿಸಿಕೊಂಡಿದ್ದರು. ಶುಧ್ಧವಾದ ಬಿಳಿ ಜುಬ್ಬ ಪಾಯಿಜಾಮಾ ಹೆಗಲ ಮೇಲೆ ಒಂದು ಜೋಳಿಗೆಯ ಚೀಲ. ತೆಳ್ಳಗಿನ ಈ ವ್ಯಕ್ತಿ ಎಲ್ಲಿಂದೆಲ್ಲಿಗೆ ಬೇಕಾದರೂ ನಡೆದು ಬರುತ್ತಿದ್ದರು.

ಆರ್.ಎಸ್.ಎನ್.ರ ಸಂಪರ್ಕಕ್ಕೆ ನಾನು ಬಂದದ್ದು ೧೯೫೦ರ ಸುಮಾರಿನಲ್ಲಿ. ಮುಂಬಯಿನಿಂದ ಬೆಂಗಳೂರಿಗೆ ಬಂದು ನೆಲೆಸಿದ್ದ ಅವರು ಉಳಿದುಕೊಂಡಿದ್ದುದು ಮಲ್ಲೇಶ್ವರಂ ಹೋಟೆಲೊಂದರಲ್ಲಿ. ಕಮ್ಯುನಿಸ್ಟ್ ಪಾರ್ಟಿಯ ಮುಖಪತ್ರ 'ಪೀಪಲ್ಸ್‌ವಾರ್'ನ ಹಳೆಯ ಸಂಚಿಕೆಗಳಲ್ಲಿ ಅವರ ಕೆಲವು ರೇಖಾಚಿತ್ರಗಳನ್ನು ವ್ಯಂಗ್ಯಚಿತ್ರಗಳನ್ನು ನೋಡಿದ್ದ ನೆನಪು. ಅವರು ಪತ್ರಿಕೆಯ ಸಂಪಾದಕ ಮಂಡಲಿಯಲ್ಲಿದ್ದರು ಎಂದು ನಂತರ ತಿಳಿಯಿತು. ಬಸವನಗುಡಿಯ ಗಾಂಧಿಬಜಾರಿನಲ್ಲಿ ಇದ್ದ ನಮ್ಮ ಪುಸ್ತಕದ ಮಳಿಗೆಗೆ ಅವರು ಭೇಟಿಕೊಡುತ್ತಿದ್ದರು. ಗೆಳೆಯ ಗೋಪಾಲಕೃಷ್ಣರಾವ್ ಆಗ ಆ ಪುಸ್ತಕಗಳ ಮಳಿಗೆ ನೋಡಿಕೊಳ್ಳುತ್ತಿದ್ದ. ಹಾಗಾಗಿ ಆರ್.ಎಸ್.ಎನ್.ರೊಂದಿಗೆ ಪರಿಚಯ, ಅದು ಮುಂದೆ ಸ್ನೇಹವಾಗಿ ಬೆಳೆಯಿತು. ಅಂಗಡಿಗೆ ಬಂದು ಪತ್ರಿಕೆಗಳನ್ನು ಪುಸ್ತಕಗಳನ್ನು ಖರೀದಿಸುತ್ತಿದ್ದ ಆರ್.ಎಸ್.ಎನ್. ಒಂದೆರಡು ಗಂಟೆಗಳನ್ನು ನಾಲ್ಕಾರು ವಿಷಯಗಳನ್ನು ಕುರಿತು ಮಾತನಾಡುತ್ತ ಕಳೆಯುತ್ತಿದ್ದರು. ವಾರಕ್ಕೆ ಎರಡು ಮೂರು ದಿನವಾದರೂ ಅವರು ಪುಸ್ತಕದ ಮಳಿಗೆಗೆ ಭೇಟಿ ಕೊಡುತ್ತಿದ್ದರು. ಆ ದಿನಗಳಲ್ಲಿ ಈ ಮಳಿಗೆ ಒಂದು ರೀತಿಯಲ್ಲಿ ಬುದ್ಧಿಜೀವಿಗಳ ಪುಸ್ತಕಪ್ರಿಯರ ಮಿಲನಕ್ಕೆ ಕೇಂದ್ರವಾಗಿತ್ತು. ಸೋವಿಯತ್ ಪುಸ್ತಕಗಳನ್ನು ನಿಯತ ಕಾಲಿಕೆಗಳನ್ನು ಎಡಪಂಥೀಯ ಪುಸ್ತಕಗಳನ್ನು ಮಾರಾಟ ಮಾಡುತ್ತಿದ್ದ ಪುಸ್ತಕದ ಅಂಗಡಿ ಅದೊಂದೆ.

ಆರ್.ಎಸ್.ಎನ್. ಬೆಂಗಳೂರಿನಲ್ಲಿದ್ದದ್ದು ಕೆಲವೇ ವರ್ಷಗಳು. ಕೆಲದಿನಗಳು ಅವರು ಮಡಿವಾಳದಲ್ಲಿ

ವಾಸಮಾಡುತ್ತಿದ್ದರು. ಬೆಂಗಳೂರಿನಲ್ಲಿ ಅವರ ಸೋದರ ಭೂವಿಜ್ಞಾನದ ಪ್ರಾಧ್ಯಾಪಕ ಜಗಪತಿ ನಾಯಿಡು ಹಾಗೂ ಅವರ ಸೋದರಿ ಇದ್ದರು. ಈ ಅವಧಿಯಲ್ಲೇ ಆರ್.ಎಸ್.ಎನ್. ತಮ್ಮ ಕೆಲವು ಶಿಲ್ಪಕೃತಿಗಳನ್ನು ರೂಪಿಸಿದರು. ಮಲ್ಲೇಶ್ವರದಲ್ಲಿದ್ದ ಪೋರ್ಸಲೇನ್ ಕಾರ್ಖಾನೆಯ ಹರಿಹರನ್ ಆರ್.ಎಸ್.ಎನ್.ರ ಮಿತ್ರ. ತಮ್ಮ ಶಿಲ್ಪ ಕೃತಿಗಳ ಪಡಿಯಚ್ಚುಗಳನ್ನು ಮಾಡಿದ್ದು ಈ ಕಾರ್ಖಾನೆಯಲ್ಲಿಯೆ. ಬೇಂದ್ರೆ, ಬರ್ನಾರ್ಡ್ ಷಾ, ಕೈಲಾಸಂ, ಬುದ್ಧ ಮೊದಲಾದ ಪ್ಲಾಸ್ಟರ್ ಆಫ್ ಪ್ಯಾರಿಸ್ ಮೂರ್ತಿಗಳನ್ನು ತಯಾರಿಸಿದರೂ ಅದನ್ನು ಅವರು ಮಾರಾಟ ಮಾಡುವ ಉದ್ದೇಶ ಹೊಂದಿರಲಿಲ್ಲ. ತಮಗೆ ಬೇಕಾದ ಮಿತ್ರರಿಗೆ ಮಾತ್ರ ಕೊಡುತ್ತಿದ್ದರು. ಅವರ ರೇಖಾಚಿತ್ರಗಳನ್ನೂ ಅಷ್ಟೆ. ಪತ್ರಿಕೆಗಳಿಗೆ ಕಳಿಸಿ ಪ್ರಚಾರಗಿಟ್ಟಿಸುವ ಹಂಬಲ ಅವರಿಗೆ ಇರಲೇ ಇಲ್ಲ. ಗೆಳೆಯರು ಯಾರಾದರೂ ಒತ್ತಾಯ ಮಾಡಿದರೆ ಪುಸ್ತಕಗಳ ಮುಖಪುಟ ರಚಿಸಿ ಕೊಡುತ್ತಿದ್ದುದುಂಟು. ಅವರು ಬೆಂಗಳೂರಿನಲ್ಲಿದ್ದಾಗ 'ಪ್ರಜಾವಾಣಿ' ಪತ್ರಿಕೆಯ ಸಂಪಾದಕ ಟಿ.ಎಸ್.ರಾಮಚಂದ್ರರಾವ್, ವೈ.ಎನ್.ಕೆ. ಮೊದಲಾದವರು ಆರ್.ಎಸ್.ಎನ್.ರವರ ಆತ್ಮೀಯರು. ಸಭೆ ಸಮಾರಂಭಗಳಿಗೆ ಅವರು ಹೋಗುತ್ತಿದ್ದುದು ವಿರಳ. ಅವಿವಾಹಿತರಾಗಿದ್ದ ಆರ್.ಎಸ್.ಎನ್. ಊಟತಿಂಡಿಗಳ ವಿಚಾರದಲ್ಲೂ ತುಂಬಾ ಶಿಸ್ತು, ಹೋಟೆಲುಗಳಿಗೆ ಅಷ್ಟಾಗಿ ಹೋಗುತ್ತಿರಲಿಲ್ಲ. ಸ್ವಯಂ ಪಾಕದಲ್ಲೇ ಅವರಿಗೆ ತೃಪ್ತಿ.

ಮೈಸೂರಿಗೆ ಹೋಗಿ ನೆಲೆಸಿದ ಆರ್.ಎಸ್.ಎನ್. ಅಲ್ಲಿಂದ ಕದಲಲಿಲ್ಲ. ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್‌ನ ಜಿ.ಎಚ್.ರಾಮರಾವ್ ಅವರಿಗೆ ಆತ್ಮೀಯರಾಗಿದ್ದರಲ್ಲದೆ ಆಶ್ರಯದಾತರೂ ಆಗಿದ್ದರು. ನಗರದ ಗಡಿಬಿಡಿಯಿಂದ ದೂರದಲ್ಲಿದ್ದ ವಸತಿ ಪ್ರದೇಶವೊಂದರಲ್ಲಿ ಒಂದು ಕೋಣೆಯ ಚಿಕ್ಕ ಮನೆ ಆರ್.ಎಸ್.ಎನ್.ರ ವಾಸ ಕೊನೆಯವರೆಗೆ. ಮೈಸೂರಿಗೆ ಹೋದ ಮೇಲೆ ಅವರೊಂದಿಗೆ ಸಂಪರ್ಕ ಅಂಚೆ ಕಾರ್ಡುಗಳ ಮೂಲಕ ಅಷ್ಟೇ. ಗೆಳೆಯ ಗೋಪಾಲಕೃಷ್ಣ ಆಗ ಮೈಸೂರಿನಲ್ಲಿ ಓದುತ್ತಿದ್ದುದರಿಂದ ಅವರೊಂದಿಗೆ ನಿಕಟ ಸಂಪರ್ಕ ಇರಿಸಿಕೊಂಡಿದ್ದ . ಕೆ.ವಿ.ಸುಬ್ಬಣ್ಣ, ಅನಂತಮೂರ್ತಿ ಕೂಡ ಅವರ ಸಂಪರ್ಕದಲ್ಲಿದ್ದರು. ಮೈಸೂರಿಗೆ ಹೋದಾಗಲೆಲ್ಲ ತಪ್ಪದೆ ನಾನು ಆರ್.ಎಸ್.ಎನ್.ರವರನ್ನು ಭೇಟಿಮಾಡುತ್ತಿದ್ದೆ. 'ಜನಶಕ್ತಿ' ಪತ್ರಿಕೆಯ ವಾರ್ಷಿಕ ಸಂಚಿಕೆಗಳಿಗೆ ಪ್ರಕಾಶನದ ಕೆಲವು ಪುಸ್ತಕಗಳಿಗೆ ಅವರು ರಕ್ಷಾಪುಟಗಳನ್ನು ಮಾಡಿಕೊಟ್ಟರು. ಆದರೆ ಅದಕ್ಕೆ ಸಂಭಾವನೆಯನ್ನು ಮಾತ್ರ ನಿರಾಕರಿಸಿದರು. ಇತರರಿಗೆ ಮಾಡಿಕೊಟ್ಟಾಗ ಹಣ ತೆಗೆದುಕೊಳ್ಳುತ್ತಿದ್ದ ಅವರು ನಮಗೆ ಮಾತ್ರ ಉಚಿತವಾಗಿ ಮಾಡಿಕೊಟ್ಟರು. ಪಾರ್ಟಿಯ ಹಣಕಾಸಿನ ಸ್ಥಿತಿ ಅವರಿಗೆ ಚೆನ್ನಾಗಿ ಗೊತ್ತಿದ್ದಿತು.

ಆರ್.ಎಸ್.ಎನ್. ಒಳ್ಳೆಯ ಅಡುಗೆಭಟ್ಟ, ತಮ್ಮ ಅಡುಗೆಯನ್ನು ತಾವೇ ಮಾಡಿಕೊಳ್ಳುತ್ತಿದ್ದರು. ಅದರಲ್ಲು ಒಂದು ಶಿಸ್ತು, ಎಲ್ಲವೂ ವ್ಯವಸ್ಥಿತವಾಗಿರಬೇಕು. ಮೈಸೂರಿನ ಅವರ ಕುಟೀರದಲ್ಲಿ ನಾನು ಒಂದು ದಿನ ಕಳೆದೆ. ಬೆಳಗಿನಿಂದ ಸಂಜೆಯವರೆಗೆ ಅವರ ಜೊತೆಯಲ್ಲಿರಬೇಕೆಂದು ಷರತ್ತು ಹಾಕಿದ್ದರು. ಬೆಳಗಿನ ಉಪಹಾರದಿಂದ ಅವರ ಆತಿಥ್ಯ. ತರಕಾರಿ ಕೊಳ್ಳುವುದರಿಂದ ಹಿಡಿದು ಎಲ್ಲದರಲ್ಲೂ ಅವರು ತಮ್ಮದೇ ವಿಶಿಷ್ಟತೆಯನ್ನು ರೂಢಿಸಿಕೊಂಡಿದ್ದರು. ರುಚಿಕರವಾದ ಭೋಜನ, ಮಾತು ಕತೆಯು ನನ್ನ ನೆನಪಿನಲ್ಲಿ ಚಿರಂತನವಾಗಿದೆ. ಅವರು ತಯಾರಿಸಿದ ಆಮ್ಲೆಟ್ ಇವತ್ತಿಗೂ ಬಾಯಲ್ಲಿ ನೀರೂರಿಸುತ್ತದೆ. ಶುಂಠಿ, ಟೊಮ್ಯಾಟೋ ಬೆರೆಸುವುದನ್ನು ಅವರಿಂದಲೇ ಕಲಿಯಬೇಕು. ಎಲ್ಲ ವಿಷಯದಲ್ಲೂ ತಮ್ಮದೇ ರೀತಿಯನ್ನು ಅನುಸರಿಸುತ್ತಿದ್ದ ಅವರ ಅಭಿರುಚಿ ವಿಶಿಷ್ಟವಾದ್ದು. ತಮ್ಮ ಚಿಕ್ಕ ಮನೆಯಲ್ಲಿ ಅವರು ತಮ್ಮದೇ ಆದ ಪೀಠೋಪಕರಣಗಳನ್ನು ವಿನ್ಯಾಸಗೊಳಿಸಿಕೊಂಡಿದ್ದರು. ಅವರು ಕೂರುತ್ತಿದ್ದ ಈಸಿಚೇರ್ ಬೇರೆ ಯಾರೂ ಬಳಸುವಂತಿರಲಿಲ್ಲ. ಸ್ವಲ್ಪ ವ್ಯತ್ಯಾಸವಾದರೂ ಅವರಿಗೆ ಕೋಪ ಬರುತ್ತಿತ್ತು. ಅವರ ಕಲಾಕೃತಿಗಳ ವಿಷಯದಲ್ಲೂ ಅಷ್ಟೆ. ಅಪ್ಪಿತಪ್ಪಿ ಏನಾದರೂ ಅದು ಸರಿ ಇಲ್ಲ ಇದು ಸರಿಯಿಲ್ಲ ಎಂದು ಕೊಂಕು ತೆಗೆದರೆ ತುಂಬಾ ಬೇಸರಗೊಳ್ಳುತ್ತಿದ್ದರು. ಕಲಾಕೃತಿಯನ್ನೇ ಧ್ವಂಸ ಮಾಡಿಬಿಡುತ್ತಿದ್ದರು. ಒಮ್ಮೆ ಜಿ.ಎಚ್. ರಾಮರಾಯರ ಮೂಲಕ ಮೈಸೂರಿಗೆ ಎನ್.ಐ.ಇ. ವಿದ್ಯಾಸಂಸ್ಥೆ ತಮ್ಮ ಸಂಸ್ಥಾಪಕರ ಪ್ರತಿಮೆ ಮಾಡಿಕೊಡಲು ನಾಯ್ಡು ಅವರನ್ನು ಒಪ್ಪಿಸಿದರು. ಅದಕ್ಕೆ ಸಂಭಾವನೆಯನ್ನು ಸಂಸ್ಥೆಯವರು ಮುಂಗಡವಾಗಿ ಕೊಟ್ಟಿದ್ದರು. ಆರ್.ಎಸ್.ಎನ್. ಪ್ರತಿಮೆಯ ಪ್ಲಾಸ್ಟರು ಮಾದರಿಯನ್ನು ತಯಾರಿಸಿದ್ದಾರೆ. ಅದನ್ನು ವೀಕ್ಷಿಸಲು ಸಂಸ್ಥೆಯ ಕೆಲಪ್ರತಿನಿಧಿಗಳು ಆರ್.ಎಸ್.ಎನ್. ಮನೆಗೆ ಬಂದಿದ್ದರು. ಆ ಸಮಯದಲ್ಲಿ ಜಿ.ಎಚ್.ರಾಮರಾಯರು ಜೊತೆಯಲ್ಲಿ ಇರಲಿಲ್ಲ. ಪ್ರತಿಮೆಯನ್ನು ನೋಡಿದ ಮೇಲೆ ಸಂಸ್ಥೆಯ ಸದಸ್ಯರಲ್ಲೊಬ್ಬರು ಏನೋ ಸರಿಯಿಲ್ಲವೆಂದು ಆಕ್ಷೇಪಿಸಿದರು. ಒಡನೆಯೇ ಕುಪಿತರಾದ ಆರ್.ಎಸ್.ಎನ್.

ಕಲಾಕೃತಿಯ ಬಗ್ಗೆ ನಿಮಗೇನು ಗೊತ್ತು ಎಂದು ಅಬ್ಬರಿಸಿ ಪ್ರತಿಮೆಯನ್ನು ಒಂದೇ ಏಟಿಗೆ ತುಂಡರಿಸಿದರು. ಪೆಚ್ಚು ಮೋರೆ ಹಾಕಿಕೊಂಡು ಅವರೆಲ್ಲ ರಾಮರಾಯರ ಬಳಿಗೆ ಬಂದು ವಿಷಯ ತಿಳಿಸಿದರು. ಅನಂತರ ಆರ್.ಎಸ್.ಎನ್.ರ ಮನವೊಲಿಸಿ ಮತ್ತೆ ಮೂರ್ತಿ ತಯಾರಿಸಿಕೊಡುವಂತೆ ಮಾಡಲು ಕೆಲತಿಂಗಳುಗಳೇ ಹಿಡಿದುವು.

ಆರ್.ಎಸ್.ಎನ್. ತಮ್ಮ ಕಿರಿಯ ಮಿತ್ರರ ಬಗ್ಗೆ ತುಂಬಾ ಕಾಳಜಿ ವಹಿಸಿದರು. ಮೈಸೂರಿನಲ್ಲಿ ವಿದ್ಯಾಭ್ಯಾಸ ಮುಗಿಸಿದ ಮೇಲೆ ಗೋಪಾಲಕೃಷ್ಣ ಚಾಮರಾಜನಗರದಲ್ಲಿ ಉಪನ್ಯಾಸಕರಾಗಿ ನೇಮಕಗೊಂಡರು. ವಿದ್ಯಾರ್ಥಿಯಾಗಿದ್ದಾಗ ಪಾಯಿಜಾಮ ಅಂಗಿ ಧರಿಸುತ್ತಿದ್ದ ಅವರಿಗೆ ಆರ್.ಎಸ್.ಎನ್. ಒತ್ತಾಯಮಾಡಿ ಸೂಟು ಹೊಲಿಸಿ ಕೊಟ್ಟರು. ಬಟ್ಟೆ, ಟೇಲರು ಎಲ್ಲ ಆರ್.ಎಸ್.ಎನ್. ಆಯ್ಕೆ ಮೇರೆಗೆ. ಈ ವಿಷಯವನ್ನು ನೆನಪುಮಾಡಿಕೊಂಡ ಗೆಳೆಯ ಗೋಪಾಲಕೃಷ್ಣ ಆರ್.ಎಸ್.ಎನ್.ರಂಥ ವ್ಯಕ್ತಿಗಳ ಒಡನಾಟ ಅಮೂಲ್ಯ ಮರೆಯಲಾರದಂಥದು ಎನ್ನುತ್ತಾರೆ. 'ಮೇನಕಾ' ಪತ್ರಿಕೆ ಪ್ರಾರಂಭವಾದ ಮೇಲೆ ಆರ್.ಎಸ್.ಎನ್. ನನಗೆ ತಪ್ಪದೆ ಪೋಸ್ಟ್ ಕಾರ್ಡುಗಳನ್ನು ಕಳಿಸುತ್ತಿದ್ದರು. ಮೇನಕೆಯ ವಿವಿಧ ನೃತ್ಯಭಂಗಿಗಳ ರೇಖಾಚಿತ್ರಗಳನ್ನು ಒಂದು ಬದಿಯಲ್ಲಿ ಬರೆದು ಕಳಿಸುತ್ತಿದ್ದರು. ಅವುಗಳಲ್ಲಿ ಕೆಲವನ್ನು 'ಮೇನಕಾ'ದಲ್ಲಿ ಪ್ರಕಟಿಸಿದ್ದೆವು. ಅವರು ಎಷ್ಟು ಮುಗ್ಧರಾಗಿದ್ದರೋ ಅಷ್ಟೇ ಸೂಕ್ಷ್ಮಮತಿ. ಒಮ್ಮೆ ಅವರಿಗೆ 'ಚೆಸ್ಟರ್‌ಫೀಲ್ಡ್' ಎನ್ನುವ ಅಮೆರಿಕದ ಸಿಗರೇಟಿನ ಇಷ್ಟವಾಯಿತು, ಅದು ಬೆಂಗಳೂರಿನಲ್ಲಿ ಲಭ್ಯವಿರಲಿಲ್ಲ. ದೆಹಲಿಯಲ್ಲಿ ಮಾತ್ರ ಸಿಗುತ್ತಿತ್ತು. ದೆಹಲಿಯಲ್ಲಿದ್ದ ಗೋಪಾಲಕೃಷ್ಣನಿಗೆ ಒಡನೆಯೇ ಅವರು ಕಾಗದ ಬರೆದರು. ಬೆಂಗಳೂರಿಗೆ ಬರುವವರ ಕೈಯಲ್ಲಿ ಸಿಗರೇಟು ಪ್ಯಾಕುಗಳನ್ನು ನನಗೆ ಕಳಿಸಿಕೊಟ್ಟ ವಿಷಯ ತಿಳಿದ ದಿನದಿಂದ ಆರ್.ಎಸ್.ಎನ್. ನನಗೆ ದಿನಕ್ಕೆ ಮೂರು–ನಾಲ್ಕು ಕಾರ್ಡುಗಳನ್ನು ಬರೆಯುತ್ತಿದ್ದರು. ಮೂರು ನಾಲ್ಕು ದಿನ ಕಳೆದ ಮೇಲೆ ಮೈಸೂರಿಗೆ ಖುದ್ದಾಗಿ ಹೋಗಿ ಅದನ್ನು ತಲುಪಿಸಿದಾಗ ಅವರಿಗಾದ ಸಂತೋಷ ಹೇಳತೀರದು. ಅವರ ಪತ್ರಗಳಿಗೆ ಉತ್ತರಿಸದೇ ಹೋದರೆ ಅವರಿಗೆ ಬೇಸರವಾಗುತ್ತಿತ್ತು. ಹೀಗೆ ಆರ್.ಎಸ್.ಎನ್. ಅವರದು ವಿಚಿತ್ರ ವ್ಯಕ್ತಿತ್ವ, ಮಾತನಾಡುತ್ತಿರುವಾಗ ಕೆಲವೊಮ್ಮೆ ಅವರು ಹಠಾತ್ತಾನೆ ನಿಲ್ಲಿಸಿ ಏನೋ ಗೊಣಗುತ್ತಿದ್ದರು. ಯಾರೋ ತಮ್ಮ ಹಿಂದೆ ಇದ್ದಾರೆ ಎನ್ನುವ ಭಾವನೆ. ಅದನ್ನು ಅವರು ಹೇಳಿಕೊಳ್ಳುತ್ತಿದ್ದರು ಮತ್ತೆ ಒಂದೆರಡು ನಿಮಿಷಗಳಲ್ಲಿ ಮಾಮೂಲಿ ಸ್ಥಿತಿಗೆ ಬರುತ್ತಿದ್ದರು. ನಮ್ಮ ನಾಡಿನಲ್ಲಿ ಅವರಿಗೆ ದೊರಕಬೇಕಾಗಿದ್ದ ಮಾನ್ಯತೆ ದೊರಕಲಿಲ್ಲ ಎನ್ನುವುದೇ ಕೊರತೆ, ಇದಕ್ಕೆ ಸ್ವಲ್ಪ ಮಟ್ಟಿಗೆ ಅವರೂ ಕಾರಣರು.





ಗ್ರೀಕ್ ದೇವತೆ



# ನಾವೇ ದೇವರಾಗುತ್ತೇವೆ

■ *ಕೆ.ಎಲ್. ಗೋಪಾಲಕೃಷ್ಣರಾವ್*

**ನಾ**ನು ಮೈಸೂರಿನಲ್ಲಿ ಮಹಾರಾಜ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ, ಮೈಸೂರಿಗೇ ಬಂದು ನೆಲಸಿದ, ನನಗೆ ತುಂಬ ಆತ್ಮೀಯರೂ ನಾನಾ ರೀತಿಯಲ್ಲಿ ನೆರವು ನೀಡುತ್ತಿದ್ದವರೂ ಆದ ಹೆಸರಾಂತ ಕಲಾವಿದ ಆರ್.ಎಸ್.ಎನ್. (ಆರ್.ಎಸ್.ನಾಯ್ಡು) ಅವರನ್ನು ಆಗಾಗ್ಗೆ ಭೇಟಿ ಮಾಡುತ್ತಿದ್ದೆ. ಸಂಧಿಸಿದಾಗಲೆಲ್ಲ ನಾನಾ ವಿಷಯಗಳ ಕುರಿತು ಚರ್ಚೆ ನಡೆಯುತ್ತಿತ್ತು. ತುಂಬ ಗ್ರಂಥಗಳನ್ನು ಓದಿ ಪರಿಪೂರ್ಣ ಪಾಂಡಿತ್ಯ ಪಡೆದಿದ್ದ ಹಾಗೂ ಆಂಗ್ಲಭಾಷೆಯಲ್ಲಿ ತಮ್ಮದೇ ಆದ ಮೋಡಿಹಿಡಿಸುವಂತಹ ವಿಶಿಷ್ಟ ಶೈಲಿಯಲ್ಲಿ ಸಂವಾದ ನಡೆಸುತ್ತಿದ್ದ ಅವರ ಮಾತುಗಳನ್ನು ಕೇಳಿದ ಯಾರಿಗೇ ಆಗಲಿ ಅಪಾರ ಜ್ಞಾನದ ರಸದೌತಣ ಉಂಡ ಸಂತೃಪ್ತಿ ಸಿಗುತ್ತಿತ್ತು.

ಹೀಗೆ ಒಮ್ಮೆ ನಾನು ಅವರನ್ನು ಭೇಟಿ ಮಾಡಿದಾಗ ಅದೂ-ಇದೂ ವಿಷಯಗಳ ಕುರಿತು ಮಾತನಾಡುತ್ತ "ನಿಮಗೆ ದೇವರಲ್ಲಿ ನಂಬಿಕೆ ಇದೆಯೆ?" ಎಂದು ಕೇಳಿದೆ. "ಹುಂ" ಎಂದರು. ನನಗೆ ಆಶ್ಚರ್ಯವಾಯಿತು. ಮಾರ್ಕ್ಸ್‌ವಾದಿ ಚಿಂತನೆಯಿಂದ ಪ್ರಭಾವಿತರಾಗಿದ್ದ ಅವರು ದೇವರಲ್ಲಿ ನಂಬಿಕೆ ಪಡೆದಿರುವುದು ಹೇಗೆ ಸಾಧ್ಯ? "ಅದು ಹೇಗೆ?" ನಾನು ಕೇಳಿದೆ. "ನನ್ನ ದೇವರು ಬೇರೆಲ್ಲರ ದೇವರಿಗಿಂತ ಭಿನ್ನ" ಎಂದರು ಅವರು. "ನನ್ನ ದೇವರು ನನ್ನನ್ನು ಸೃಷ್ಟಿಸಿದ ದೇವರಲ್ಲ. ನಾನೇ ಸೃಷ್ಟಿಸಿದ ದೇವರು. ನಾವು ಯಾವುದೇ ಕಾರ್ಯವನ್ನು ಕೈಕೊಂಡಾಗಲೂ ನಮ್ಮ ಮುಂದೆ ಒಂದು ಆದರ್ಶ, ಒಂದು ಗುರಿ ಇಟ್ಟುಕೊಳ್ಳುತ್ತೇವಲ್ಲವೆ? ಆ ಗುರಿ ಸಾಧಿಸಲು ನಾವು ಬಾಳ ಪರ್ಯಂತ ಸತತ ಪ್ರಯತ್ನಿಸುತ್ತ ಹೋಗುತ್ತೇವೆ. ಅದೇ ರೀತಿ ದೇವರೂ ಒಂದು ಆದರ್ಶ, ಒಂದು ಗುರಿ. ಅದು ಸಕಲ ಸದ್ಗುಣಗಳ ಸಾಕಾರ ಸ್ವರೂಪ, ನಮ್ಮ ಬಾಳಿನ ಗುರಿ. ಅದನ್ನು ಸಾಧಿಸುವುದೇ ನಮ್ಮ ಬಾಳಿನ ಧ್ಯೇಯ. ಆ ಸದ್ಗುಣಗಳನ್ನು ಎಷ್ಟರ ಮಟ್ಟಿಗೆ ನಾವು ನಮ್ಮ ಬಾಳಿನಲ್ಲಿ ಆಚರಣೆಗೆ ತರುತ್ತೇವೋ ಅಷ್ಟರ ಮಟ್ಟಿಗೆ ನಾವು ಆ ಗುರಿಯ, ಆದರ್ಶದ ಸಮೀಪ ಸಾಗುತ್ತೇವೆ. ಒಂದು ವೇಳೆ ನಾವು ನಮ್ಮ ದೇಹವನ್ನೇ ದೇಗುಲ ಮಾಡಿಕೊಂಡು, ಆ ಸಕಲ ಸದ್ಗುಣಗಳನ್ನೂ... ಪ್ರೀತಿ, ವಾತ್ಸಲ್ಯ, ಸಹನೆ, ಸೌಹಾರ್ದ, ಕೋಪರಾಹಿತ್ಯ ಇತ್ಯಾದಿ ಸಕಲ ಸದ್ಗುಣಗಳನ್ನು... ನಮ್ಮ ಬಾಳಿನಲ್ಲಿ ಆಚರಣೆಗೆ ತರುವುದರಲ್ಲಿ ಯಶಸ್ವಿಯಾದೆವೆನ್ನಿ, ಆಗ ನಾವೇ ದೇವರಾಗುತ್ತೇವೆ. ಇದೇ ಒಂದು ರೀತಿಯಲ್ಲಿ 'ಅಹಂ ಬ್ರಹ್ಮಾಸ್ಮಿ' ಅಲ್ಲವೆ?" ಎಂದರು ಆರ್.ಎಸ್.ಎನ್. ನಗುತ್ತ. ತಾವು ನೀಡಿದ ಉತ್ತರ ತತ್ತ್ವಶಾಸ್ತ್ರೀಯ, ವೈಚಾರಿಕ ಆಧಾರದ ಉತ್ತರವಲ್ಲ. ಆದರೆ, ಎಲ್ಲರೂ ಒಪ್ಪಬಹುದಾದಂಥ ಸಾರ್ವಮಾನ್ಯ ಉತ್ತರ ಎಂದು ಅವರೇ ವಿವರಣೆ ನೀಡಿದರು.

*(ನವಕರ್ನಾಟಕ ಪ್ರಕಾಶನದವರು ಪ್ರಕಟಿಸಿರುವ ಶ್ರೀಶಾಂತಾರಾಮ ಸೋಮಯಾಜಿ ಅವರ "ದೇವರೆಂಬ ಸುಳ್ಳು ಧರ್ಮವೆಂಬ ದ್ವೇಷ" ಗ್ರಂಥಕ್ಕೆ ಶ್ರೀ ಕೆ.ಎಲ್.ಗೋಪಾಲಕೃಷ್ಣರಾವ್ ಅವರು ಬರೆದಿರುವ ಮುನ್ನುಡಿಯಿಂದ ಆರಿಸಿದ ಭಾಗ.)*



# ಆರ್.ಎಸ್.ಎನ್. ನೆನಪು

■ *ಕನಕಾಮೂರ್ತಿ*

ಶ್ರೀ ಡಿ. ವಾದಿರಾಜರಲ್ಲಿ ಶಿಲ್ಪಕಲೆಯನ್ನು ಪ್ರಾರಂಭಿಸಿದಾಗ ಅವರಿಗೆ ಆಗಾಗ ಶ್ರೀ ಆರ್.ಎಸ್.ನಾಯ್ಡು ಅವರಿಂದ ಪತ್ರಗಳು ಬರುವುದನ್ನು ನೋಡುತ್ತಿದ್ದೆ. ವರ್ಷಕ್ಕೆ ಒಂದೆರಡಾದರೂ ಬರುತ್ತಿದ್ದವು. ಅದರಲ್ಲಿ ಬರವಣಿಗೆಗಿಂತಲೂ ರೇಖಾಚಿತ್ರಗಳೇ ಹೆಚ್ಚಾಗಿರುತ್ತಿದ್ದವು. ಕೆಲವೊಮ್ಮೆ ಬರೀ ರೇಖಾಚಿತ್ರಗಳೇ, ಅಂತಹ ಕಾಗದ ಬಂದಾಗ ವಾದಿರಾಜರಿಗೆ ಹೆಚ್ಚಿನ ಸಂತೋಷವಾಗುತ್ತಿತ್ತು. ಸುಮಾರು ಮೂರು ನಾಲ್ಕು ವರ್ಷಗಳು ಮಡಿವಾಳದಲ್ಲಿ ಒಟ್ಟಿಗೇ ಇದ್ದುದರಿಂದ ಇಬ್ಬರೂ ಪರಸ್ಪರ ಚೆನ್ನಾಗಿ ಅರಿತುಕೊಂಡಿದ್ದರು. ಸಮಾನ ಮನೋಭಾವ ಹೊಂದಿದ್ದರು. ನಾಯ್ಡು ಅವರ ಕಾಗದಗಳನ್ನು ಹತ್ತಿರವೇ ಇಟ್ಟುಕೊಂಡು ಪರಿಚಿತರಿಗೆಲ್ಲಾ ಬಹಳ ಸಂತೋಷದಿಂದ ತೋರಿಸುತ್ತಿದ್ದರು. ಅವರ ಪ್ರಭಾವೀ ರೇಖೆಗಳನ್ನು ನೋಡಿ ನೋಡಿ ಆನಂದಿಸುವುದೂ, ಅದನ್ನು ಹೊಗಳುವುದೆಂದರೆ ವಾದಿರಾಜರಿಗೆ ಪ್ರಿಯವಾದ ಕೆಲಸವಾಗಿತ್ತು.

ವಾದಿರಾಜರು ಮಡಿವಾಳದಲ್ಲಿದ್ದಾಗ ಆರ್.ಎಸ್.ಎನ್. ಕೂಡ ಅವರ ಜೊತೆಯಲ್ಲೇ ಇದ್ದರು. ಹರಿಹರನ್‌ರವರು ಇಂತಹ ಇಬ್ಬರು ಪ್ರತಿಭಾವಂತರಿಗೆ ಜಾಗ ಕೊಟ್ಟಿದ್ದಲ್ಲದೇ ಅವರಿಬ್ಬರ ಸ್ನೇಹವನ್ನೂ ಬಹಳ ಗೌರವಿಸುತ್ತಿದ್ದರು. ಆ ಸಮಯದಲ್ಲಿ ವಾದಿರಾಜರು ಮಣ್ಣಿನಲ್ಲಿ ಕಲಾಕೃತಿಗಳನ್ನು ರಚಿಸಿ, ಅದನ್ನು ಪ್ಲಾಸ್ಟರ್ ಆಫ್ ಪ್ಯಾರಿಸ್ ಮಾಧ್ಯಮಕ್ಕೆ ವರ್ಗಾಯಿಸಿ ಅದನ್ನು ಮಾರಿ ಅದರಿಂದಲೇ ಜೀವನ ಸಾಗಿಸುತ್ತಿದ್ದರು. ನಾಯ್ಡುರವರು ಸಹ ಇದೇ ರೀತಿ ಕಲಾಕೃತಿಗಳನ್ನು ರಚಿಸಿದರೆ, ಅದರ ಅಚ್ಚು ತೆಗೆದು ಪ್ಲಾಸ್ಟರ್‌ಗೆ ಬದಲಾಯಿಸಿ ಕೊಡುವ ಕೆಲಸವನ್ನು ವಾದಿರಾಜರು ಬಹಳ ಆಸಕ್ತಿಯಿಂದ ಮಾಡುತ್ತಿದ್ದರು. ಆಗ ವಾದಿರಾಜರು ಸಹ ಬರೀ ಸಂಪ್ರದಾಯ ಶೈಲಿಗಳಿಗೆ ಪೂರ್ಣ ಮಾರುಹೋಗಿರಲಿಲ್ಲ. ಆ ಮೂರುನಾಲ್ಕು ವರ್ಷಗಳು ಬಹಳ ಚೆನ್ನಾಗಿತ್ತು ಎಂದು ವಾದಿರಾಜರು ಆಗಾಗ ನೆನೆಯುತ್ತಿದ್ದರು.

ನಾಯ್ಡು ಅವರಿಗೆ ಆಗಾಗ ಹೊಟ್ಟೆಯ ನೋವು ಬರುತ್ತಿತ್ತಂತೆ. ಹಾಗಾಗಿ ಹೊರಗಿನ ಊಟ ತಿಂಡಿಗಳನ್ನು ಅಷ್ಟಾಗಿ ತೆಗೆದುಕೊಳ್ಳುತ್ತಿರಲಿಲ್ಲವಂತೆ. ಅಪರೂಪಕ್ಕೆ ಆಗೊಮ್ಮೆ ಈಗೊಮ್ಮೆ ವಾದಿರಾಜರ ಮನೆಯಲ್ಲಿ ಊಟ ಮಾಡುತ್ತಿದ್ದರಂತೆ, ಇವರ ಮನೆಯಲ್ಲಿ ಏನೇ ತಿಂದರೂ ಹೊಟ್ಟೆ ನೋವು ಬರುವುದಿಲ್ಲ ಎಂದು ನಾಯ್ಡು ಹೇಳುತ್ತಿದ್ದರಂತೆ. ಶ್ರೀಮತಿ ವಾದಿರಾಜರು ಮಾಡುತ್ತಿದ್ದ ದೋಸೆಯನ್ನು ಯಾವಾಗಲೂ ಮೆಚ್ಚುತ್ತಿದ್ದರೆಂದು ವಾದಿರಾಜರು ನೆನೆಯುತ್ತಿದ್ದರು.

ಪರಸ್ಪರ ಮೆಚ್ಚುಗೆ ಇದ್ದ ಈ ಇಬ್ಬರು ಕಲಾವಿದರಿಗೂ ತಾವು ರಚಿಸುತ್ತಿದ್ದ ಕಲಾಕೃತಿಗಳೂ ಪರಸ್ಪರ ಮೆಚ್ಚುಗೆಯಾಗುತ್ತಿದ್ದುವು. ಒಮ್ಮೆ ನಾಯ್ಡುರವರು ಒಂದು ನಟರಾಜನ ವಿಗ್ರಹಮಾಡಿ, ಅದರಲ್ಲೂ ನಟರಾಜ

ಮೆಟ್ಟಿನಿಂತ ರಾಕ್ಷಸನನ್ನು ತುಳಿಯುವುದನ್ನು ಮಗುವೆಂದು ಭಾವಿಸಿ, ಅದನ್ನು ಮಾತ್ರ ಬಹಳ ಸುಂದರವಾಗಿ ಮಾಡಿದ್ದರಂತೆ. ನಟರಾಜ ಮಗುವನ್ನೇಕೆ ತುಳಿಯಬೇಕೆಂಬ ಸಂದೇಹ ಬೇರೆ, ಜೊತೆಗೆ ಸಂಪ್ರದಾಯ ಶೈಲಿಯಂತೆ ದೇಹ ಭಾವವನ್ನು ಮಾಡದೆ ತದ್ರೂಪ ರೀತಿಯಲ್ಲಿ (Realistic) ಮಾಡಿ, ವಾದಿರಾಜರಿಗೆ ತೋರಿಸಿದಾಗ, ಅದು ಮಗುವಲ್ಲವೆಂದೂ ರಾಕ್ಷಸನೆಂದೂ ಹೇಳಿದರಂತೆ. ಅದಾದ ಸ್ವಲ್ಪ ಸಮಯದ ನಂತರ ವಾದಿರಾಜರು ತಮ್ಮ ಮನೆಯಲ್ಲಿ ಕೆಲಸ ಮಾಡುತ್ತಿದ್ದಾಗ, ನಾಯ್ಡುರವರ ಕೊಠಡಿಯಿಂದ ದಢಾರ್ ಎಂದು ಬಿದ್ದ ಶಬ್ದ ಕೇಳಿಸಿತಂತೆ, ಹೋಗಿ ನೋಡಿದರೆ ನಾಯ್ಡು ಬೇಸರದಲ್ಲಿದ್ದರಂತೆ. ಇವರಿಗೆ ಏನೂ ಅರ್ಥವಾಗಲಿಲ್ಲವೆಂದರು.

ವಾದಿರಾಜರು ನಾಯ್ಡುರವರೊಡನಿದ್ದಾಗ ನಡೆದ ಪ್ರಸಂಗವನ್ನು ಆಗಾಗ ನೆನೆಯುತ್ತಿದ್ದರು. ನಾಯ್ಡುರವರ ಹಿರಿಯ ಸಹೋದರ (ಜಗಪತಿನಾಯ್ಡು ಎಂಬ ಹೆಸರು) ತಮ್ಮನಿಗೆ ಒಂದು ಸೈಟು ಕೊಡಿಸುವುದಾಗಿಯೂ ಅದರಲ್ಲಿ ಇಷ್ಟ ಬಂದಂತೆ ಮನೆ ಕಟ್ಟಿಕೊಳ್ಳಲು ತಯಾರಿ ನಡೆಸಿಕೊಳ್ಳಲು ಹೇಳಿದ್ದರಂತೆ. ಸರಿ ನಾಯ್ಡು ಅವರಿಗೆ ಬರೀ ಮನೆಯದೇ ಕನಸು. ಮನೆ ಹೇಗಿರಬೇಕು, ಕೆಲಸಮಾಡಲು, ಗಾಳಿ ಬೆಳಕು ಚೆನ್ನಾಗಿರಬೇಕು, ಸ್ಟೂಡಿಯೋ ಹೇಗಿರಬೇಕು ಎಂದೆಲ್ಲಾ ಯೋಚಿಸುತ್ತ ವಾದಿರಾಜರೊಡನೆ ಸಮಾಲೋಚನೆ ಮಾಡುತ್ತ, ಕಲ್ಪನೆಯಲ್ಲಿಯೇ ಬಹಳ ಸಂತೋಷಪಡುತ್ತಿದ್ದರಂತೆ. ಒಂದೆರಡು ತಿಂಗಳು ಕಳೆದ ಮೇಲೆ, ಅಣ್ಣನವರು, ಸೈಟ್ ಕೊಳ್ಳಲು ಆಗುವುದಿಲ್ಲವೆಂದು ಕ್ಷಮೆ ಕೋರಿ ಕಾಗದ ಬರೆದರಂತೆ. ಅದಕ್ಕೆ ಉತ್ತರವಾಗಿ ನಾಯ್ಡು "ಮನೆ ಆಗುವುದೋ ಇಲ್ಲವೋ ಅದಲ್ಲ ಮುಖ್ಯ, ಈ ಎರಡು ತಿಂಗಳ ಅದರ ಕಲ್ಪನೆಯೇ ನನಗೆ ಎಷ್ಟೊಂದು ಸಂತೋಷ ಕೊಟ್ಟಿದೆ, ಅದಕ್ಕಿಂತ ಇನ್ನೇನು ಬೇಕು" ಎಂದು ಅಣ್ಣನವರಿಗೆ ಉತ್ತರ ಬರೆದರಂತೆ. ಆ ಎರಡು ತಿಂಗಳ ಸಂತೋಷ ಏನುಕೊಟ್ಟರೆ ತಾನೆ ಸಿಗುತ್ತದೆ ಎಂಬ ನಾಯ್ಡುರವರ ಮನೋಭಾವವನ್ನೂ ವಾದಿರಾಜರು ಬಹಳ ಮೆಚ್ಚಿದ್ದಲ್ಲದೆ, ಆಗಾಗ ಆ ಪ್ರಸಂಗವನ್ನು ನೆನೆಯುತ್ತಲೇ ಇದ್ದರು.

ನಾಯ್ಡುರವರ ಕೊನೆಯ ದಿನಗಳಲ್ಲಿ ಕ್ಯಾನ್ಸರ್‌ನಿಂದ ಬಳಲುತ್ತಿದ್ದು ವಿಕ್ಟೋರಿಯ (ಬೆಂಗಳೂರಿನ) ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯಲು ಬಂದಿದ್ದರಂತೆ. ವಿಷಯ ತಿಳಿದ ವಾದಿರಾಜರು ಕೂಡಲೇ ಅವರನ್ನು ಹೋಗಿ ನೋಡಿ, ಪರಸ್ಪರ ಸುಖದುಃಖಗಳನ್ನು ಹಂಚಿಕೊಂಡರಂತೆ. ಮಾರನೆಯ ಬೆಳಿಗ್ಗೆಯೇ ನಾಯ್ಡುರವರು, ಆಸ್ಪತ್ರೆಯವರ ಅನುಮತಿ ಪಡೆದು ವಾದಿರಾಜರ ಮನೆಗೇ ಬಂದರಂತೆ, ಸುಮಾರು ಒಂದು ಗಂಟೆಯಕಾಲ ಮಾತನಾಡುತ್ತಿದ್ದು ಶ್ರೀಮತಿ ವಾದಿರಾಜರ ಕೈಯಿನ ದೋಸೆಯನ್ನೂ ತಿಂದು ಹೊರಟರಂತೆ. ನಾನು ವಾದಿರಾಜರ ಮನೆಗೆ ಹೋಗುವ ವೇಳೆಗೆ ನಾಯ್ಡು ಹೊರಟುಹೋಗಿದ್ದರು. ವಾದಿರಾಜರು ಬಹಳ ಸಂತೋಷದಲ್ಲಿದ್ದರು. ವಿಷಯ ತಿಳಿದಾಗ ನಾಯ್ಡುರವರನ್ನು ನೋಡುವ ಭಾಗ್ಯ ನನಗೆ ಸಿಗಲಿಲ್ಲವಲ್ಲ ಎಂಬ ಕೊರಗು ಮಾತ್ರ ನನಗೆ ಉಳಿಯಿತು.





# ಕುಂಚಬ್ರಹ್ಮ ಆರ್.ಎಸ್.ಎನ್.

■ *ರವೀಂದ್ರನಾಥ್ ಅನಕೃ*

**ಆರ್**.ಎಸ್.ಎನ್. ಎಂದರೆ, ಆರ್. ಸೀತಾಪತಿ ನಾಯ್ಡು ಅವರ ಸಂಕ್ಷಿಪ್ತ ನಾಮ. ಕೈಲಾಸಂ ಅವರು ಹೇಗೆ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮ ಅದ್ಭುತ ಪ್ರತಿಭೆಯಿಂದ ಪ್ರಭೃತಿಯಾಗಿ ಮಿಂಚಿದರೋ, ಹಾಗೆಯೇ ಚಿತ್ರಲೋಕದಲ್ಲಿ ಆರ್.ಎಸ್.ಎನ್. ಪ್ರಜ್ವಲಿಸಿದರು. ಜೀವನ ವೈಚಿತ್ರ್ಯ, ಕುಟುಂಬದ ಉತ್ತಮ ಪರಂಪರೆ, ಸಾಹಿತ್ಯ ಅಥವಾ ಕಲಾಲೋಕಕ್ಕೆ ದಿಢೀರನೆ ಪ್ರವೇಶಿಸಿ– ನಿರ್ಗಮಿಸಿದ ರೀತಿ, ಮಿಂಚಿನ ವೇಗದ ಚಿಂತನಶಕ್ತಿ, ಕರುಣೆ ಲೇಪಿಸಿದ–ವ್ಯಂಗ್ಯತೆಯ ಜೀವನ ದೃಷ್ಟಿ, ಇಬ್ಬರು ಗಣ್ಯರಲ್ಲೂ ಹೋಲಿಕೆಯಾಗುತ್ತದೆ. ಆರ್.ಎಸ್.ಎನ್. ಚಿತ್ರಕಲೆಯಲ್ಲಿ ವರ್ಣಚಿತ್ರ, ಭಾವಚಿತ್ರ, ಶಿಲ್ಪಗಳಲ್ಲಿ ಕೈ ಆಡಿಸಿದ್ದರೂ ಅವರ ಹೆಸರು ಚಿರಸ್ಥಾಯಿಯಾಗಿ ನಿಲ್ಲುವುದು ಕಪ್ಪು–ಬಿಳುಪು (black and white art) ಚಿತ್ರಕಲೆಯಲ್ಲಿ. ಆ ಮಾಧ್ಯಮ ಅವರಿಗೆ ಸಿದ್ಧಿಸಿದಷ್ಟು ಯಾರಿಗೂ ಸಿದ್ಧಿಸಿಲ್ಲವೆಂದು ನನ್ನ ಭಾವನೆ.

ನನ್ನ ತಂದೆ ತಮ್ಮ ಆತ್ಮಕಥೆ 'ಬರಹಗಾರನ ಬದುಕು' ಗ್ರಂಥದಲ್ಲಿ (ಪುಟ ೧೭೭) ಹೀಗೆ ಹೇಳಿದ್ದಾರೆ:

"ಆರ್.ಎಸ್.ಎನ್. (ಆರ್.ಎಸ್. ನಾಯ್ಡು) ಅವರನ್ನು ಚಿತ್ರರಂಗದ ಧೂಮಕೇತು ಎಂದು ಕರೆಯಬಹುದು. ಇವರು ವೃತ್ತಿಚಿತ್ರಗಾರರಲ್ಲ. ಆದರೆ ಇವರ ಜೀವನವೇ ಒಂದು ಚಿತ್ರಮಯ. ಗೆಳೆಯರಿಗೆ ಒಂದು ಕಾರ್ಡು ಬರೆದರೂ ಅದರಲ್ಲಿ ಒಂದು ಚಿತ್ರವಿರುತ್ತದೆ. ರೇಖಾಚಿತ್ರಗಳು, ವ್ಯಂಗ್ಯಚಿತ್ರಗಳಲ್ಲಿ ಆರ್.ಎಸ್.ಎನ್. ಅವರದು ಎತ್ತಿದ ಕೈ. ವರ್ಣಗಳನ್ನು ಬಳಸದೆ ಕೇವಲ ರೇಖೆಗಳಲ್ಲಿ ತಮ್ಮ ಕಲ್ಪನೆಯನ್ನು ಪೂರ್ಣವಾಗಿ ಅಭಿವ್ಯಕ್ತಿ ಮಾಡುವ ಶಕ್ತಿ ಇವರಿಗಿದೆ.

ಭಾರತೀಯ ಚಿತ್ರಕಲೆಯ ಬಗ್ಗೆ ಆರ್.ಎಸ್.ಎನ್. ಅವರಿಗೆ ಸದಭಿಪ್ರಾಯವಿರಲಿಲ್ಲ. ಅವರ ಕಲೆಯ ಮೇಲೆ ಪಾಶ್ಚಾತ್ಯ ಚಿತ್ರಗಾರರ ಪ್ರಭಾವ ಮೂಡಿದೆ.

ಆರ್.ಎಸ್.ಎನ್. ಉತ್ತಮ ಚಿತ್ರಗಾರರಾಗಿರುವಂತೆ, ಉತ್ತಮ ಲೇಖಕರೂ, ಮಾತುಗಾರರೂ ಆಗಿದ್ದಾರೆ. ಇವರ ಹಾಗೆ ಇಂಗ್ಲಿಷ್ ಮಾತನಾಡುವವರು ಬಹಳ ವಿರಳ.

ನನ್ನ ಹಿರಿಯ ಮಗ ರವೀಂದ್ರನಾಥ್(ಬಾಬು) ಕಲಾಭಿಮಾನಿ. ಇವನೂ ಚಿತ್ರಕಲೆಯಲ್ಲಿ ಕೈಯಾಡಿಸಿದ್ದಾನೆ. ಕಲೆಯ ಅನುಕರಣ ಬಾಬುವಿನ ಕಲೆಯಲ್ಲಿ ಸುಸ್ಪಷ್ಟವಾಗಿದೆ. ಬಾಬುವಿನ ರೇಖಾವಿನ್ಯಾಸಕ್ಕೆ ಬೆರಗಾಗಿ ಆರ್.ಎಸ್. ಎನ್. ಅವನಿಗೆ ಕೆಲವು ಕಾಲ ಪಾಠ ಹೇಳಿದರು. ಇಂದಿಗೂ ಈ ಶಿಷ್ಯನನ್ನು ಕಂಡರೆ ಆರ್.ಎಸ್. ಎನ್. ಅವರಿಗೆ ಅಪಾರ ಪ್ರೇಮ.

ಆರ್.ಎಸ್.ಎನ್. ಜೀವನದಲ್ಲಿ ತುಂಬ ಕಹಿಯುಂಡಿದ್ದಾರೆ. ಇವರ ಆರೋಗ್ಯವೂ ಅಷ್ಟಕ್ಕಷ್ಟೆ. ಆದರೆ ಇವರು ಕಲೆಯಲ್ಲಿ ಕಹಿ ಬೆರೆಸುವುದಿಲ್ಲ. ಇವರ ಕೃತಿಗಳಲ್ಲಿ ಸೊಗಸಾದ ಹಾಸ್ಯವಿದೆ. ಆದರದು ಸಾಮಾನ್ಯರಿಗೆ ಅರ್ಥವಾಗುವ ಹಾಸ್ಯವಲ್ಲ– ಅಭಿಜಾತ ವರ್ಗಕ್ಕೆ ಸೇರಿದ್ದು..."

**ಅದು ೧೯೫೦ರ ಕಾಲ**

ಒಂದು ಬೆಳಿಗ್ಗೆ. ಹತ್ತು ಗಂಟೆ ಸಮಯ.

ಒಬ್ಬ ಮಧ್ಯ ಎತ್ತರದ ವ್ಯಕ್ತಿ, ಸೂಕ್ಷ್ಮ ಕಣ್ಣಿನ ಚಕ್ಷುಧಾರಿ, ಕಪ್ಪು–ಬಿಳುಪು ಬೆರೆತ ಗಡ್ಡ, ಒಂದು ಊರುಗೋಲು (ಅದು ಬೀಸುಗೋಲು), ಎದೆಗೆ ಅಡ್ಡಪಟ್ಟಿ ಹಾಕಿ ತೂಗುಬಿಟ್ಟಿದ್ದ ಚೀಲ. ಬಿಸಿಲು ತಾಪಕ್ಕೆ ಸುಟ್ಟ ಚರ್ಮದ ಮೇಲ್ಮೈ–ನಮ್ಮ ಮನೆಗೆ ದಯಮಾಡಿತು.

ತಂದೆಯವರೊಡನೆ ಮೊದಲ ಬೇಟಿ. ಘಂಟೆಗಟ್ಟಲೆ ಆತ್ಮೀಯ ಮಾತುಕತೆಯ ಧಾರೆ. ಒಬ್ಬರನ್ನೊಬ್ಬರು ಪರಸ್ಪರ ಆಳವನ್ನು ಅಳೆದು–ಮನಸ್ಸು–ಆತ್ಮ ಒಂದಾಗುವ ರಸಘಳಿಗೆ–ಅವ್ಯಾಹತವಾಗಿ ಸಂಭಾಷಣೆ ನಡೆದಿತ್ತು.

ನಂತರ ಕಾಫಿ ತೆಗೆದುಕೊಂಡು ನಾನು ತಂದೆಯವರ ಕೊಠಡಿ ಪ್ರವೇಶಿಸಿದೆ. ಕೂಡಲೆ ತಂದೆಯವರು ನನ್ನ ಪರಿಚಯ ಮಾಡಿಕೊಟ್ಟರು. ಆ ಪರಿಚಯ ನಮ್ಮನ್ನು ಒಂದು ದಶಕಗಳ ಕಾಲ ಬೆಸೆದಿತ್ತು.

**ಮುರುಕು ಮನೆ**

ಅಂದೇ.. ಆರ್.ಎಸ್.ಎನ್. ತಮ್ಮೊಡನೆ ನನ್ನನ್ನು ತಾವು ವಾಸಿಸುತ್ತಿದ್ದ ಸಣ್ಣ ಮನೆಗೆ ಬಸ್ಸಿನಲ್ಲಿ ಮಡಿವಾಳಕ್ಕೆ ಕರೆದೊಯ್ದರು. ಅದು ಹೆಂಚಿನ ಸಣ್ಣ ಮುರುಕು ಮನೆ–ಕಿತ್ತು ಹೋದ ಬಾಗಿಲು–ಒಳಗೆ ಗಾಳಿ ಬೆಳಕು ಪ್ರವೇಶಿಸಲು ಹೆಚ್ಚು ಅವಕಾಶವಿರಲಿಲ್ಲ. ಸುತ್ತಲೂ ಸಗಣಿ, ಕೊಳಚೆಯ ನಾತ. ನೆಲದ ಮೇಲೆ ಅಲ್ಲಲ್ಲಿ ಅರ್ಧಂಬರ್ಧ ಮಾಡಿದ ಪ್ಲಾಸ್ಟರ್ ಕೃತಿಗಳು, ಜೇಡಿಮಣ್ಣಿನ ಗುಡ್ಡೆಯ ಕೆಲವು ಶಿಲ್ಪ ಕಡೆಯುವ ಸಾಧನಗಳು ಬಿದ್ದಿದ್ದವು.

ಅಲ್ಲಿ ಶಿಲ್ಪಿ ವಾದಿರಾಜರು ತಮ್ಮ ಶಿಲ್ಪ ಕಡೆಯುವ ಕೆಲಸದಲ್ಲಿ ಮಗ್ನರಾಗಿದ್ದರು. ಆರ್.ಎಸ್. ಎನ್. ಅವರು ನನಗೆ ವಾದಿರಾಜರ ಪರಿಚಯ ಮಾಡಿಕೊಟ್ಟರು. ಏನೆಲ್ಲಾ ಮಾತುಕತೆ–ಶಿಲ್ಪ ಮಾಧ್ಯಮ–ತಂತ್ರ, ಭಾರತೀಯ ಶಿಲ್ಪಕಲಾ ಸಂಪ್ರದಾಯ– ಇತ್ಯಾದಿ. ಒಂದೆರಡು ಗಂಟೆಯ ನಂತರ ಅವರಿಂದ ಬೀಳ್ಕೊಂಡು ಹಿಂದಿರುಗಿದೆ. ಅಂದಿನಿಂದ ಆರ್.ಎಸ್.ಎನ್. ಅವರನ್ನು ಭೇಟಿಯಾಗದ ದಿನವೇ ಇರಲಿಲ್ಲ.

ಆರ್.ಎಸ್.ಎನ್. ವಯಸ್ಸಿನಲ್ಲಿ ನನಗಿಂತ ಬಹಳ ಹಿರಿಯರು. ಆದರೂ ನನ್ನನ್ನು ಮಾತನಾಡಿಸುವಾಗ ಅತ್ಯಂತ ಗೌರವಾದರ ತೋರಿಸುತ್ತಿದ್ದರು. ಅವರ ಒಂದೊಂದು ಕೃತಿಯೂ ಹೊರಬೀಳುವುದನ್ನು ಚಾತಕ ಪಕ್ಷಿಯಂತೆ ಕಾದು ಸಂಗ್ರಹಿಸುತ್ತಿದ್ದೆ–ಅನುಕರಿಸುತ್ತಿದ್ದೆ. ಅವುಗಳ ಹಿಂದೆ ಇದ್ದ ವಿಚಾರವಂತಿಕೆ, ಅವರ ಶೈಲಿಯ ವೈಶಿಷ್ಟ್ಯಗಳನ್ನು ಸೂಕ್ಷ್ಮವಾಗಿ ಅರ್ಥಮಾಡಿಕೊಳ್ಳಲು ಯತ್ನಿಸುತ್ತಿದ್ದೆ.

ಆಗ ಅವರ ಚಿತ್ರಗಳು ಹೆಚ್ಚು ಪ್ರಕಟವಾಗುತ್ತಿದ್ದುದು–ಜನಪ್ರಗತಿ, ಪ್ರಜಾವಾಣಿ, ಡೆಕ್ಕನ್ ಹೆರಾಲ್ಡ್ ಪತ್ರಿಕೆಗಳಲ್ಲಿ. ಅವೆಲ್ಲವೂ ಬಹುಮಟ್ಟಿಗೆ ವ್ಯಕ್ತಿಚಿತ್ರಗಳಾಗಿರುತಿದ್ದವು. ಅವರು ರಚಿಸಿದ ಬರ್ಟ್ರಂಡ್ ರಸೆಲ್, ಕೈಲಾಸಂ, ರಾಧಾಕೃಷ್ಣನ್, ಗಾಂಧೀಜಿ ಚಿತ್ರಗಳು ಇನ್ನೂ ನನ್ನ ಸ್ಮೃತಿಯಲ್ಲಿ ಅಚ್ಚಳಿಯದಂತೆ ಉಳಿದಿದೆ.

ಆರ್.ಎಸ್.ಎನ್. ಅವರ ತೂಗು ಚೀಲದಲ್ಲಿ ಯಾವಾಗಲೂ ವಿವಿಧ ಅಳತೆಯ ಕುಂಚಗಳು, ನಿಬ್ಬುಗಳು, ಡ್ರಾಯಿಂಗ್ ಹಾಳೆಗಳು ತುಂಬಿರುತ್ತಿದ್ದವು. ಪ್ರೆಸ್‌ಗಳಿಗೆ ಬೆಳಗಿನ ಹೊತ್ತು ಸುತ್ತಾಡಿ ಬಂದು ಹಿಂದಿನ ದಿವಸದ ಪತ್ರಿಕೆಗಳನ್ನು ಅಲ್ಲೇ ತಿರುವಿ ಹಾಕಿ, ಕೂತಲ್ಲೇ ವ್ಯಂಗ್ಯಚಿತ್ರ ಬರೆದು, ಮುದ್ರಣಕ್ಕೆ ಒಗೆದು ಬಂದುಬಿಡುತ್ತಿದ್ದರು. ಮಾರನೆ ದಿವಸ ಅವು ಮುದ್ರಣವಾಗಿ ಲಕ್ಷಾಂತರ ಓದುಗರ ಕೈಲಿರುತ್ತಿದ್ದವು. ಆ ಚಿಂತನೆಯ ವೇಗ, ನಿತ್ಯದ ಸಾಮಾಜಿಕ, ರಾಜಕೀಯ, ಆರ್ಥಿಕ ವಿಷಯಗಳನ್ನು ಮಂಥಿಸಿ, ಅವಕ್ಕೆ ವ್ಯಂಗ್ಯದ ಲೇಪಮಾಡಿ–ಶ್ರೇಷ್ಠಮಟ್ಟದ ಚಿತ್ರರೂಪ ಕೊಡಬೇಕಾದರೆ, ಅದರ ಹಿಂದೆ ಎಷ್ಟು ವರ್ಷಗಳ ಸಾಧನೆ–ಸಂಸ್ಕಾರ, ಚಿತ್ರೀಕರಿಸಬಲ್ಲ ಸಿದ್ಧಿ ಇವರಲ್ಲಿರಬೇಕು?

ಆಗಾಗ ಪುಸ್ತಕಗಳ ಮುಖಪುಟಕ್ಕೆ ಚಿತ್ರರಚಿಸಲು ಬೇಡಿಕೆ ಬರುತ್ತಿತ್ತು. ಅನಕೃ ಅವರ ಸಂಗ್ರಾಮ, ರುಕ್ಮಿಣಿ, ಮುಯ್ಯಿಗೆ ಮುಯ್ಯಿ, ವೈ ಎನ್ ಕೆ ಅವರ ಜಾಕ್‌ಲಂಡನ್, ಡಿವಿಜಿ ಅವರ ಚುನಾವಣೆ ವಿಡಂಬನ ಕಾವ್ಯಕ್ಕೆ- ಅದ್ಭುತ ಚಿತ್ರಗಳನ್ನು ಆರ್.ಎಸ್. ಎನ್. ರಚಿಸಿದರು.

ಇದರ ಜೊತೆಯಲ್ಲಿಯೇ ಶಿಲ್ಪರಚನೆಯ ಕೆಲಸವೂ ಸಾಗಿತು. ಅದಕ್ಕೆ ಮುಖ್ಯಪ್ರೇರಣೆ ಶಿಲ್ಪಿ ವಾದಿರಾಜರು. ವಾದಿರಾಜರದು ಪ್ರಮುಖವಾಗಿ ಭಾರತೀಯ ಶಿಲ್ಪ ಸಂಪ್ರದಾಯ. ಅವರ ದೇವತಾಮೂರ್ತಿಗಳು ಶಿಲ್ಪಶಾಸ್ತ್ರಾನುಸಾರ, ನಾಜೂಕಿನ-ಕುಸರಿ ಕೆಲಸಗಳನ್ನೊಳಗೊಂಡ ಶಿಲ್ಪಗಳಾಗಿರುತ್ತಿದ್ದವು. ಈ ಶೈಲಿಯನ್ನೇ ಮೈಗೂಡಿಸಿಕೊಂಡು ರಾಷ್ಟ್ರ-ಅಂತರಾಷ್ಟ್ರೀಯ ಮಟ್ಟದ ಖ್ಯಾತಿ ಗಳಿಸಿದವರು ವಾದಿರಾಜರು. ಆದರೆ ಆರ್.ಎಸ್.ಎನ್. ಅವರದ್ದು ಬಹುವೇಗದ, ತೀಕ್ಷ್ಣ ಮನೋಭಾವ. ತಾಳ್ಮೆಯಿಂದ ಮಾಡುವ ಕುಸರಿ ಕೆಲಸ ಅವರ ಮೈಗೆ ಒಗ್ಗದು. ತನ್ನ ಮನೋವೇಗಕ್ಕೆ ಹೊಂದುವ ಶೈಲಿಯನ್ನೇ ಸೃಷ್ಟಿಸಿಕೊಂಡಿದ್ದರು. ಅವರು ಆಗಿನ ದಿನಗಳಲ್ಲಿ ರಚಿಸಿದ ಕೃತಿಗಳೆಂದರೆ, ಶಿವ, ಜೀಸಸ್, ಮ್ಯಾನ್ ಆಫ್ ಸಾರೋಸ್ (ಮುಳ್ಳಿನ ಕಿರೀಟ ಧರಿಸಿದ ಜೀಸಸ್) ಮಟ್ಟತಳದ (Bas-relief) ಶಿಲ್ಪ. ಗಾಂಧಾರ ಶೈಲಿಯಲ್ಲಿ ಬುದ್ಧ ಮತ್ತು ಕ್ಯುಬಿಸ್ಟ್ ಶೈಲಿಯ ಬರ್ನಾರ್ಡ್‌ಷಾ. ಒಂದೊಂದರಲ್ಲೂ ವೈವಿಧ್ಯ, ಪ್ರವೀಣಶಿಲ್ಪಿಯ ಕೈವಾಡ, ಜೇಡಿಮಣ್ಣು ಅಥವಾ ಪ್ಲಾಸ್ಟರ್‌ನ ವಸ್ತುಗುಣ ಪ್ರತಿಬಿಂಬಿಸುವಂತಹ ಚಮತ್ಕಾರ-ಎಲ್ಲದರ ಮೇಲೆ ತನ್ನ ಕಲಾವೈಶಿಷ್ಟ್ಯದ ಮುದ್ರೆ. ಆ ದಿನಗಳಲ್ಲಿ...... ಒಂದು ದಿವಸ-ಬೆಳಿಗ್ಗೆ ೧೧ ಗಂಟೆ. ತಂದೆಯವರು ನನ್ನನ್ನೂ, ತಾಯಿಯವರನ್ನೂ "ಬನ್ನಿ, ಒಂದು ತಮಾಷೆ ತೋರಿಸುತ್ತೇನೆ" ಎಂದು ಕರೆದರು. ಹೊರಗೆ ಮೇಜಿನ ಮೇಲೆ ಒಂದು ಪ್ಲಾಸ್ಟರ್ ಪ್ರತಿಮೆ ನಿಂತಿತ್ತು.

"ಇದು ಯಾರು ಹೇಳಿ?" ಎಂದರು. ಎಷ್ಟೋ ಹೊತ್ತು ನಾವು ದೃಷ್ಟಿಸಿ ನೋಡಿ, ಗುರುತಿಸಲಾಗದೆ ಸೋತೆವು. ಆದರೆ ಎಲ್ಲೋ ಏನೋ ನೋಡಿದ ಹಾಗೆ ಒಳಮನಸ್ಸು ಕೂಗುತ್ತಿತ್ತು.

ಆಗ ತಂದೆಯವರೆಂದರು.-

"ಇದು ಆರ್.ಎಸ್.ಎನ್. ಅವರ ಷಾ!" ನೋಡಿ ಹೇಗಿದೆ ಕ್ಯುಬಿಸ್ಟ್ ಶೈಲಿಯಲ್ಲಿ ಎಂದರು.

ಆಗ ನಾವು ಒಕ್ಕೊರಲಿನಲ್ಲಿ "ಅರೆ ಹೌದು" ಎಂದೆವು. ಬರ್ನಾರ್ಡ್‌ಷಾನ ದಪ್ಪ ಚಾಚಿತ ಹುಬ್ಬು, ಉದ್ದನೆಯ ಮುಖ, ತೀಕ್ಷ್ಣವಾದ ಕಣ್ಣುಗಳು, ಇಬ್ಭಾಗವಾದ ಕ್ರಾಪು, ಉದ್ದನೆಯ ಕತ್ತು, ಇವೆಲ್ಲವೂ ನೇರ ರೇಖೆಗಳಲ್ಲಿ ಮೆಟ್ಟಲಾದ ಏರಿಳಿತದಲ್ಲಿ ಹೆಪ್ಪುಗಟ್ಟಿದ್ದವು. ಈತ ಎಂತಹ ಅಸಾಮಾನ್ಯ ಕಲಾವಿದ ಎಂದುಕೊಂಡೆವು.

ಕೆಲವು ದಿನಗಳ ನಂತರ ಆರ್.ಎಸ್.ಎನ್. ಅವರು ಕಂಟೋನ್ಮೆಂಟಿನ ಕನ್ನಿಂಗ್‌ಹ್ಯಾಮ್ ರಸ್ತೆಯಲ್ಲಿದ್ದ ಜಸ್ಟೀಸ್ ಬಾಲಕೃಷ್ಣಯ್ಯರ್ ಅವರ ವಿಶಾಲ ನಿವೇಶನದಲ್ಲಿದ್ದ ಹೆಂಚಿನ ಒಂದು ಚಿಕ್ಕ ಮನೆಗೆ ವಾಸಕ್ಕಾಗಿ ಸ್ಥಳಾಂತರಿಸಿದರು. ಕೂಡಲೆ ನನಗೆ ತಿಳಿಸಿದರು. "ನನ್ನನ್ನು ಭೇಟಿಯಾಗಲು ಬೆಳಗಿನ ಜಾವ, ಬೆಳಕು ಹರಿಯುವ ಮೊದಲೇ ಬಂದುಬಿಡು.- ಬೇಕಾದಷ್ಟು ಮಾತಾಡೋಣ". ಎಂದರು. ಹಾಗೆಯೇ ಬಹುಕಾಲ ನಡೆಯಿತು. ಸೂರ್ಯೋದಯದ ವೇಳೆಗೆ ಟೀ, ಬ್ರೆಡ್ ಟೋಸ್ಟ್, ಬಿಸ್ಕತ್ತು ಸಿದ್ಧಮಾಡಿಕೊಂಡು ಒಂದು ಟ್ರೇ ನಲ್ಲಿ ತಂದು ಕೊಡುತ್ತಿದ್ದರು- ಅದನ್ನು ಸೇವಿಸುತ್ತಾ, ಕಾಲದ ಪರಿವೆಯೇ ಇಲ್ಲದೆ ಹರಟುತ್ತಿದ್ದೆವು. ನಮ್ಮ ವಿಶ್ವೇಶ್ವರಪುರದ ಮನೆಯಿಂದ ಸೈಕಲ್ ಸವಾರಿಯಲ್ಲಿ, ಕನ್ನಿಂಗ್‌ಹ್ಯಾಮ್ ರಸ್ತೆಗೆ ಬೆಳಗಿನ ಜಾವದ ಯಾತ್ರೆ ನನಗೆ ಮೆಕ್ಕಾಯಾತ್ರೆಯಾಗಿತ್ತು.

ಅಲ್ಲಿಗೆ ವಿಮರ್ಶಕರು, ಪತ್ರಕರ್ತರು, ಕಲಾವಿದರು, ಅಭಿಮಾನಿಗಳು, ಆಕಾಶವಾಣಿಯವರು, ಬಹು ಮಂದಿ ಬಂದು ಅವರ ಯೋಗಕ್ಷೇಮ ವಿಚಾರಿಸಿ ಮುದ್ರಣಕ್ಕೆ ಏನಾದರೂ ಸಿದ್ಧವಿದ್ದರೆ ಕೊಂಡೊಯ್ಯುತ್ತಿದ್ದರು.

ಒಂದು ದಿನ ನಾಯ್ಡು ಅವರು- "ಹೇ ರವೀಂದ್ರ-ಈ ಶಿವಸ್ವಾಮಿ, ಬಂಗಾಳಿ ಚಿತ್ರಕಲೆಯ ಬಗ್ಗೆ ಆಕಾಶವಾಣಿಯಲ್ಲಿ ಮಾತನಾಡುವಂತೆ ವಿನಂತಿಸಿದ್ದಾನೆ. ಅದರ ಬಗ್ಗೆ ನನಗೆ ಸಾಕಷ್ಟು ತಿಳಿದಿಲ್ಲ. ನೀನು ನನಗೆ ಸಹಾಯ ಮಾಡ್ತೀಯಾ?" ಎಂದರು.

"ಶೂರ್"- ಅಂದಿದ್ದೇ ಮನೆಗೆ ದೌಡಾಯಿಸಿದೆ. ತಂದೆಯವರ ಅಪಾರ-ಅಮೂಲ್ಯ ಗ್ರಂಥ ಸಂಗ್ರಹದಲ್ಲಿದ್ದ- ಅನೇಕ ಕೃತಿಗಳನ್ನು ಕೂಡಲೇ ತೆಗೆದೆ. ಅವು ಎಲ್ಲೆಲ್ಲಿದೆ ಎಂದು ನನಗೆ ಚೆನ್ನಾಗಿ ಗೊತ್ತಿತ್ತು. ಜಾಮಿನಿ ರಾಯ್, ನಂದಲಾಲ್ ಬೋಸ್, ಅಬನೀಂದ್ರನಾಥ ಠಾಕೂರ್, ರಬೀಂದ್ರನಾಥ ಠಾಗೂರ್, ದೇವೀಪ್ರಸಾದ ರಾಯ್ ಚೌಧುರಿ, ಮನೀಷಿಡೇ ಮತ್ತು ಬಂಗಾಲಿ ಚಿತ್ರಕಲೆಯ ಬಗ್ಗೆ ಇದ್ದ ಕೆಲವು ವಿಮರ್ಶಾ ಗ್ರಂಥಗಳು ಸೇರಿ ೧೮-೨೦ ಪುಸ್ತಕಗಳನ್ನು ತೆಗೆದುಕೊಂಡು ಹೋಗಿ ಅವರ ಮುಂದಿಟ್ಟೆ.

"That's wondrerful - You are a genius!" ಎಂದರು. ಎರಡು ದಿನಗಳ ನಂತರ,

"ಆರ್.ಎಸ್.ಎನ್. ಹೇಗೆ ನಡೆದಿದೆ ನಿಮ್ಮ ಬಂಗಾಳಿ ಚಿತ್ರಕಲೆಯ ಅಧ್ಯಯನ?" ಎಂದೆ

"ನಾನು ಓದಿ ಮುಗಿಸಿದೆ. ಆಕಾಶವಾಣಿಯವರು ಇಂದು ನನ್ನ ಮಾತನ್ನು ರೆಕಾರ್ಡ್ ಮಾಡಿಕೊಳ್ಳಲಿದ್ದಾರೆ. ಈ ಪುಸ್ತಕಗಳನ್ನೆಲ್ಲಾ ನೀನು ತೆಗೆದುಕೊಂಡುಹೋಗು" ಎಂದರು.

ಈ ದೈತ್ಯ ೧೮-೨೦ ಪುಸ್ತಕಗಳನ್ನು ಎರಡು ದಿನಗಳಲ್ಲಿ ಓದಿ ಅರಗಿಸಿಕೊಂಡು, ಭಾಷಣಕ್ಕೆ ಸಿದ್ಧವಾಗಿರುವುದನ್ನು ಕೇಳಿ ಬೆರಗಾದೆ. ಈತನದು ದೈತ್ಯ ಚೇತನ. ಭಾಷಣ ಸೊಗಸಾಗಿ ಬಂದಿತು. ಪ್ರಸಾರವಾಯಿತು.

* * *

ಇನ್ನೊಮ್ಮೆ-

"ನೋಡು ರವೀಂದ್ರ, ನನ್ನ ಸೋದರಿ ಅಂಡಮಾನ್‌ನಲ್ಲಿದ್ದಾಳೆ. ಆಕೆ ಪಾಶ್ಚಿಮಾತ್ಯ ಸಂಗೀತದಲ್ಲಿ ಪ್ರವೀಣೆ. ಆಕೆಗೆ ಬಿಥೋವೆನ್‌ರ ಚಿತ್ರವೊಂದು ಬೇಕಂತೆ, ನೀನು ಸಹಾಯ ಮಾಡ್ತೀಯಾ?"

"In what way Sir?" ಎಂದೆ?

"ನಿಮ್ಮ ಮನೆಯ ವರಾಂಡದಲ್ಲಿ ಬಿಥೋವೆನ್‌ನ ನೀಲವರ್ಣದ ಫೋಟೋ ಒಂದಿದೆ. ಅದನ್ನು ನಾಲ್ಕು ದಿನಗಳ ಮಟ್ಟಿಗೆ ತಂದುಕೊಡು" ಎಂದರು. ಮಾರನೇ ದಿನವೇ ಅದನ್ನು ಅವರಿಗೆ ತಲುಪಿಸಿದೆ.

ನಾಲ್ಕೈದು ದಿನ ಕಳೆಯಿತು. ಏನೂ ಸುದ್ದಿಯೇ ಇಲ್ಲ. ನಾನೇ ಮಾತೆತ್ತಿದೆ. "ನಿಮ್ಮ ಬಿಥೋವನ್ ಶಿಲ್ಪ ಏನಾಯಿತು?" ಎಂದು.

"ಓಹ್ ಅದಾ! ಚೆನ್ನಾಗಿ ಬಂತು. ನನ್ನ ಸೋದರಿಗೆ ಚಿತ್ರ ಕಳಿಸಿದ್ದಾಯಿತು. ನೀನು ಮೂಲ ಚಿತ್ರವನ್ನು ಕೊಂಡೊಯ್ಯಬಹುದು" ಎಂದರು.

"ನನಗೊಂದು ಪ್ರತಿ ಕೊಡುವಿರಾ?" ಎಂದರೆ,

"ಕ್ಷಮಿಸು ಮಾರಾಯ, ಅದರ ಕಚ್ಚಾ ಚಿತ್ರವನ್ನು ನಾನು ನಾಲ್ಕೈದು ದಿನಗಳ ಹಿಂದೆ ನಾಶಗೊಳಿಸಿಬಿಟ್ಟೆ. ಯಾಕೋ ಅದು ತುಂಬಾ ಕಿರಿಕಿರಿ ಅನ್ನಿಸ್ತಿತ್ತು.!!!" ಎಂದು ಮಾತು ಬದಲಿಸಿದರು. ಆ ಶಿಲ್ಪವನ್ನು ನೋಡುವ ಯೋಗವೇ ನನಗೆ ಇಲ್ಲವಾಯಿತು.

ಒಂದು ದಿನ-ಸ್ವಂತ ವಿಷಯಗಳನ್ನು ಮಾತನಾಡುತ್ತಾ ಅವರ ತಾಯಿಯ ನೆನಪಾಯಿತು- ನೀರವದಿಂದ- ಎಲ್ಲೋ ದೃಷ್ಟಿ ನೆಟ್ಟು-

"ರವೀಂದ್ರ My mother is a beautiful woman, She is a great singer"ಎಂದರು. ಅವರ ಕಣ್ಣು ಹನಿಗೂಡಿತ್ತು. ಅವರ ತಾಯಿ ಖ್ಯಾತ ಗಾಯಕಿ ಶ್ರೀಮತಿ ರಂಗನಾಯಕಿಯವರೆಂದೂ, ಅವರ ಹೆಸರಿನಲ್ಲಿ ಅನೇಕ ಸ್ಮಾರಕ ಸಂಗೀತ ಸ್ಪರ್ಧೆಗಳು ಏರ್ಪಡುತ್ತವೆಂದು ನಂತರ ತಿಳಿಯಿತು.

* * *

ಆರ್.ಎಸ್.ಎನ್. ಆಗಾಗ ಟಪಾಲ್ಸಿ, ಗುಲ್ ಬ್ರಾನ್ಸನ್ ಮತ್ತಿತರ ಚಿತ್ರಕಾರರ ವಿವಿಧ ಶೈಲಿಯ ಬಗ್ಗೆ ಉದಾಹರಿಸುತ್ತಿದ್ದರು.

ಒಮ್ಮೆ ಹೀಗೆಯೇ ಮಾತನಾಡುತ್ತಾ,

ನಿಮಗೆ – David Lowನ ಚಿತ್ರಗಳು ಮೆಚ್ಚುಗೆಯೇ ಎಂದೆ?

ಅದಕ್ಕೆ ಬಹು ಸ್ವಾರಸ್ಯವಾದ ಉತ್ತರ ಸಿಕ್ಕಿತು.

" ನಾನು ಇಂಗ್ಲೆಂಡಿನಲ್ಲಿದ್ದಾಗ–ಒಮ್ಮೆ Low ಅವರನ್ನು ಭೇಟಿಯಾಗಲು ಅವರ ಸ್ಟುಡಿಯೋಗೆ ಹೋದೆ. ಆಗ ಅವರು ಒಂದು ಸಭೆಯಲ್ಲಿದ್ದರು. ನಾನು ಯಾರೆಂದು ತಿಳಿದು ಅವರ ಸೆಕ್ರೆಟರಿ ನನ್ನನ್ನು ಅವರ ವಿಶಾಲವಾದ ಕೊಠಡಿಯಲ್ಲಿ ಕೂರಿಸಿದರು.

ಅಲ್ಲಿದ್ದ ಚಿತ್ರಗಳು, Modelಗಳು photoಗಳ ಕಡೇ ಕಣ್ಣು ಹಾಯಿಸಿ–ನಾನು ಮೂಕವಿಸ್ಮಿತನಾದೆ. ಎರಡನೇ ಮಹಾ ಯುದ್ಧದ ಯುದ್ಧಾಸ್ತ್ರಗಳು– ಎಂದರೆ ಟ್ಯಾಂಕ್, ತೋಪು ಪ್ಲೇನ್‌ಗಳ Modelಗಳು ಅಲ್ಲಿದ್ದವು. ರಾಷ್ಟ್ರನಾಯಕರಾದ ಚರ್ಚಿಲ್, ಚೆಂಬರ್ಲೇನ್, ಅಟ್ಲಿ, ಬಿವನ್ ಮತ್ತಿತರ ವಿವಿಧ ಭಂಗಿಯ ಚಿತ್ರಗಳು ಗೋಡೆಯಲ್ಲಿ ಅಚ್ಚುಕಟ್ಟಾಗಿ ಅಲಂಕರಿಸಿದ್ದವು. Low ಅವರ ಕೆಲವು ಪ್ರಖ್ಯಾತ ವ್ಯಂಗ್ಯಚಿತ್ರಗಳು– ದೊಡ್ಡ ಪ್ರಮಾಣದಲ್ಲಿ ಅಚ್ಚಾಗಿ ಗೋಡೆ ಏರಿದ್ದವು. ಅವನ್ನೆಲ್ಲಾ ನೋಡಿ– ಇಂತಹ ಮೇಧಾವಿಯನ್ನು ಭೇಟಿ ಮಾಡುವ ಸ್ಥೈರ್ಯವಿಲ್ಲದೇ–ಅವರನ್ನು ಕಾಣದೆಯೇ ಹಾಗೆಯೇ ಹಿಂದಿರುಗಿದೆ!" ಎಂದರು.

ಆರ್.ಎಸ್.ಎನ್. ಅವರ ಕೊಠಡಿಗೆ, ಆಗಾಗ್ಗೆ ವೈ.ಎನ್.ಕೆ., ಆರಾಸೇ, ಶಿವಸ್ವಾಮಿ, ಸೀತಾರಾಮ ಶಾಸ್ತ್ರಿಗಳೂ, ಭಾರದ್ವಾಜ್, ಕೊಟ್ಟಾರ್, ಟಿಎಸ್ಸಾರ್ ಮತ್ತಿತರರು ಬರುತ್ತಿದ್ದರು. ಅವರ ಕೃತಿಗಳನ್ನು ಮುದ್ರಿಸಿ, ಅವರಿಗೆ ಸಂಭಾವನೆ ತಲುಪಿಸಿ, ಅವರ ಉತ್ಕೃಷ್ಟ ಕಲೆಯು ಪ್ರಕಾಶಕ್ಕೆ ಬಂದು, ಹತ್ತಾರು ಜನ ಇಂತಹ ಮೇಧಾವಿಯನ್ನು ಗೌರವಿಸುವಂತೆ ಶ್ರಮಿಸಿದರು.

ನಾಯಿಡು ಅವರ ಆರೋಗ್ಯ ಪದೇ ಪದೇ ಕೆಡುತ್ತಿತ್ತು. ಎದೆಯಲ್ಲಿ ಏನೋ ಬಾಧೆ ಎಂದು ನರಳುತ್ತಿದ್ದರು.

"ಅವನು ನನ್ನನ್ನೂ ಕಾಡುತ್ತಾನೆ!! ಹಿಂಡುತ್ತಾನೆ" ಎಂದು ಉಗ್ಗಡಿಸಿ–ನಿರ್ವಿಣ್ಣರಾಗಿ ಏನೇನೋ ಅಸ್ಪಷ್ಟವಾಗಿ ತಮಗೆ ತಾವೇ ಮಾತಾಡಿಕೊಳ್ಳುತ್ತಿದ್ದರು. ಕಾರಣ ಯಾರಿಗೂ ಸರಿಯಾಗಿ ತಿಳಿಯದು. ಏನೇನೋ ಊಹಿಸುತ್ತಿದ್ದರು.

ಅವರು ಮುಂಬಯಿಯಲ್ಲಿದ್ದಾಗ–ಕಮ್ಯುನಿಸ್ಟ್ ಪಕ್ಷದಲ್ಲಿ ತೀವ್ರಗಾಮಿಯಾಗಿ ದುಡಿದರು. ಮಸಾನಿ, ಅಬ್ಬಾಸ್ ಮತ್ತಿತರರ ಹೆಸರುಗಳನ್ನು ಆಗಾಗ್ಗೆ ಹೇಳುತ್ತಿದ್ದರು.

ಆ ಪಂಗಡದಿಂದ ದೂರವಾದಾಗ–ಇವರಿಗೆ ಎದೆಯಲ್ಲಿ ರೋಮ ಬೆಳೆಯುವಂತಹ ವಿಷ ಉಣ್ಣಿಸಿರಬೇಕು– ಎಂಬುದೊಂದು ಊಹೆ. ಸತ್ಯವನ್ನು ಅವರು ಮರೆಮಾಚಿದರು. ಸತ್ಯಾಂಶ ಅವರೊಡನೆ ಕಾಲಗರ್ಭದಲ್ಲಿ ಸೇರಿಹೋಯಿತು

ಅನಕೃ ಅವರು, ಆರ್.ಎಸ್.ಎನ್. ಅವರ ಜೀವನವನ್ನಾಧರಿಸಿ ಒಬ್ಬ ಕಲಾವಿದನ ಸಾಹಸ ವೃತ್ತಾಂತದ ಕಾಲ್ಪನಿಕ ಕಾದಂಬರಿಯನ್ನು ಬರೆದರು. ಅದೇ 'ಸಂಗ್ರಾಮ'. ಆರ್.ಎಸ್.ಎನ್. ಜೀವನದ ಸಾಹಸ ಪ್ರತಿಭೆ–ಸಾಧನೆಗಳು ಅದರಲ್ಲಿ ಪರ್ಯಾಯವಾಗಿ ನಿರೂಪಿತವಾಗಿವೆ. ಬಡತನ ಮತ್ತು ಶ್ರೀಮಂತಿಕೆಯ ಸಂಘರ್ಷ Proletariat and Bourgeios ಮಾರ್ಮಿಕವಾಗಿ ನಿರೂಪಿತವಾಗಿದೆ.

ನಾನು ಇಂಜಿನಿಯರಿಂಗ್ ಪಧವೀಧರನಾಗಿ ವೃತ್ತಿಗಾಗಿ ಬೆಂಗಳೂರು ಬಿಟ್ಟು, ೧೯೬೦ರಲ್ಲಿ ದೆಹಲಿ, ರಾಂಚಿ, ಬೊಕಾರೊಗಳಲ್ಲಿದ್ದೆ. ಅಲ್ಲಿಯೂ ಕನ್ನಡದ ವಿಶೇಷ ಕಾರ್ಯಕ್ರಮ ಯೋಜನೆಗಳಲ್ಲಿ, ಆಸ್ಥೆಯಿಂದ ಭಾಗವಹಿಸಿದೆ. ನಮ್ಮ ಸಂಘದ ವಾರ್ಷಿಕ ಸಂಚಿಕೆ "ಭಾರತಿ"ಯಲ್ಲಿ ಒಮ್ಮೆ ಆರ್.ಎಸ್.ಎನ್. ಅವರ ಬಗ್ಗೆ ಒಂದು ವಿಶೇಷ ಲೇಖನ ಬರೆದು, ಅದನ್ನು ತಂದೆಯವರ ಗಮನಕ್ಕೆ ತಂದಿದ್ದೆ. ಅದನ್ನು ಓದಿ ಅವರು–

"ಅಯ್ಯೋ.. ನಾಯಿಡು ಅವರನ್ನು ಎಲ್ಲರೂ ಮರೆತೇ ಬಿಟ್ಟರು. ಅವರಿಗೊಂದು ಯೋಗ್ಯ ಪುರಸ್ಕಾರವಾಗಬೇಕು" ಎಂದರು. ರಾಜ್ಯ ಲಲಿತಕಲಾ ಅಕಾಡೆಮಿಯ ಪುರಸ್ಕಾರ ಅವರಿಗೆ (ನವೆಂಬರ್ ೧೯೭೩ನೇ ಇಸವಿ) ಕೊಡಲ್ಪಟ್ಟಿತು ಎಂದು ತಿಳಿದು ಆನಂದಿಸಿದೆ.

ಆರ್.ಎಸ್.ಎನ್. ಮೈಸೂರಿಗೆ ವಾಸ್ತವ್ಯಕ್ಕಾಗಿ ತೆರಳಿ, ಬೆಂಗಳೂರಿನ ಸಂಪರ್ಕ ಕಡಿಮೆ ಆಯಿತು. ಮತ್ತೆ ಅವರ ಅಜ್ಞಾತವಾಸ ಆರಂಭವಾಯಿತು.

ಕೆಲವು ವರ್ಷಗಳ ನಂತರ ಆರ್.ಎಸ್.ಎನ್. ಕಾಲಾಧೀನರಾದರೆಂದು ತಿಳಿದು ಮಮ್ಮಲ ಮರುಗಿದೆ. (೬-೧೦-೧೯೮೫) ಕಣ್ಣೀರಿಟ್ಟೆ, ನನ್ನ ಹೃದಯ ಬಿರಿಯಿತು-ದುಃಖತಪ್ತನಾದೆ. ಒಬ್ಬ ಆಪ್ತನನ್ನು, ಅಸದೃಶ ಕಲಾವಿದನನ್ನು ಕಳೆದುಕೊಂಡಂತೆ ದುಃಖಿಸಿದೆ.

* * *

ಒಮ್ಮೆ ಬೆಂಗಳೂರು ಕಂಟೋನ್ಮೆಂಟಿನ ಪೆರೇಡ್ ಗ್ರೌಂಡ್‌ನ ವಿಶಾಲ ಆವರಣದಲ್ಲಿರುವ , ಜಯಶಾಲಾದಲ್ಲಿ, ಕಲಾಮಂದಿರದವರು ಚಿತ್ರಪ್ರದರ್ಶನವನ್ನೇರ್ಪಡಿಸಿದ್ದರು. ನಾನೂ ಭಾಗವಹಿಸಿ-ಹತ್ತು ಚಿತ್ರಗಳನ್ನು ಇಟ್ಟಿದ್ದೆ. ಅಲ್ಲಿ ಪಾಶ್ಚಿಮಾತ್ಯ ತತ್ವಜ್ಞಾನಿಗಳಾದ ರಸೆಲ್, ಷಾಪೆನ್‌ಹಾರ್. ಹೆಗೆಲ್, ನೀಷೆ, ಬರ್ಗ್‌ಸನ್, ಸಾಂಟಾಯನ ಮತ್ತಿತರರ ವ್ಯಕ್ತಿಚಿತ್ರಗಳಿದ್ದವು. ಆ ಪ್ರದರ್ಶನವನ್ನು ನೋಡಲು ವಿಮರ್ಶಕ ಬಿ.ಕೆ. ಕೋಟ್ವಾರ್ (ಮೈಸಿಂಡಿಯಾ) ಬಂದಿದ್ದರು. ಚಿತ್ರಗಳನ್ನು ವೀಕ್ಷಿಸುತ್ತಾ ಬಂದವರು ನನ್ನ ಚಿತ್ರಗಳ ಮುಂದೆ ಬಹುಹೊತ್ತು ನಿಂತು ಬೇರೆ ಬೇರೆ ದಿಕ್ಕಿನಿಂದ ನೋಡಿ "It has RSN's style!" ಎಂದು ಹೋದರು. ಮನೆಗೆ ಬಂದ ಮೇಲೆ ತಂದೆಯವರು "ಏನಾಯಿತಯ್ಯ? ಆ Exibitionಗೆ ಕೊಟ್ಟಿದ್ದೆಯಲ್ಲಾ?" ಎಂದರು. ನಡೆದುದನ್ನು ಹೇಳಿದೆ. ಅದಕ್ಕವರು-

"Oh! Even then it is a compliment!"-ಎಂದರು. ಆರ್.ಎಸ್.ಎನ್. ಅವರ ಶೈಲಿಯನ್ನು ಅನುಕರಿಸುವುದು ಸಾಮಾನ್ಯವಾದುದಲ್ಲ ಎಂದವರ ಅರ್ಥವಾಗಿತ್ತು.

* * *

ಆರ್.ಎಸ್.ಎನ್. ಅವರನ್ನು ನೆನೆಯುವ ಜನ ಅಲ್ಲಲ್ಲಿದಿದ್ದಾರೆ. ಅವರ ಚಿತ್ರಗಳೂ, ಶಿಲ್ಪಗಳೂ ಅಲ್ಲಲ್ಲಿ ಹಂಚಿಹೋಗಿವೆ. ಅವರು ರಚಿಸಿದ ಪುಟ್ಟ ಆಕೃತಿಯ ಕೈಲಾಸಂ ಮೂರ್ತಿಯಂತೂ ಒಂದು ಶಿಲಾಕಾವ್ಯ. ಕೈಲಾಸಂ ಅವರ ದೈತ್ಯಚೇತನ, ಪ್ರಭೃತಿಯನ್ನು ಒಂದು ಹಿಡಿ ಪ್ಲಾಸ್ಟರ್‌ನಲ್ಲಿ ಅಡಗಿಸಿದ್ದಾರೆ. ಆರ್.ಎಸ್.ಎನ್. ಅವರ ಸಮಗ್ರ ಕೃತಿಗಳನ್ನು ಸಂಗ್ರಹಿಸಿ ಒಂದು ಸಂಪುಟ ಪ್ರಕಟವಾದರೆ-ಉತ್ತಮ ದಾಖಲೆಯಾಗುತ್ತದೆ. ಕಲಾಭ್ಯಾಸಿಗಳಿಗೆ ಉತ್ತಮ ಮಾರ್ಗದರ್ಶಿಯಾಗುತ್ತದೆ.

*('ನೂತನ' ಸಾಪ್ತಾಹಿಕ, ೧೧ ಜೂನ್ ೨೦೦೦)*





# ಆರ್.ಎಸ್.ಎನ್.

■ *ಹಾ.ಮಾ. ನಾಯಕ*

"ಸತ್ತವರು ಎಲ್ಲಿಗೆ ಹೋಗುತ್ತಾರೆ?"

ಇದು ಮಕ್ಕಳ ಕುತೂಹಲದ ಪ್ರಶ್ನೆಯಲ್ಲ; ದಾರ್ಶನಿಕರೂ ಬಿಡಿಸಲಾಗದ ಒಗಟು. "ಸತ್ತವರು ಎಲ್ಲಿಗೂ ಹೋಗುವುದಿಲ್ಲ; ನಮ್ಮ ನೆನಪಿಗೆ ಬರುತ್ತಾರೆ" ಎನ್ನುವುದು ನನಗೆ ಕಾಣಿಸಿದ ಉತ್ತರ. ಪ್ರತಿಯೊಂದು ಸಾವಿನ ಸಂದರ್ಭದಲ್ಲಿಯೂ, ನನಗೆ ಹಾಗೆನ್ನಿಸಿದೆ. ಮೊನ್ನೆ ಮೊನ್ನೆ (ಅಕ್ಟೋಬರ್, ೬) ವಿಖ್ಯಾತ ಕಲಾವಿದ ಆರ್.ಎಸ್. ನಾಯುಡು ಮೈಸೂರಿನಲ್ಲಿ ತೀರಿಕೊಂಡ ವರದಿಯನ್ನು ಓದುತ್ತಿದ್ದಂತೆ ಅನ್ನಿಸಿಕೆ ಇನ್ನೊಮ್ಮೆ ದೃಢಪಟ್ಟಿತು. ಒಂದೆರಡು ದಿನ ನಾಯುಡು ಮನಸ್ಸನ್ನು ಸಂಪೂರ್ಣವಾಗಿ ತುಂಬಿಕೊಂಡರು. ನೆನಪುಗಳು ಉಕ್ಕಿದವು.

ಆರ್.ಎಸ್. ನಾಯುಡು ಅವರ ಪರಿಚಯ ಮೂವತ್ತೈದು ವರ್ಷಗಳದ್ದು. ಐವತ್ತರ ದಶಕದ ಆರಂಭದ ವರ್ಷಗಳಲ್ಲಿ ನಾನು ಮೈಸೂರು ಮಹಾರಾಜರವರ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ ಮೊದಲು ಅವರ ಪರಿಚಯವಾಯಿತು. ನಿರಂಜನ ಮತ್ತು ಕೆ.ವಿ. ಸುಬ್ಬಣ್ಣ ನನಗೆ ಅವರನ್ನು ಪರಿಚಯಿಸಿದರು. ಆ ಪರಿಚಯ ಮುಂದಿನ ಮೂರು ನಾಲ್ಕು ವರ್ಷ ಗಾಢವಾಯಿತು; ಆತ್ಮೀಯತೆಯಾಯಿತು. ನಾನು ಮೈಸೂರು ಬಿಟ್ಟ ಮೇಲೆ ಅವರಿಂದ ಸ್ವಲ್ಪ ದೂರವಾದೆ. ಆಗಾಗ ಅವರು ನನಗೆ ಸಚಿತ್ರ ಕಾರ್ಡುಗಳನ್ನೊ, ಅಂತರ್ದೇಶೀಯ ಪತ್ರಗಳನ್ನೋ ಕಳಿಸುತ್ತಿದ್ದರು. ಮತ್ತೆ ನಾನು ಮೈಸೂರಿನಲ್ಲಿ ನೆಲೆಸುವ ಹೊತ್ತಿಗೆ ಪತ್ರ ವ್ಯವಹಾರವೂ ನಿಂತು ಹೋಗಿತ್ತು. ಮೈಸೂರಿನ ಅವರ ಕೆಸರೆಯ ಮನೆಗೆ ಒಂದೆರಡು ಸಲ ಹೋಗಿ ಬಂದಿದ್ದೆ. ಒಂದು ಸಲ ಪಿ.ಆರ್. ತಿಪ್ಪೇಸ್ವಾಮಿಯವರ ಹತ್ತಿರ ನನ್ನ ಎರಡು ಚಿತ್ರ ಬರೆದು ಕಳಿಸಿದ್ದರು! ಆಗಾಗ ನನ್ನನ್ನು ಕುರಿತು ವಿಚಾರಿಸುತ್ತಿದ್ದರೆಂದು ತಿಪ್ಪೇಸ್ವಾಮಿಗಳೂ ಹೇಳುತ್ತಿದ್ದರು. ಅವರು ಕ್ಯಾನ್ಸರಿನಿಂದ ನರಳುತ್ತಿದ್ದಾಗ ಒಮ್ಮೆ ನೋಡಿದೆ. ದೇಹ ಕಡ್ಡಿಯಾಗಿತ್ತು. ಚೇತನ ಸ್ವಲ್ಪವೂ ಕುಂದಿರಲಿಲ್ಲ. ಎಲ್ಲದರಲ್ಲಿಯೂ ಅವರು ಅದೇ ಹಳೆಯ ಆರ್.ಎಸ್.ಎನ್. ಆಗಿದ್ದರು. ದೃಢ ಮನಸ್ಸು, ಛಲಗಳೇ ಅವರನ್ನು ಇಲ್ಲಿಯವರೆಗೂ ಉಳಿಸಿದವೆಂಬುದು ನನ್ನ ಭಾವನೆ.

ಆರ್.ಎಸ್.ಎನ್. ಕಲಾವಿದರೆಂದು ಪ್ರಸಿದ್ಧರಾಗಿದ್ದರೂ, ನಿಜವಾದ ಅರ್ಥದಲ್ಲಿ ಅವರೊಬ್ಬ ದೊಡ್ಡ ಬುದ್ಧಿಜೀವಿಯಾಗಿದ್ದರು. ಸಾಹಿತ್ಯ, ರಾಜಕೀಯ, ಅರ್ಥಶಾಸ್ತ್ರ ಮೊದಲಾದ ಹತ್ತು ಹಲವು ವಿಷಯಗಳನ್ನು ಅವರು ಆಳವಾಗಿ ಅಧ್ಯಯನ ಮಾಡಿದ್ದರು. ರಾಜಕೀಯವಾಗಿ ಅವರು ಮೊದಲು ಕಾಂಗ್ರೆಸ್ಸಿಗರಾಗಿದ್ದರು. ಅವರಿಗೆ ಗಾಂಧೀಜಿಯವರ ಒಡನಾಟವಿತ್ತು. ಮಹಾದೇವ ದೇಸಾಯಿ, ಉಮಾಶಂಕರ ದೀಕ್ಷಿತ್. ಜಮನಲಾಲ್

ಬಜಾಜ್, ಅಶೋಕ್ ಮೆಹ್ತಾ, ತೆಂಡುಲ್‌ಕರ್, ಮೀನೂ ಮಸಾನಿ ಮೊದಲಾದವರಿಗೆ ನಿಕಟವಾಗಿದ್ದರು. ಕೊನೆಗೆ ಅವರು ಸಾಮ್ಯವಾದಿಯಾಗಿ ಮಾರ್ಪಟ್ಟರು. ಇದರಿಂದ ಸಹಜವಾಗಿಯೇ ಅವರ ಚಿಂತನೆಯಲ್ಲಿ ಹಲವು ಬದಲಾವಣೆಗಳಾಗಿದ್ದವು. ಅವರ ನೆನಪುಗಳನ್ನು ಕೇಳುವುದೇ ಒಂದು ಅನುಭವವಾಗಿರುತ್ತಿತ್ತು. ಅವರ ಹಾಗೆ ಶುದ್ಧವಾದ ಇಂಗ್ಲಿಷನ್ನು ಆಡುವ, ಬರೆಯುವ ಬಹಳ ಜನರನ್ನು ನಾನು ನೋಡಿಲ್ಲ. ಅವರು ಬರವಣಿಗೆಯ ಕೆಲಸವನ್ನು ಹೆಚ್ಚಾಗಿ ಕೈಗೊಂಡಿದ್ದರೆ ಲೇಖಕರಾಗಿಯೂ ಹೆಸರುವಾಸಿಯಾಗುತ್ತಿದ್ದರು.

ಚಿತ್ರದಲ್ಲಾಗಲೀ, ಶಿಲ್ಪದಲ್ಲಾಗಲೀ ಆರ್.ಎಸ್.ಎನ್. ಅವರದ್ದೇ ವಿಶಿಷ್ಟವಾದ ಛಾಪು ಎದ್ದು ಕಾಣುತ್ತದೆ. ಒಬ್ಬರಿಗೆ ಅವರದೇ ಶೈಲಿ ಇರುತ್ತದೆನ್ನುವುದಕ್ಕೆ ನಾಯುಡು ಅವರ ಕೃತಿಗಳೇ ಸಾಕ್ಷಿ. ನೋಡುತ್ತಲೇ ಗುರುತಿಸಬಹುದಾದ ಶೈಲಿ ಅವರದು. ಅವರ ಚಿತ್ರಗಳೆಲ್ಲಾ ಅನೇಕ ಪುಸ್ತಕ, ಪತ್ರಿಕೆಗಳಲ್ಲಿ ನೂರಾರು ಜನರಿಗೆ ಬರೆದ ಕಾಗದಗಳಲ್ಲಿ ಚೆಲ್ಲಿ ಹೋಗಿವೆ. ಪ್ಲಾಸ್ಟರ್ ಆಫ್ ಪ್ಯಾರಿಸ್‌ನ ಅವರ ಅನೇಕ ಮೂರ್ತಿಗಳೂ ಒಂದೆಡೆ ಸಿಕ್ಕುವುದಿಲ್ಲ. ಬುದ್ಧನಿಂದ ಕ್ರಿಸ್ತನವರೆಗೆ ಕುವೆಂಪುವಿನಿಂದ ಬರ್ನಾರ್ಡ್ ಷಾವರೆಗೆ ಅವರು ರಚಿಸಿದ ಮೂರ್ತಿಗಳು ಚೆಲ್ಲಾಪಿಲ್ಲಿಯಾಗಿ ಹೋಗಿವೆ. ಅವನ್ನೆಲ್ಲಾ ಸಂಗ್ರಹಿಸಿ ಒಂದೆಡೆ ಕಾದಿರಿಸುವ ಕೆಲಸವನ್ನು ಅವರ ಅಭಿಮಾನಿಗಳೂ, ಕಲೆಯನ್ನು ಪ್ರೀತಿಸುವವರೂ ಕೈಗೊಳ್ಳಬೇಕಾಗಿದೆ. ನಾಯುಡು ಅವರ ನೆನಪಿಗೆ ಮಾಡಬಹುದಾದ ಕೆಲಸವೆಂದರೆ ಇದೊಂದೇ. ಕರ್ನಾಟಕ ಲಲಿತಕಲಾ ಅಕಾಡೆಮಿ ಇದನ್ನು ಕರ್ತವ್ಯವೆಂದು ಭಾವಿಸಬೇಕು.

ನಾಯುಡು ಅವರ ಕಲೆಯಲ್ಲಿ ಯಾವಾಗಲೂ ವ್ಯಂಗ್ಯ, ವಿಡಂಬನೆಗಳು ತುಂಬಿರುತ್ತಿದ್ದವು. ಇದರಲ್ಲಿ ಅವರನ್ನು ಮೀರಿಸುವವರು ವಿರಳ. ಅವರ ಕೈಲಾಸಂ ಶಿಲ್ಪದಲ್ಲಿ ದೊಡ್ಡ ಹೊಟ್ಟೆ ಕಾಣಿಸುತ್ತದೆ. ಅದು ನನಗೆ ಇಷ್ಟವಾಗಲಿಲ್ಲ. ಒಮ್ಮೆ ಅವರಿಗೆ ಹಾಗಂದೆ. ಮಹಾರಾಜಾ ಕಾಲೇಜಿನ ಹಾಸ್ಟೆಲ್ಲಿನ ನನ್ನ ಕೊಠಡಿಯಲ್ಲಿ ನನ್ನದೇ ಹಾಸಿಗೆಯಲ್ಲಿ ಮಲಗಿದ್ದವರು ಧಡಕ್ಕನೆ ಎದ್ದು ನಿಂತರು. ಅವರ ವರ್ತನೆಗಳನ್ನು ಬಲ್ಲ ನನಗೆ ಮುಂದೆ ಏನಾಗುತ್ತದೋ ಎಂದು ಗಾಬರಿಯಾಯಿತು. "ನಿಮಗೆ ನಾನೊಂದು ಮಾತು ಹೇಳಲಾ!" ಎಂದರು "ಹೇಳಿ" ಎಂದೆ. "ನಿಮಗೆ ಅದೆಲ್ಲಾ ಅರ್ಥವಾಗೋಲ್ರಿ" ಎಂದರು. ಅವರ ಮಾತಿನಲ್ಲಿ ತಿರಸ್ಕಾರವಿತ್ತು. ನಾನು ಸುಮ್ಮನೆ ಕುಳಿತಿದ್ದೆ. ನಾಯಿಡು ತಮ್ಮ ಹೊಟ್ಟೆಯ ಮೇಲೆ ಪಟಪಟನೆ ಹೊಡೆದುಕೊಳ್ಳುತ್ತಾ ಹೇಳಿದರು. "ಈ ದೊಡ್ಡ ಹೊಟ್ಟೆಯ ಅರ್ಥ. ಕೈಲಾಸಂ ತುಂಬಾ ಕುಡಿಯುತ್ತಿದ್ದರು ಎಂದು ಅಷ್ಟೆ. ಈಗ ತಿಳಿಯಿತಾ?" ಅವರೊಂದಿಗೆ ಇಂಥ ಮುಖಾಮುಖಿಗಳು ಹಲವು ನಡೆಯುತ್ತಿದ್ದವು. ಸಂಭಾಷಣೆ ಕೆಲವು ಸಲ ಏಕಮುಖವಾಗಿರುತ್ತಿತ್ತು. ಮಾತನಾಡುವವರು ಅವರೊಬ್ಬರೇ ಆಗಿರುತ್ತಿದ್ದರು. ತಮ್ಮಷ್ಟಕ್ಕೆ ತಾವೇ ಮಾತನಾಡಿಕೊಳ್ಳುವುದೂ, ಇರುತ್ತಿತ್ತು. ಇದ್ದಕ್ಕಿದ್ದಂತೆಯೇ ಅವರು "ಅಗೋ ಬಂದರು" ಎಂದು ಎದ್ದು ಕೂರುತ್ತಿದ್ದರು. ಇಂಗ್ಲೆಂಡಿನಲ್ಲಿದ್ದಾಗ ಅವರನ್ನು ಹಿಂಬಾಲಿಸುತ್ತಿದ್ದ ಸ್ಕಾಟ್ಲೆಂಡ್ ಯಾರ್ಡ್ ಪೊಲೀಸರು, ಗುಪ್ತಚಾರರು ಅವರ ಮನಸ್ಸಿಗೆ ದೆವ್ವ ಹಿಡಿಸಿಬಿಟ್ಟಿದ್ದರು.

ಆರ್. ಸೀತಾಪತಿ ನಾಯುಡು ಅವರ ಪೂರ್ತಿ ಹೆಸರು. ಅವರ ಅಣ್ಣ ಜಗಪತಿ ನಾಯುಡು ಭೂಗರ್ಭಶಾಸ್ತ್ರದ ಪ್ರಾಧ್ಯಾಪಕರಾಗಿದ್ದರು. ಎಳವೆಯಿಂದಲೇ ದೇಶಪ್ರೇಮ ಬೆಳೆಸಿಕೊಂಡ ಆರ್.ಎಸ್.ಎನ್. ಪುಣೆಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಯುವ ಕಾಂಗ್ರೆಸ್ಸಿನ ಸಂಚಾಲಕರಾಗಿ ಕೆಲಸ ಮಾಡಿದರು. ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಬಗೆಬಗೆಯ ಕಾರಾಗೃಹವಾಸ ಅನುಭವಿಸಿದರು. ತಲೆಮರೆಸಿಕೊಂಡು ಓಡಾಡಿದರು. ವಿದೇಶಕ್ಕೆ ಹೋದರು. ಕಷ್ಟಗಳನ್ನು ಗಂಟುಹಾಕಿಕೊಂಡರು. ಆ ಮೇಲೆ ಚಿಪ್ಪು ಸೇರಿದ ಆಮೆಯಂತಾದರು.

ತೀಕ್ಷ್ಣವಾದ ಕಣ್ಣುಗಳು, ಬಿಳಿಯ ಗಡ್ಡ ನಾಯುಡು ಅವರ ವ್ಯಕ್ತಿ ವಿಶೇಷ. ಪಾಯಿಜಾಮ, ಜುಬ್ಬ, ವೇಸ್ಟ್ ಕೋಟು ಅವರ ಒಂದು ವೇಷ. ತುಂಡು ಅಂಗಿ ಮೋಟು ಚೆಡ್ಡಿ, ಕಾಲುಚೀಲ, ಬೂಡ್ಸ್ – ಇನ್ನೊಂದು ವೇಷ. ತಮಗೆ ತಾವೇ ಮಾತನಾಡುವ ಅಭ್ಯಾಸವಿದ್ದುದರಿಂದ, ಕೆಲವರು ಅವರನ್ನು ಹುಚ್ಚ ಎಂದು ಭಾವಿಸಿದ್ದೂ ಉಂಟು! ಒಮ್ಮೆ ಮಹಾರಾಜಾ ಕಾಲೇಜು ಹಾಸ್ಟೆಲ್‌ನಲ್ಲಿ ಒಬ್ಬ ವಿದ್ಯಾರ್ಥಿ ಅವರನ್ನು ಹಾಗೆಂದೇ ಭಾವಿಸಿ ಕಷ್ಟಕ್ಕೆ ಸಿಲುಕಿಕೊಂಡಿದ್ದ. ನಾಯುಡು ಅವರ ಕೈಯಿಂದ ಅವನನ್ನು ಬಿಡಿಸುವುದು ನಮಗೆ ಪ್ರಯಾಸವಾಗಿ ಹೋಯಿತು. ಅವರ ಬೈಗುಳಗಳಿಗೆ ಯಾರೇ ಆದರೂ ತತ್ತರಿಸಿ

ಹೋಗುವಂತಾಗುತ್ತಿತ್ತು. ಅದು ಅವರ ರೌದ್ರಾವತಾರ. ನಾಯುಡು ಅವರದು ಎಂಬತ್ತು ವರ್ಷಗಳ ತುಂಬು ಜೀವನ (ಜನನ: ಆಗಸ್ಟ್, ೧೦, ೧೯೦೬). ಅವರು ಪ್ರಶಸ್ತಿ ಪ್ರಸಿದ್ಧಿಗಳನ್ನು ಬಯಸಿದವರಲ್ಲ. ಕೀರ್ತಿಯನ್ನು ಬೆನ್ನು ಹತ್ತಿ ಹೋಗಲಿಲ್ಲ. ಅವರಲ್ಲಿ ಆತ್ಮಾಭಿಮಾನ ತುಂಬಿತ್ತು. ಆದ್ದರಿಂದಲೇ ಅವರಿಗೆ ಸಹಜವಾಗಿ ದೊರೆಯಬೇಕಾದ ಗೌರವಗಳು ದೊರೆಯದೇ ಹೋದವು. ಸರ್ಕಾರದ ಮಾಸಾಶನ, ಲಲಿತಕಲಾ ಅಕಾಡೆಮಿ ಪ್ರಶಸ್ತಿಗಳು ಅವರಿಗೆ ದೊರೆತ್ತಿದ್ದವು. ನಾಯುಡು ಅವರ ಬಹುಮುಖವಾದ ಪ್ರತಿಭೆಗೆ ಇವು ಏನೂ ಅಲ್ಲ ಎಂದೇ ನನ್ನ ಭಾವನೆ. ಅವರಿಗೆ ರಾಷ್ಟ್ರಮಟ್ಟದ ಗೌರವಗಳು ಲಭಿಸಬೇಕಾಗಿತ್ತು. ನಾಯುಡು ಅವರಿಗೆ ತಿಳಿದಷ್ಟು ರಾಷ್ಟ್ರನಾಯಕರು ಇನ್ನೊಬ್ಬ ಕಲಾವಿದರಿಗೆ ತಿಳಿದಿದ್ದರೆ ಏನಾಗುತ್ತಿತ್ತೆಂಬುದನ್ನು ನಾವು ಊಹಿಸಿಕೊಳ್ಳಬಹುದು.

ಮೊನ್ನೆ ಅವರು ಸಾಯುವುದಕ್ಕಿಂತ ನಾಲ್ಕು ದಿನಗಳ ಮೊದಲು ಅವರ ಔಷಧೋಪಚಾರಗಳಿಗೆಂದು ಮುಖ್ಯಮಂತ್ರಿಯವರು ಕಳಿಸಿದ್ದ ನಾಲ್ಕು ಸಾವಿರ ರೂಪಾಯಿಗಳ ಚೆಕ್ಕನ್ನು ಕೆಲವು ಅಧಿಕಾರಿಗಳು ಮತ್ತು ಕಲಾವಿದರು ಅವರಿಗೆ ತಲುಪಿಸುತ್ತಿರುವ ಚಿತ್ರವೊಂದನ್ನು ಪತ್ರಿಕೆಗಳಲ್ಲಿ ನೋಡಿದೆ. ನನಗೆ ತಿಳಿದಂತೆ ನಾಯುಡು ಇಂಥದನ್ನೆಲ್ಲಾ ಬಯಸಿದವರೆ ಅಲ್ಲ. ಈ ಬಗೆಯ ಪ್ರಚಾರಗಳಿಂದ ಅವರಿಗೆ ನೋವಾಗಿರುತ್ತದೆಂದೇ ನನ್ನ ಭಾವನೆ. ಕಲಾವಿದರ ಯೋಗಕ್ಷೇಮ ಪ್ರಚಾರದ ಸಾಧನವಾಗಿರಬಾರದು; ಸಮಾಜದ ಕರ್ತವ್ಯವಾಗಿರಬೇಕು.

*ಸಂಪ್ರತಿ ಅಂಕಣ – ಪ್ರಜಾವಾಣಿ (೨೭-೧೦-೧೯೮೫)*



ಪ್ಯಾಬ್ಲೊ ನೆರೂಡ



# ಕಲಾಯೋಗಿ ಆರ್.ಎಸ್.ನಾಯ್ಡು

■ *ಎಚ್.ಜಿ. ಸೋಮಶೇಖರರಾವ್*

**ಆ**ರ್.ಎಸ್.ಎನ್. ಯಾರು? ಪೂರ್ಣ ಹೆಸರು, ಆರ್. ಸೀತಾಪತಿ ನಾಯ್ಡು. ಅಲೆಮಾರಿಯಾಗಿ ಬದುಕಿದವರು.. ಅದ್ಭುತ ಕಲೆಗಾರಿಕೆಗೆ, ವಿಕ್ಷಿಪ್ತ ನಡವಳಿಕೆಗೆ ಹೆಸರಾಗಿದ್ದವರು.

೧೯೭೬-೭೭ ಇರಬಹುದು, ನಾನು ಮೈಸೂರಿನಲ್ಲಿದ್ದೆ. ನನ್ನ ಗೆಳೆಯ ರೂಪರಾಜ್ ಮೂಲಕ ನಾನು ನಾಯ್ಡು ಅವರನ್ನು ಭೇಟಿಯಾದೆ. ಅವರಿಗೆ ನಾಯ್ಡು ಅವರ ನಿಕಟ ಪರಿಚಯವಿತ್ತು. ಅವರ ಖೋಲಿಗೆ ಆಗಾಗ ಆರ್.ಎಸ್.ಎನ್. ಬರುತ್ತಿದ್ದರು. ರೂಪರಾಜ್ ಬರೆದಿದ್ದ ಪುಸ್ತಕವೂ ಪಠ್ಯ ಪುಸ್ತಕವಾಗಿ ಆಯ್ಕೆಯಾದಾಗ ಅದನ್ನು ಪ್ರಕಟಿಸಲು ಹಣ ಇರಲಿಲ್ಲ. ಬ್ಯಾಂಕಿನಿಂದ ನಾನು ಸಾಲ ಕೊಡಿಸಿದೆ. ಪುಸ್ತಕ ಪ್ರಕಟವಾಯ್ತು.

ಇದನ್ನು ತಿಳಿದಾಗ ಇವರು ಕಣ್ಣು ಅರಳಿಸಿ, Who is that fool who gave you loan.. the Bank will dismiss him! ಎಂದು ನಕ್ಕರಂತೆ.

ರೂಪಾರಾಜ್ ಜೊತೆ ಆರ್.ಎಸ್.ಎನ್. ನೋಡಲು ನರಸಿಂಹರಾಜ ಮೊಹಲ್ಲದಲ್ಲಿದ್ದ ಅವರ ವಾಸಸ್ಥಳಕ್ಕೆ ಹೋದೆ. ನನಗೆ ಶಿಲ್ಪ-ಚಿತ್ರಕಲೆ ಬಗ್ಗೆ ಏನೂ ಗೊತ್ತಿಲ್ಲವಾದ್ದರಿಂದ ಅವರ ಜೊತೆ ಏನು ಮಾತನಾಡಬೇಕೆಂದು ಯೋಚಿಸುತ್ತಿದ್ದೆ.

ಅವರ ಮನೆ ವಾಸದ ಮನೆಯೂ ಹೌದು, ಕಲಾಶಾಲೆಯೂ ಹೌದು. ಪುಟ್ಟ ಮನೆ, ಮನೆ ಸುತ್ತ ಬಿದಿರು ದಬ್ಬೆಗಳಿಂದ ಅಡ್ಡಕ್ಕೆ ಪೌಳಿ ಕಟ್ಟಿತ್ತು. ನಾನು ಅಲ್ಲಿ-ನೋಡಿದ್ದು ಗಿಡಗಳ ಮರೆಯಲ್ಲಿ ಕುಕ್ಕರಗಾಲಿನಲ್ಲಿ ಕೂತು, ಒಂದು ಗಿಡದ ಸುತ್ತ ಪಾತಿ ಮಾಡುತ್ತ ಕುಡಿಯೊಡೆಯುತ್ತಿದ್ದ ಗಿಡಕ್ಕೆ ಮೃದುವಾಗಿ ನೀರೆರೆಯುತ್ತಿದ್ದ ಆರ್.ಎಸ್.ಎನ್. ಅವರನ್ನು.

"ನಮಸ್ಕಾರ.." ಎಂದೆ

"ಇವರೇ ನನಗೆ ಸಾಲ ಕೊಟ್ಟವರು" ಎಂದು ರೂಪರಾಜ್ ಪರಿಚಯಿಸಿದರು.

ಆರ್.ಎಸ್.ಎನ್. ಕೈ ಕುಲುಕಿದರು. ವ್ಯಕ್ತಿಯನ್ನು ನೋಡಿದೆ. ಕೆದರಿದ ತಲೆಗೂದಲು, ಸೂಕ್ಷ್ಮವಾದ ಕಣ್ಣುಗಳು, ಚೂಪಾದ ಮೂಗು, ಸ್ವಲ್ಪ ಬೊಚ್ಚು ಬಾಯಿ, ಚೂಪು ಗಡ್ಡ, ಮೂಗಿನ ಮೇಲೆ ಅರ್ಧಕ್ಕೆ ನಿಂತಿರುವ ಕನ್ನಡಕ, ಎಡಗೈಲಿ ಆರಿ ಹೋಗಿದ್ದ ಅರ್ಧ ಬೀಡಿಯ ಕೊರೆ. ದೊಗಲ ಚಡ್ಡಿ, ಅರೆ ತೋಳಿನ ಖಾದಿ ನಿಲುವಂಗಿ. ಮನೆಯ ಒಳ ಭಾಗ ಪ್ರಾಚೀನ ಕಾಲದ ಭಿತ್ತಿಚಿತ್ರಗಳ ಗುಹೆಯೇ ಹಾಗಿತ್ತು. ಪಾದರಸದಂತೆ

ಓಡಾಡುತ್ತಿದ್ದ ಆರ್.ಎಸ್.ಎನ್ ತಮಗೆ ತಾವೇ ಏನೋ ಗೊಣಗಿಕೊಳ್ಳುತ್ತಾ.. "I will make some tea" ಅಂತ ಕರಕಲಾಗಿದ್ದ ಅಲ್ಯೂಮಿನಿಯಮ್ ಡಬರಿಯಲ್ಲಿ ನೀರು, ಹಾಲು, ಟೀ ಪುಡಿ ಒಟ್ಟಿಗೆ ಹಾಕಿ ಕಾಯಿಸಿ, ಅದರ ತಿಳಿ ಬಗ್ಗಿಸಿ ಕುಡಿಯಲು ಕೊಟ್ಟರು. "show him my small studio" ಅಂತ ರೂಪರಾಜ್‌ಗೆ ಹೇಳಿದರು. ರೂಮನ್ನು ಒಮ್ಮೆ ನೋಡಿದೆ. ಎಲ್ಲಾ ಅಯೋಮಯ, ಅಲ್ಲಿ ಪೀಠದ ಮೇಲೆ ಕಲಾಕೃತಿ. ಇಲ್ಲಿ ಒಂದು ರೇಖಾಚಿತ್ರ, ಅರ್ಧ ಓದಿ ಮಡಚಿಟ್ಟಿರುವ ಪುಸ್ತಕಗಳು, ಯದ್ವಾತದ್ವ ಬಿದ್ದಿವೆ. ಕುಂಚಗಳ ರಾಶಿ.. ನೆಲದ ಮೇಲೆ ಬಣ್ಣದ ರಂಗುರಂಗು; ಅಲ್ಲಿ ಇಲ್ಲಿ ಬಿಸಾಡಿದ್ದ ಬೀಡಿ-ಸಿಗರೇಟು-ಚುಟ್ಟಾ ತುಂಡುಗಳು. ಗೋಡೆಯ ಪಕ್ಕ ಅರೆ ಕೊರೆದ ಶಿಲ್ಪಗಳು, ಮೂರ್ತಗೊಳ್ಳದ ವಿಗ್ರಹಗಳು, ನನಗೆ ಏನೂ ಅರ್ಥವಾಗದಿದ್ದರೂ ಅದನ್ನು ತೋರಗೊಡಲಿಲ್ಲ.

ಅಷ್ಟರಲ್ಲಿ ಒಬ್ಬ ಹುಡುಗ ಬಂದ. ತೆಲುಗಿನಲ್ಲಿ ಏನೋ ಹೇಳಿ ಚಿಲ್ಲರೆ ಹುಡುಕಿ ಕೊಟ್ಟರು. ಏನೋ ತರಲು ಹೇಳಿದರು. 'ಬ್ಯಾಂಕಿಗೆ ಬನ್ನಿ' ಅಂದೆ. "a penniless man coming to bank" ಅಂತ ಹೇಳ್ತ, ನನ್ನದು "austere living..of course, out of compulsion" ಅಂದರು. ಒಂದಷ್ಟು ಕಾಲ ಮಾತನಾಡಿದರು.

ಇನ್ನೊಂದು ದಿನ ಹೋಗಿದ್ದಾಗ, ಏನೋ ಓದುತ್ತಾ ಖುಷಿಯಾಗಿದ್ದರು. ಅವರ ರೇಖಾಚಿತ್ರಗಳ ರಾಶಿಯಿಂದ ಒಂದು ಚಿತ್ರ ಕೊಟ್ಟು "Tell me who is this?" ಅಂದರು. "Sir, this is Kailasam" ಅಂದೆ. 'ಆಂಜನೇಯನ ಮುಖ ಇದ್ದಹಾಗೆ ಇಲ್ವ?" ಅಂತ ಹೇಳಿ ನಕ್ಕರು. ಆರ್.ಎಸ್.ಎನ್. ಅವರಿಗೆ ಒಳ್ಳೆಯ ಹಾಸ್ಯ ಪ್ರವೃತ್ತಿ ಇತ್ತು. ಕೆಲವು ಸಾರಿ ವ್ಯಂಗ್ಯ, ಮೊನಚು, ನೋವು ಅವರ ಮಾತಿನಲ್ಲಿರುತ್ತಿತ್ತು.

ಆರ್.ಎಸ್.ಎನ್. ಅನೇಕ ದೊಡ್ಡ ವ್ಯಕ್ತಿಗಳ ಕಲಾಕೃತಿ ಸೃಷ್ಟಿಸಿದ್ದರು. ಅವರ ಧಾರಾಳತನದಿಂದಾಗಿ ಕೃತಿಗಳು ಇಲ್ಲವಾದವು. ರಷ್ಯಾ ಬ್ಯಾಲೆ ಅವರಿಗೆ ಇಷ್ಟ; ಕಮ್ಯುನಿಸಮ್ ಬಗ್ಗೆ ಒಲವು, ಅವರ ಮಾತುಕತೆಗಳಲ್ಲಿ ಶೇಕ್ಸ್‌ಪಿಯರ್, ಮಿಲ್ಟನ್, ಡಾಂಟೆ, ಕೀಟ್ಸ್, ಬರ್ನಾರ್ಡ್‌ಷಾ, ಕಾರ್ಲ್‌ಮಾರ್ಕ್ಸ್, ಹೆಗಲ್, ಕ್ಯಾಂಟ್.. ಹಾದು ಹೋಗುತ್ತಿದ್ದರು. ಮೇಲೆ ಗಾಂಧಿ, ನೆಹರು, ರಾಜೇಂದ್ರ ಪ್ರಸಾದ್, ಬೋಸ್ ಬಗ್ಗೆ ಮಾತನಾಡುತ್ತಿದ್ದರು. ಮಾತಿನ ಧಾಟಿಯೇ ವಿಚಿತ್ರ. ಏನೋ ಹೇಳುತ್ತಾ ಎಲ್ಲಿಗೋ ವಿಷಯಾಂತರ ಮಾಡುತ್ತಿದ್ದರು.

ಹೊರಕ್ಕೆ ವಾಯುವಿಹಾರಕ್ಕೋ ಮತ್ತಾವುದಕ್ಕೋ ಹೊರಟರೆ ಆರ್.ಎಸ್.ಎನ್ ಅವರು ಫುಲ್ ಡ್ರೆಸ್‌ನಲ್ಲಿರುತ್ತಿದ್ದರು. ಮೊಣಕಾಲು ಮುಚ್ಚುವಂಥ ಕೋಟು, ಅಲ್ಲಿ-ಇಲ್ಲಿ ಮಣಕು ಕಟ್ಟಿದ್ದ ಈ ಪುರಾತನ ಕೋಟಿಗೆ ಮೈತುಂಬಾ ಬಾಯಿಗಳು; ಎಲ್ಲೆಲ್ಲೂ ಜೇಬುಗಳು-ಕೆಲವದರಲ್ಲಿ ಕುಂಚಗಳು, ಪೆನ್ನು, ಪೆನ್ಸಿಲ್, ಓದಲು ಬೇಕಾದ ಚಿಕ್ಕ ಪುಸ್ತಕಗಳು, ಇನ್ನೊಂದೆಡೆ ಕೈಗೆ ಸಿಗುವ ಹಾಗೆ ಬೀಡಿಕಟ್ಟು, ಸಿಗರೇಟು ಪ್ಯಾಕು. ಕೆಳಗಡೆ ಭಾಗದ ಜೇಬಿನಲ್ಲಿ ಎರಡು ಕ್ವಾರ್ಟರ್ ಮದ್ಯದ ಬಾಟಲುಗಳು. ಕೈಲಿ ವಾಕಿಂಗ್ ಸ್ಟಿಕ್. ರಸ್ತೆಯಲ್ಲಿ ಓಡಾಡುವಾಗ ಅವರಿಗೆ ಮೈತುಂಬಾ ಕಣ್ಣು-ಮನೆಗೆ ಹಚ್ಚಿರುವ ಬಣ್ಣ, ಜನರ ದಿರಿಸಿನ ವೈಖರಿ, ತಳ್ಳುಗಾಡಿಯವನೊಡನೆ ಏನೋ ಮಾತು; ಮಕ್ಕಳನ್ನು ಕಂಡಾಗ ಬಾಯ್ತುಂಬಾ ನಗು, ನುರಿತ ನಟನಂತೆ ಆಂಗಿಕಾಭಿನಯ...

ಒಮ್ಮೆ ನನ್ನ Letter-Headಗೆ ಅಂತ ಚಕಚಕನೆ ಒಂದು ಚಿತ್ರ ಬಿಡಿಸಿ 'put this' ಅಂದರು. ಮತ್ತೊಮ್ಮೆ ಆರ್.ಎಸ್.ಎನ್. ತಮ್ಮ ೨೨ನೇ ಹರಯದಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಇದ್ದದ್ದನ್ನು ಜ್ಞಾಪಿಸಿಕೊಂಡರು. ಭೂಗತ ಕಾರ್ಯಕರ್ತರಾಗಿ ಗುಟ್ಟಾಗಿ ಕರಪತ್ರ ಹಂಚುವ ಕಾರ್ಯದಲ್ಲಿದ್ದದ್ದು, ಅಶೋಕ್ ಮೆಹ್ತಾ ಜೊತೆ ದುಡಿದದ್ದು, ಪೋತಾನ್ ಜೋಸೆಫ್ ಅವರಿಗೆ ಒಂದು ಶಾಲೆಯಲ್ಲಿ ನೌಕರಿ ಕೊಡಿಸಿದ್ದು-ಇಂಥ ಅನೇಕ ವಿಚಾರಗಳು ಮಾತಿನಲ್ಲಿ ಬಂದು ಹೋಗುತ್ತಿತ್ತು. ಆರ್.ಎಸ್.ಎನ್. ಯರವಾಡ ಜೈಲಿನಲ್ಲಿದ್ದಾಗ ಉಪವಾಸ ಸತ್ಯಾಗ್ರಹ ಮಾಡಿದ್ದರಂತೆ, "ಸುಭಾಷ್, ಗಾಂಧಿ, ಅಚ್ಚುತ ಪಟವರ್ಧನ್, ಜವಹರಲಾಲ್, ಕೃಪಲಾನಿ, ಅಶೋಕ್ ಮೆಹ್ತಾ, ಇವರೆಲ್ಲರ ಪರಿಚಯ ನನಗಿತ್ತು" ಎಂದು ಹೇಳುತ್ತಿದ್ದರು.

ಆರ್.ಎಸ್.ಎನ್. ಇಂಗ್ಲಿಷಿನಲ್ಲಿ ಸೊಗಸಾಗಿ ಮಾತನಾಡುತ್ತಿದ್ದರು. ಮಾತನಾಡುವಾಗಲೆಲ್ಲಾ ರಂಗಭೂಮಿಯ ಅನುಭವ ನಟರಂತೆ ಆಂಗಿಕಾಭಿನಯದಿಂದ ವಿಷಯ ಪ್ರತಿಪಾದಿಸುತ್ತಿದ್ದರು. ವಿಚಿತ್ರವಾದ ನಗೆ ಬೀರುತ್ತ, ಮಾತಿನ ಮಧ್ಯೆ ಏನಾದರೂ ಮರೆತು ಹೋದಾಗ ತಮ್ಮ ಎದೆ, ಹಣೆ, ನೆತ್ತಿಯನ್ನು ಪಟಪಟನೆ ಬಡಿದುಕೊಳ್ಳುತ್ತಿದ್ದರು.

"ನನಗೆ ನನ್ನ ತಲೆ ನುಚ್ಚು ನೂರಾದಂತೆ ಅನ್ನಿಸುತ್ತೆ... ಮೆದುಳನ್ನು ಚುಚ್ಚಿದಂತಾಗುತ್ತದೆ... ಮನಶ್ಶಾಸ್ತ್ರಜ್ಞರು ಈ ಗೊಂದಲವನ್ನು ಪರೀಕ್ಷೆಗೆ ಒಡ್ಡಬೇಕು ನಾನು ಎಲ್ಲಾ ಸಹಕಾರ ಕೊಡ್ತೀನಿ" ಅಂತ ಆರ್.ಎಸ್.ಎನ್. ಹೇಳಿದ್ದುಂಟು. ಹಾಗೆ ಆಗುತ್ತಿರಬಹುದು ಎಂದು ಒಮ್ಮೊಮ್ಮೆ ಅವರ ಜೊತೆಗಿದ್ದವರಿಗೂ ಅನಿಸುತ್ತಿತ್ತು.

ಆರ್.ಎಸ್.ಎನ್. ಜೈಲಿನಲ್ಲಿದ್ದಾಗ ಪಕ್ಕದ ಸೆಲ್‌ನಲ್ಲಿ ಗೋಗಟೆ ಅಂತ ಒಬ್ಬ ವ್ಯಕ್ತಿ ಇದ್ದರಂತೆ. ಆತ ಬೊಂಬಾಯಿ ಗವರ್ನರ್ ಮೇಲೆ ಗುಂಡು ಹಾರಿಸಿದ್ದ. ಅವನನ್ನು ಆಗಾಗ ಪೊಲೀಸರು ಬಂದು ಥಳಿಸುತ್ತಿದ್ದರಂತೆ. ಒಂದು ದಿನ ಆತ ಪೊಲೀಸರು ಬಂದಾಗ ಹತ್ತಿರದಲ್ಲಿದ್ದ ರುಬ್ಬುಗುಂಡೊಂದನ್ನು ಅನಾಮತ್ತಾಗಿ ಎತ್ತಿ ಅವರನ್ನು ಅಟ್ಟಿಸಿಕೊಂಡು ಹೋಗಿ ಓಡಿಸಿದನಂತೆ. ಇಂಥ ಎಷ್ಟೋ ಪ್ರಸಂಗಗಳು ಆರ್.ಎಸ್.ಎನ್. ಒಡಲಲ್ಲಿ!

ಆರ್.ಎಸ್.ಎನ್. ಪರಿಚಯವಿದ್ದವರಿಗೆ ಆಗಾಗ ಪೋಸ್ಟ್‌ಕಾರ್ಡಿನಲ್ಲಿ ಏನಾದರೂ ಬರೆದು ವಿಳಾಸ ಬರೆಯುವ ಪಕ್ಕದಲ್ಲಿ ರೇಖಾಚಿತ್ರ ಬಿಡಿಸುತ್ತಿದ್ದರು.

ಕೆಲವು ಕಾಲ ಆರ್.ಎಸ್.ಎನ್. ಬೆಂಗಳೂರಿನಲ್ಲಿದ್ದರು. ಟಿ.ಪಿ. ಕೈಲಾಸಂ ಅವರ ಪರಿಚಯವಿದ್ದು ಅವರಿಬ್ಬರ ಮಧ್ಯೆ ಏನಾದರೂ ವಿಷಯಕ್ಕೆ ಜಗಳ ನಡೆಯುತ್ತಿತ್ತು. ಕೈಲಾಸಂ ತಾವು ಸೇದುತ್ತಿದ್ದ ಸಿಗರೇಟು ತುಂಡನ್ನು ಕೆಳಗೆ ಎಸೆದು ಕಾಲಿನಿಂದ ಹೊಸಕಿದಾಗ– ಆರ್.ಎಸ್.ಎನ್. ಅಲ್ಲಿ ಕೆಳಗಿದ್ದ ಪರ್ಷಿಯನ್ ಕಾರ್ಪೆಟ್ ಕಂಡು.. 'TPK, Don't insult the Craftman who has spent his life time on it" ಅಂದಾಗ, ಕೈಲಾಸಂ ಮುಖ ಕೆಂಪಾಯಿತಂತೆ. ಇಷ್ಟಾದರೂ ಟಿ.ಪಿ.ಕೈಲಾಸಂ ರೇಖಾಚಿತ್ರಕ್ಕೆ ತಾವೇ ಶೀರ್ಷಿಕೆ ಕೊಟ್ಟಿದ್ದು, "TPK - The Great Humanist"

ಆರ್.ಎಸ್.ಎನ್. ಯಾರನ್ನೂ ಹೆಚ್ಚು ಅಂಟಿಸಿಕೊಂಡವರಲ್ಲ. ಅನಿಸಿದ್ದನ್ನು ಭಿಡೆಯಿಲ್ಲದೆ ಹೇಳುತ್ತಿದ್ದರು. ಅವರು ಒಮ್ಮೆ ಹೇಳಿದ್ದು–"ನನ್ನನ್ನು ನಂಬಿ.. ನಾನು ಸಮಾಧಿ ಸ್ಥಿತಿಗೆ ಹೋಗಿದ್ದ ಅನುಭವವಿದೆ. ನನ್ನ ದೃಷ್ಟಿಯಲ್ಲಿ ಸಮಾಧಿಯೆಂದರೆ ವ್ಯಕ್ತಿಗೆ ತನ್ನ ಕೆಲಸದಲ್ಲಿ ಇರಬೇಕಾದ ಸಿದ್ಧತೆ–ಏಕಾಗ್ರತೆ"

"ನೀವು ಕನ್ನಡ ಏಕೆ ಕಲಿಯಲಿಲ್ಲ?" ಅಂತ ಕೇಳಿದಾಗ ಅವರು "ವ್ಯವಹಾರಕ್ಕೆ ಬೇಕಾದಷ್ಟು ಬರುತ್ತೆ. ನೀವು ಯಾವುದೇ ಭಾಷೆ ಹೇಳಿ ಹತ್ತು ವರ್ಷದಲ್ಲಿ ಚೆನ್ನಾಗಿ ಕಲಿಯಬಲ್ಲೆ" ಅಂತ ಅಂದಿದ್ದರು.

ನಾಯ್ಡು ಸ್ವಲ್ಪ ಮುಂಗೋಪಿ. ಅವರ ಮನಸ್ಸಿಗೆ ವಿರುದ್ಧವಾದ ಮಾತು, ಕೆಲಸ ಅವರನು ಸಿಟ್ಟಿಗೇಳಿಸುತ್ತಿತ್ತು. ಒಮ್ಮೆ ಅವರ ಅತ್ತಿಗೆಗೆ ತಾವು ರಚಿಸಿದ ಒಂದು ಸುಂದರ ಬುದ್ಧನ ಪ್ರತಿಮೆ ಕೊಟ್ಟರಂತೆ,. ಅವರ ಅತ್ತಿಗೆ ಅದನ್ನು ಹಿಂದೆ – ಮುಂದೆ ತಿರುಗಿಸಿ ನೋಡಿ ಸಂತೋಷಪಟ್ಟು – "ಏನಿದರ ಬೆಲೆ?" ಎಂದು ಕೇಳಿದರಂತೆ. ಆರ್.ಎಸ್.ಎನ್. ಕೆರಳಿ, ಅತ್ತಿಗೆಯ ಕೈಲಿದ್ದ ಪ್ರತಿಮೆಯನ್ನು ಕಿತ್ತುಕೊಂಡು ಎರಡೂ ಕೈಗಳಿಂದ ನೆಲಕ್ಕೆ ಅಪ್ಪಳಿಸಿಬಿಟ್ಟರಂತೆ.

ನಾಯ್ಡು ಅದ್ಭುತ ಕಲಾವಿದರು. ಮಾನವೀಯ ಗುಣಗಳಿದ್ದವರು, ಅವರ ರೇಖಾಚಿತ್ರಗಳು, ಶಿಲ್ಪಗಳು, ಕಾಗದ, ಪತ್ರಗಳು, ಲೇಖನಗಳು ದಿಕ್ಕಾಪಾಲಾಗಿ ಹೋಗಿವೆ. ಕರ್ನಾಟಕವನ್ನು ತಮ್ಮ ನೆಲೆಯಾಗಿಸಿಕೊಂಡಿದ್ದು ಅಗಲಿಹೋದ ಈ ಕಲಾಯೋಗಿಗೆ ಅವರ ಶತಾಬ್ದಿ ವರ್ಷದಲ್ಲಿ ಅವರ ಕೃತಿಗಳನ್ನು ಕಲೆಹಾಕಿ ಒಂದು ಸ್ಮರಣ ಮಂದಿರ ನಿರ್ಮಿಸುವ ಕಾರ್ಯ ಕೈಗೊಳ್ಳಬೇಕಿದೆ.

*('ಪ್ರಜಾವಾಣಿ, ೨೨ ಏಪ್ರಿಲ್–೨೦೦೬)*





# ಆರ್. ಸೀತಾಪತಿ ನಾಯ್ಡು

■ *ಕೆ.ವಿ. ಸುಬ್ಬಣ್ಣ*

**ಒ**ಮ್ಮೊಮ್ಮೆ ಗಾಜಿನ ಮಣಿಗಳು ಪೇಟೆಯಲ್ಲಿ ವಜ್ರ ಎಂಬಂತೆ ದಿಬ್ಬಣ ಮೆರೆಯಿಸಿ, ಕಣ್ಣು ಕುಕ್ಕುವುದುಂಟು. ಹಾಗೆಯೇ ಬೆಲೆಯ ವಜ್ರ ಮಣ್ಣು ತಿನ್ನುತ್ತಾ ಕಣ್ಣು ತಪ್ಪಿಸಿಕೊಳ್ಳುವುದೂ ಉಂಟು ಒಮ್ಮೊಮ್ಮೆ. ಕೆಲವು ವರ್ಷ ದೂಡಿ ಕಳೆದರೆ ಒಂದು ಸಂವತ್ಸರಚಕ್ರ ಮುಗಿಸುವ ಶ್ರೀ ಆರ್. ಸೀತಾಪತಿ ನಾಯ್ಡು ಅವರು ಎರಡನೆಯ ಮಾತಿಗೊಂದು ನಿದರ್ಶನವಾಗಿದ್ದಾರೆ.

ಮೂಲ ಆಂಧ್ರದವರಾದರೂ ಕನ್ನಡದಲ್ಲೇ ಬಳಗ ಕಟ್ಟಿಕೊಂಡ ಒಂದು ಸುಸಂಸ್ಕೃತ ಮನೆತನ ಶ್ರೀ ನಾಯ್ಡು ಅವರ ತವರು. ಹಳೆಯ ಮೈಸೂರಿನ ಭಾಗಗಳಲ್ಲಿ ಅನಂತರ ಧಾರವಾಡದಲ್ಲಿ ಆಕರ್ಷಕ ನಿಪುಣ ವಿದ್ಯಾರ್ಥಿಯಾಗಿ ಅವರು ವಿಶ್ವವಿದ್ಯಾಲಯ ಶಿಕ್ಷಣವನ್ನು ಪಡೆದರು. ಶಾಲೆಯಲ್ಲಂತೋ ಅಂತೆಯೇ ಅದರ ಸಾಂಸ್ಕೃತಿಕ ಕ್ರೀಡಾ ವಲಯಗಳಲ್ಲಿಯೂ ಅವರು ತಮ್ಮ ಚಟುವಟಿಕೆಗಳಿಂದ ಬೆಳಗಿದರು. ಶಾಲೆಯ ದಿನಗಳಲ್ಲೇ ಅವರ ಕಲಾಪ್ರತಿಭೆ ಹೊಗರುದೋರಿದ್ದಿತು. ರಾಷ್ಟ್ರದ ಸ್ವಾತಂತ್ರ್ಯ ನವೋದಯಗಳು ಲಕ್ಷ್ಯವಾಗಿ ಹುರುಡಿನ ಮುಂಗಾರು ಜಡೆಗಟ್ಟಿದ್ದ ಆ ದಿನಗಳಲ್ಲಿ, ಅಂದಿನ ಗಾಳಿಯ ವಿಲಕ್ಷಣ ಪರಿಮಳ, ಮಾದಕತೆ, ಕಟು – ಎಲ್ಲವನ್ನೂ ನರನರಗಳಲ್ಲಿ ತುಂಬಿಕೊಂಡು ಅದರಲ್ಲಿಯೇ ವಿಲೀನವಾಯಿತು ಅವರ ಸೂಕ್ಷ್ಮ ವ್ಯಕ್ತಿತ್ವ. ಆಗಿನ ದಿನ ಅವರು ಭಾರತದ ಭಾಗಭಾಗಗಳಲ್ಲಿ ಸಂಚರಿಸಿದರು. ಇಂದಿನ ತಲೆಬರಹದ ನಾಯಕರುಗಳಿಗೆ ಒಡನಾಡಿಯಾಗಿ ಸಹಕಾರಿಯಾಗಿ ದುಡಿದರು. ಆಗಿನಿಂದ ಪ್ರಿಯವಾದ ಮಾರ್ಕ್ಸ್ ವಾದ ಅವರಿಗೆ ಒಂದು ಜೀವನದ ನಂಬಿಕೆಯಾಗಿ ಅಂಟಿಕೊಂಡಿದೆ. ಚಳವಳಿಗಳಲ್ಲಿ ಪತ್ರಿಕಾ ವ್ಯವಸಾಯದಲ್ಲಿ, ಸಂಘಟನೆಯಲ್ಲಿ, ದೇಶ ಕಾರ್ಯಗಳಲ್ಲಿ ಅಂದಿನ, ಆದರ್ಶಗಳಲ್ಲಿ ಜೀವ ಬೆರೆತಂತೆ ದುಡಿದರು. ಹಲವು ಭಾಷೆಗಳ ಜ್ಞಾನದಿಂದ ನಿಷ್ಕೃಷ್ಟ ವೈಜ್ಞಾನಿಕ ಮನೋಭಾವದಿಂದ ಅನೇಕ ವಿಷಯಗಳಲ್ಲಿ ಪಾಂಡಿತ್ಯವೆನ್ನಬಹುದಾದಂಥ ತಿಳಿವು ದೊರಕಿಸಿಕೊಂಡರು. ವಿಶಾಲ ಕಾರ್ಯಕ್ಷೇತ್ರ ಹಾಗೂ ಆ ಕಾರ್ಯಕ್ಷೇತ್ರದ ಕ್ಷಮೆ ಎಷ್ಟೋ ಅಷ್ಟೇ ತಿಳಿವು–ಇವುಗಳಿಂದ ಅವರ ಜೀವನ ಹತ್ತು, ಕಣ್ಣು ಸೆಳೆದು, ಹತ್ತು ಕಣ್ಣು ಕೊರೆಯುವಂಥದಾಯಿತು. ಒಮ್ಮೆ ಇಂಗ್ಲೆಂಡಿನ ತನಕ ಹೋಗಿ ಅದೇ ವೇಳೆ ದ್ವಿತೀಯ ಮಹಾಯುದ್ಧ ಜಗತ್ತಿನ ಹೊಸತಿಲೊಳಕ್ಕೆ ಹಣಿಕ್ಕಿಕ್ಕಲು ಹಿಂದೆ ಹಾರಿ ಬಂದರು.

... ಎಲ್ಲಾ ಬಗೆಯಿಂದ ಅವರ ಜೀವನದಲ್ಲಿ ಅದೊಂದು ನಿಲುಗಡೆಗೆ ಬರಬಹುದಾಗಿದ್ದ ಕಾಲ. ಆದರೆ, ಅದೇನು ಸ್ವಭಾವವೈಚಿತ್ರ್ಯವೋ ಸಾಮಾಜಿಕ ದುರ್ವ್ಯವಸ್ಥೆಯ ಫಲವೋ ಆವರಣಪೀಡೆಯೋ, ಹಾಗೆಂದರೆ ಅವರೇ ಹೀಯಾಳಿಸಬಹುದಾದ ವಿಧಿಯೋ ಅಥವಾ ಅವರು ನಮಗೆ ಅಷ್ಟಿಷ್ಟು ಮಾತ್ರ

ಭಾಸವಾಗಬಲ್ಲಂತೆ ಹೇಳುವ, ದುಷ್ಟವ್ಯಕ್ತಿಪ್ರಭಾವಿತವಾದ ಅನ್ಯರಿಗೆ ಅಸ್ಪಷ್ಟ ಅಗೋಚರವಾದ ಮಾನಸಿಕ ಮೂಲವಾದ ಚಿತ್ರಹಿಂಸೆಯೋ– ಏನೆಂದು ಹೇಳೋಣ? ಅಂತೂ ಆ ನೆಲೆಯಲ್ಲಿ "ಧನ್ಯೋಸ್ಮಿ" ಎನ್ನಬಹುದಾಗಿದ್ದ ಅಥವಾ ಭೂತತೃಪ್ತಿಯಿಂದ ಉತ್ತರೋತ್ತರ ಶಿಖರಗಳಿಗೆ ಏರಲು ನಡುಕಟ್ಟಬಹುದಾಗಿದ್ದ ಆ ಶ್ರೀಮಂತ ಜೀವ ನಿರ್ಭರ ವಿಷಾದದಲ್ಲಿ ಆಳ ಕಂಠಿಕುಳಿತಿತು. ಈ ವಿಷಾದಪರ್ವದಲ್ಲಿ ಕೊಚ್ಚುತ್ತಿದ್ದ ಆ ಜೀವಕ್ಕೆ ದೈಹಿಕವಾಗಿಯಾದರೂ ನಿಲುಗಡೆ ಅವರು ಎಂಟುಹತ್ತು ವರ್ಷ ಹಿಂದೆ ಬೆಂಗಳೂರಿನಲ್ಲಿ ನೆಲೆಸಿದ್ದಾಗ. ಈಚಿನ ಮೂರು ನಾಲ್ಕು ವರ್ಷಗಳಲ್ಲಿ ಮೈಸೂರು ನಗರದ ಒಂದು ಮೂಲೆ ಅವರನ್ನು ಅಡಗಿಸಿಕೊಂಡಿದೆ.

ಬೆಂಗಳೂರು–ಮೈಸೂರು ವಾಸ್ತವ್ಯದ ಈ ಕೆಲವು ವರ್ಷಗಳನ್ನು ಬಿಟ್ಟರೆ ಅದಕ್ಕೆ ಹಿಂದಿನ ಅವರ ಕಲಾಕೃತಿಗಳೇನಿದ್ದವೋ ತಿಳಿಯದು. ಅವರ ಪ್ರತಿಭೆ ಊರುದ್ದ ತುಂತುರು ಹನಿತು ಇಂಗಿ ಹೋಗಿರಬಹುದು. ಈ ಏಳೆಂಟು ವರ್ಷಗಳಲ್ಲಿ ಅವರು ಅಕ್ಷರಶಃ ಕೈದಿಯಂತೆಯೇ ದುರ್ಭರ ಏಕಾಂತ ಜೀವನದಲ್ಲಿ ಕ್ಷಣಗಳನ್ನು ತೇಯುತ್ತಿದ್ದಾರೆ. ಹಿಂದಿನ ಒಂದೆರಡು ಪ್ರಯತ್ನಗಳಿಂದ ವಿಫಲರಾಗಿ ಅವರು ಸಾವಿನ 'ಮಾರ್ಜಾಲ ಕಿಶೋರ ನ್ಯಾಯ'ವನ್ನು ನಂಬಿದ್ದಾರೆ: ಅದು ತಾನಾಗಿ ಮಗುವನ್ನು ಕಚ್ಚಿಕೊಳ್ಳಬೇಕಲ್ಲದೇ, ತಾನು ಅದನ್ನು ಅಪ್ಪಲಾರನೆಂದು. ಅವರು ಎಷ್ಟು ವರ್ಣಿಸಿದರೂ ನಮಗೆ ನೆಲೆ ತಿಳಿಯದ ಒಂದು ದುಷ್ಟಶಕ್ತಿದಲ ತಮ್ಮ ಏಕಾಂತದ ಸಹವಾಸಿಯೆಂದು ಅವರು ಹೇಳಿಕೊಳ್ಳುವುದುಂಟು. ಸಾವು ಹಿಂಜರಿದರೂ ರೋಗ ಅವರನ್ನು ಯಥೇಚ್ಛವಾಗಿ ರುಚಿ ನೋಡಿದೆ. ಈ ದಿನಗಳಲ್ಲಿ, ಬಳಕೆಯವರ ಕೂಡ ಸಂಭಾಷಿಸುವಾಗಿನ ಕೆಲವು ಉಜ್ವಲ ಕ್ಷಣಗಳನ್ನು ಬಿಟ್ಟರೆ, ಬೇರೆ ವೇಳೆ ಅವರ ಜೀವ–ಮಾನವ ಮಾಧ್ಯಮದಲ್ಲಿ ತನ್ನ ಜೀವಂತಿಕೆಯನ್ನು ಸಾಕ್ಷಾತ್ಕರಿಸಿಕೊಳ್ಳುವುದಕ್ಕೆಂಬಂತೆ–ಅದೂ ಅಪರೂಪವಾಗಿ ಪ್ರಾಯಃ ಅನಿವಾರ್ಯವಾಗಿ– ಕಲೆಯನ್ನು ಬಳಸಿಕೊಳ್ಳುತ್ತದೆ– ಇರಬೇಕು.

ಈ ವರ್ಷಗಳಲ್ಲಿ ಕನ್ನಡದ ಗಣನೀಯ ಸಂಖ್ಯೆಯ ಪುಸ್ತಕಗಳ ಹೊದಿಕೆ ಅವರ ಚಿತ್ರಗಳಿಂದ ಅಲಂಕೃತವಾಗಿದೆ. ಬೆಂಗಳೂರಿನಲ್ಲಿದ್ದಾಗ ಅಲ್ಲಿನ ಕೆಲವು ಪತ್ರಿಕೆಗಳು ಅವರ ಸಾಮಯಿಕ ವ್ಯಂಗಚಿತ್ರಗಳಿಂದ ಹಾಗೂ ಅದಕ್ಕಿಂತ ಮುಖ್ಯವಾಗಿ ಹಿರಿಯ ಹೆಸರುಗಳ ವ್ಯಕ್ತಿವ್ಯಂಜನ–ರೇಖಾಚಿತ್ರಗಳಿಂದ ಆಕರ್ಷಣ ಗಳಿಸಿದ್ದವು. ಈ ಅವಧಿಯಲ್ಲೇ ಅವರು ಪಿಂಗಾಣಿಯ ಮುಖಶಿಲ್ಪಗಳಲ್ಲಿ ಕೈಯಾಡಿಸಿದರು. ಅವುಗಳಲ್ಲಿ ಅವರ ಬುದ್ಧ, ಶಿವ, ಶಿವಪಾರ್ವತಿ, ಕ್ರಿಸ್ತ– ಇವು ಒಂದು ಬಗೆಯವು: ಸಂಪ್ರದಾಯವನ್ನು ಬಳಸಿಕೊಂಡರೂ ಶಕ್ತಿಪೂರ್ಣ ಲಾಲಿತ್ಯದಲ್ಲಿ ಕಲಾವಿದನ ಪ್ರತಿಭೆಯ ಸತ್ವವನ್ನೂ ಹೊಗಳುವಂಥವು. ಗಾರ್ಕಿ, ಲೆನಿನ್, ಸ್ಟಾಲಿನ್, ಗಾಂಧೀಜಿ, ಅರವಿಂದ, ಕುವೆಂಪು, ಬೇಂದ್ರೆ–ಈ ಮೊದಲಾದ ವ್ಯಕ್ತಿ ಭಾವಚಿತ್ರಗಳು ಇನ್ನೊಂದು ಬಗೆಯವು. ರೂಪಗುಣಗಳ ಮೇಳವನ್ನು ಸಾಧಿಸುವಲ್ಲಿ ಹಾಗೂ ರೂಪಾಂಶ ರೇಖಾಂಶಗಳಲ್ಲಿನ ಗುಣವ್ಯಂಜಕ ಧರ್ಮವನ್ನು ಅರಿತು, ಅವುಗಳಿಂದ ಸಂಕೇತಗಳನ್ನು ಸೃಷ್ಟಿಸುವಲ್ಲಿ ಇವರ ಶಕ್ತಿ ಪಡೆದುಕೊಂಡ ಸಿದ್ಧಿಗೆ ನಿದರ್ಶನಗಳವು. ಷಾ, ರಾಧಾಕೃಷ್ಣನ್, ಕೈಲಾಸಂ (ಇದು ಒಂದು ಮುಖಶಿಲ್ಪವಲ್ಲ, ಪ್ರತಿಮಾ ಸಂಕ್ಷೇಪಿಕೆ)–ಇವು ಮೂರನೆಯ ಬಗೆ: ರೂಪರೇಖೆಗಳನ್ನು ಸಂಕೇತಕ್ಕೆ ಅಳವಡಿಸಿಕೊಂಡು ಉತ್ಪ್ರೇಕ್ಷಿಸಿದ ವ್ಯಕ್ತಿ–ವ್ಯಂಜನಗಳು. ಇತ್ತೀಚಿನ ಅವರ ಸರಣಿ ಉಬ್ಬಟ್ಟಿನಲ್ಲಿನ ವ್ಯಕ್ತಿಚಿತ್ರಣಗಳು. ಈ ಫಲಕ ಮುಖಶಿಲ್ಪಗಳಲ್ಲಿ ಗಾಂಧೀಜಿ, ಮಯಕೋವ್ಸ್ಕಿ ಬಿಎಂಶ್ರೀ ವಲ್ಲತ್ತೋಳ್, ಪ್ರೇಮಚಂದ್ ಮೊದಲಾದವಿವೆ. ಇನ್ನು, ಅವರ ಬಳಿ ಬಳಕೆಯಲ್ಲಿರುವ ಚಿತ್ರಪತ್ರಗಳ ಸಂಗ್ರಹಗಳು ಕೂಡಾ ಭಿನ್ನಾಭ್ರದಂತೆ ನಶಿಸುವುದರಲ್ಲಿರುವ ಅವರ ಘನಪ್ರತಿಭೆಯನ್ನು ಮನಗಾಣಿಸಿಕೊಡಬಲ್ಲವು.

ಆ ವ್ಯಕ್ತಿಯ ಪರಿಚಯ ಮಾಡಿಕೊಳ್ಳಿ, ಅವರ ವ್ಯಕ್ತಿತ್ವದ ಮುಂದೆ ಕೃತಿಗಳು ಹುಲು ಎನ್ನಿಸುತ್ತವೆ. ಅವರ ಕೃತಿಗಳನ್ನು ಎದುರು ಹೊಗಳ ಹೋದರೆ ಒಮ್ಮೊಮ್ಮೆ ಅವರೇ ಅವುಗಳ ಅಲ್ಪತ್ವ ಎತ್ತಿ ಆಡಿ ನಿಮ್ಮನ್ನು ಮಾತುಗೆಡಿಸುತ್ತಾರೆ. ಹಾಗೆಂದು, ಅವುಗಳಲ್ಲಿ ನೀವು ಕಂಡಿರಬಹುದಾದ ಕುಂದನ್ನು ಸೂಚಿಸಿದಾಗ ಒಮ್ಮೊಮ್ಮೆ ಅವರು ವಾಕ್ಚಾತುರ್ಯದಿಂದ ಅದನ್ನು ಸಮರ್ಥಿಸಿಕೊಂಡು, ಆ ಕಾಲಕ್ಕಾದರೂ ನಿಮ್ಮನ್ನು ಮರಳುಗೊಳಿಸಿ, ಬಾಯಿ ಮುಚ್ಚಿಸಿಯಾರು. ಅವರು ಪಾಶ್ಚಾತ್ಯ ಕಲಾ ಸಂಪತ್ತಿಗೆ ಸೂರೆ ಹೋದವರು. ಹೊತ್ತು ಸಿಕ್ಕಾಗಲೆಲ್ಲಾ ತಮ್ಮ ಶಿಲ್ಪಾದಿಗಳಲ್ಲಿನ 'ಸಮಯ' ಸಂಕೋಲೆಗಳನ್ನು ಎತ್ತಿ ಕಾಣಿಸಿ ಲೇವಡಿ ಮಾಡಲು ಮರೆಯುವವರಲ್ಲ. ಹಾಗಿದ್ದರೂ ನಮ್ಮದೇ ಆದ ಯಾವುದೊಂದು ಕೃತಿಯ– ಅದು ಪ್ರಾಚೀನವಿರಲೀ,

ಅರ್ವಾಚೀನವಿರಲಿ–ಆಸ್ವಾದನಕ್ಕೆ ಅವರ ವ್ಯಾಖ್ಯೆಯೇ ಬೇಕೆನಿಸುತ್ತದೆ. ನಮ್ಮ ವಾಸ್ತುಶಿಲ್ಪವಿರಲಿ, ವಿಗ್ರಹಶಿಲ್ಪವಿರಲಿ, ಅವುಗಳ ಮರ್ಮವನ್ನು ಸುಲಭ ಮೀಟಬಲ್ಲರು ಅವರು.

ಚಿತ್ರಶಿಲ್ಪಗಳು ಅವರ ವೃತ್ತಿ. ಕಾವ್ಯ ಸಂಗೀತಾದಿ ಇತರ ಕಲೆಗಳಲ್ಲಾದರೂ ಅವರ ಆಸಕ್ತಿ ತಿಳಿವು ಕಡಿಮೆಯಿರಲಿಲ್ಲ. ಕಾವ್ಯಗಳನ್ನು ಕುರಿತು ಅವರು ಮಾತನಾಡುವಾಗ ಇವರು ಯಾವುದೋ ಕಾಲೇಜಿನ ಪ್ರಾಧ್ಯಾಪಕರಿರಬಹುದೆಂದು ನೀವು ಸಂಶಯಿಸಿದರೆ, ಆಶ್ಚರ್ಯವಿಲ್ಲ. ಇಂಗ್ಲಿಷಿನಲ್ಲಿ ಅವರಿಗಿರುವ ಸಲುಗೆ ಅಸಾಧಾರಣವಾದುದ್ದು. ಅವರು ಹಿಂದೆ ಏನು ಬರೆದಿದ್ದರೋ, ಈಚೆ ಬರೆದದ್ದು ತೀರಾ ವಿರಲ: ಕೇವಲ ಮೂರು ನಾಲ್ಕು ಇಂಗ್ಲಿಷ್ ಲೇಖನಗಳು. ಅವುಗಳಲ್ಲಿನ ವಿಚಾರಶಕ್ತಿ, ತರ್ಕಕ್ಷಮೆ ಮಾತ್ರ ಅವಿರಲವಾದದ್ದು.

ಮಾತ್ರವಲ್ಲ, ವಿಜ್ಞಾನ–ವ್ಯವಹಾರಿಕ–ಜ್ಞಾನಗಳ ಕ್ಷೇತ್ರಕ್ಕಿಳಿದರೂ ನೀವು ಬೆರಗಾಗುವಂತೆ ಮಾತನಾಡಬಲ್ಲವರು. ತಮಗೆ ಸತತ ಅಂಟಿಕೊಂಡ ಆಹಾರ ನಲಿಕೆಯ ರೋಗ ಕುರಿತು ಅವರು, ಬಲ್ಲ ವೈದ್ಯರಿಗಿಂತ ಹೆಚ್ಚು ವಿಶ್ವಾಸದಿಂದ ನಿಮಗೆ ತಿಳಿಸಿಕೊಡಬಲ್ಲರು. ನಿಮ್ಮನ್ನು ನೋಡುನೋಡುತ್ತಲೇ ಅವರು ನಿಮ್ಮ ಕೋಟು ಹೊಲಿದ ದರ್ಜಿಯ ಅಚಾತುರ್ಯವನ್ನೋ, ಎಂಥ ಸುಲಭ ಕೈಚಳಕದಿಂದ ನಿಮ್ಮ ಕ್ಷೌರಿಕ ನಿಮ್ಮ ಮುಖಾಕೃತಿಯನ್ನು ಸುಷ್ಠುಗೊಳಿಸಬಹುದಾಗಿತ್ತೆಂಬುದನ್ನೊ, ಸಂಕೋಚವಿಲ್ಲದೆ ಸಾಧಾರ ಹೇಳಿಯಾರು. ಮನೆ ಕಟ್ಟಿಸುತ್ತೀರೆ, ಅಡುಗೆ ಮನೆಯ ಹೊಗೆ ನಳಿಕೆ ಬದಲಿಸುತ್ತೀರೇ–ಅದಕ್ಕೆಲ್ಲಾ ಸೌಲಭ್ಯದ ಹೊಸ ಸಲಹೆಗಳು ಅವರ ಬಳಿ ಇವೆ.

.. "ಇದೆಂಥಾ ಅಸಾಧಾರಣ ವ್ಯಕ್ತಿಯಪ್ಪ?" ಎಂದು ಉದ್ಗಾರ ತೆಗೆಯುತ್ತಾ ಈ ಬೆರಗನ್ನೆಲ್ಲ ಉಂಡು ನೀವು ಅವರೊಳಕ್ಕೆ ಇನ್ನಷ್ಟು ಪ್ರವೇಶಿಸಬೇಕು. ಎಲ್ಲಕ್ಕೂ ಮೀರಿದ ಇನ್ನೊಂದು ಆಶ್ಚರ್ಯ ನಿಮಗೆ ಎದುರಾಗುತ್ತದೆ. ಅದೇ–ಇಷ್ಟೆಲ್ಲಾ ತುಂಬಿಕೊಂಡ ಈ ಜೀವದ ಮನಸ್ಸು ಮಗುವಿನಂತೆ, ಮೊಗ್ಗೆಯಂತೆ ಎಷ್ಟೊಂದು ಮುಗ್ಧ ಎಂಬುದು.

ಅವರ ಸಂದರ್ಶನ ಪಡೆದು ಬಂದಾಗ ನಿಮಗೆ ಅಪಾರಶಕ್ತಿಯ ಅರಣ್ಯಾಪಾತವೊಂದನ್ನು ಸಂದರ್ಶಿಸಿ ಬಂದ ಅನುಭವವಾಗದಿರದು.

*("ನಡೆದು ಬಂದ ದಾರಿ" ಸಂಪುಟದಿಂದ*
*ಪ್ರಕಾಶಕರು: ಮನೋಹರ ಗ್ರಂಥ ಮಾಲೆ, ಧಾರವಾಡ)*







# ವಿಶಾಲ ಮನಸ್ಸಿನ ವಿಕ್ಷಿಪ್ತ ಕಲಾವಿದ ಆರ್.ಎಸ್.ಎನ್.

■ *ಬಿ.ಎಸ್. ವೆಂಕಟಲಕ್ಷ್ಮಿ*

**ವಾ**ರ್ತಾ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದ ದಿನಗಳು. ಈ ಇಲಾಖೆ ಅನೇಕ ಮರಿ ಕಲಾವಿದರಿಗೆ ಬಿಡುವಿನ ವೇಳೆಯಲ್ಲಿ ಒಂದು ಅಡ್ಡೆ. ಎಲ್ಲಿಗೋ ಹೊರಟಿರುತ್ತಿದ್ದ ಕೆಲವು ಕಲಾವಿದರು ದಾರಿ ಮಾರ್ಗದಲ್ಲಿ ನನ್ನ ಕಚೇರಿಗೂ ಭೇಟಿ ನೀಡಿ ಕಾಫಿ ಸಿಗರೇಟುಗಳ ಮಧ್ಯೆ ಹರಟುತ್ತಿದ್ದರು ಅದೂ ಇದೂ ವಿಷಯಗಳನ್ನು. ಈಗಿನ ಕಾಲದಲ್ಲಾಗಿದ್ದರೆ ಹಲವಾರು ಮೆಗಾ ಧಾರಾವಾಹಿಗಳಿಗೆ ವಸ್ತುವನ್ನು ಒದಗಿಸುವ ಸಾಧ್ಯತೆ ಇದ್ದಂಥ ನಿಜಜೀವನದಲ್ಲಿನ ರಂಗುರಂಗಿನ ಎಪಿಸೋಡ್‌ಗಳನ್ನು.

ಇಂಥ ಪ್ರಕರಣಗಳ ವ್ಯಾಖ್ಯಾನದ ಮಧ್ಯದಲ್ಲೇ ಆಗಿಂದಾಗ್ಗೆ ಚರ್ಚೆಗೆ ಒಳಗಾಗುತ್ತಿದ್ದವರು ಆರ್.ಎಸ್. ನಾಯ್ಡು. ನಮಗೆಲ್ಲರಿಗೂ ಆಗ ಚಿಕ್ಕ ವಯಸ್ಸು. ಎಲ್ಲವನ್ನೂ, ಎಲ್ಲರನ್ನೂ, ಕೌತುಕದಿಂದಲೇ ದಿಟ್ಟಿಸಿ ನೋಡುವಂಥ ಕಣ್ಣುಗಳು. ವ್ಯಕ್ತಿಯೊಬ್ಬನ ಸುತ್ತ ಏನೋ ನಿಗೂಢವಿದೆ ಎಂದು ತಿಳಿದರೆ ಸಾಕು, ಮನಸ್ಸಿನಲ್ಲಿ ಅದೇನೋ ಧಾವಂತ. ಸುತ್ತಮುತ್ತಲಿನ ಬದುಕನ್ನೆಲ್ಲಾ ಬಗೆದು ನೋಡುವ ತಾಕತ್ತಿದ್ದುದು ನಮಗೆ ಮಾತ್ರ ಎಂಬ ಯಾವುದೋ ಭ್ರಮೆ. ತಾರುಣ್ಯ ಜೀವನದ ಬಹು ಮುಖ್ಯ ಹಂತದಲ್ಲಿದ್ದ ನಾನು ಹಾಗೂ ನನ್ನ ಕಲಾವಿದ ಗೆಳೆಯರು ಆರ್.ಎಸ್. ನಾಯ್ಡು ಅವರ ಬಗ್ಗೆ ಆಡಿದ್ದೇ ಆಡಿದ್ದು. ಹಾಗೆ ನೋಡಿದರೆ ನಾಯ್ಡು ಅವರ ಬಗ್ಗೆ ನನ್ನಲ್ಲಿ ಎಲ್ಲಿಲ್ಲದ ಕುತೂಹಲ ಹುಟ್ಟಿಸಿದ್ದ ಈ ಮರಿ ಕಲಾವಿದರ ಪೈಕಿ ಅವರನ್ನು ಪ್ರತ್ಯಕ್ಷವಾಗಿ ಕಂಡಿದ್ದವರು ಇಬ್ಬರೋ ಮೂವರೋ. ಕಪ್ಪಗೆ ಗಿಡ್ಡನಾಗಿದ್ದಾರೆ ಎಂದು ಖಚಿತವಾಗಿ ಹೇಳಿದ್ದವನ್ನೊಬ್ಬ. ತಲೆಗೂದಲು ಬೆಳ್ಳಗಾಗಿದೆ, ಗಡ್ಡಾನು ಬಿಳಿ. ಮೈ ತೀರಾ ಬಡಕಲೇ ಎಂದಿದ್ದ ಮತ್ತೊಬ್ಬ. ಸಾಮಾನ್ಯವಾಗಿ ಅವರ ಡ್ರೆಸ್ ಶರ್ಟು, ಬಿಳಿ ಲುಂಗಿ. ಒಂದೊಂದು ಸಲ ಮಾತ್ರ ಪ್ಯಾಂಟಂತೆ ಎಂದು ಸೇರಿಸಿದ್ದ ಇನ್ನೊಬ್ಬ. ಎಷ್ಟಾದರೂ ಕಲಾವಿದರು. ಮಾತಿನ ಸಂಭ್ರಮದಲ್ಲೇ ಅವರ ಮನಸ್ಸು ಪ್ರಾಯಶಃ ಆರ್.ಎಸ್. ನಾಯ್ಡು ಅವರ ವ್ಯಕ್ತಿತ್ವವನ್ನು ಅಳತೆ ಮಾಡುವಲ್ಲಿ ಮಗ್ನವಾಗಿರುತ್ತಿತ್ತು. ಆರ್.ಎಸ್. ನಾಯ್ಡು ಅವರನ್ನು ಕಂಡಿರದಿದ್ದ ನಮ್ಮಲ್ಲಿನ ಕೆಲವರು ಆನೆಯನ್ನು ಮುಟ್ಟಿ ಅದರ ಆಕೃತಿಯನ್ನು ಬಣ್ಣಿಸ ಹೊರಟ ಕುರುಡರಂತೆ. ಅವರಿವರಿಂದ ಸಂಗ್ರಹಿಸಿದ ವಿವರಗಳನ್ನೇ ಆಧರಿಸಿ ನಮ್ಮದೇ ಆದ ಗುಮಾನಿಗಳನ್ನು, ನಿರ್ಣಯಗಳನ್ನು ಠರಾವು ಮಾಡತೊಡಗಿದ್ದೆವು. ಸಂಪರ್ಕಕ್ಕೆ ಬಂದವರಿಗೆಲ್ಲಾ ಸ್ನೇಹ ಹಸ್ತವನ್ನು ಒಡ್ಡುವ ಆರ್.ಎಸ್. ನಾಯ್ಡು ತಮ್ಮ ಸ್ವಂತ ಬದುಕಿನಲ್ಲಿ ಮಾತ್ರ ಏಕೆ ಒಂಟಿಯಾಗೇ ಉಳಿದುಬಿಟ್ಟಿದ್ದಾರೆ? ತಮ್ಮ ಅಪ್ರತಿಮ ಕಲಾಕೃತಿಗಳಿಗೆ

ಭಾರತೀಯ ಚಿತ್ರಕಲೆಯಲ್ಲೇ ಸ್ಥಿರವಾದ ಸ್ಥಾನವನ್ನು ಕಲ್ಪಿಸಿಕೊಡುವ ಸಾಮರ್ಥ್ಯ ಇದ್ದರೂ, ತಾವು ಮಾತ್ರ ಎಂದೂ ಒಂದೆಡೆ ನಿಲ್ಲದೆ ಜಂಗಮನಂತೆ ಏಕೆ ಅಲೆದಾಡುತ್ತಿದ್ದಾರೆ? ಮಾಟವಾದ ನೂರಾರು ಗೆರೆಗಳಿಂದ ಮನಮೋಹಕ ಚಿತ್ರಗಳನ್ನು ರಚಿಸಿದರೂ ತಮ್ಮ ಬದುಕನ್ನು ಮಾತ್ರ ವಕ್ರ ಹಳಿಗಳಿದ್ದ ಹಾದಿಯಲ್ಲೇ ಏಕೆ ನಡೆಸುತ್ತಿದ್ದಾರೆ? ಇಂತಹ ಪ್ರಶ್ನೆಗಳೆಲ್ಲಾ ನಮ್ಮ ಮಧ್ಯೆ ಹುಟ್ಟಿಕೊಂಡರೂ ಉತ್ತರವಿಲ್ಲದೆಯೇ ಪರದಾಡುತ್ತಿದ್ದೆವು. "ಸರಿ. ಇನ್ನು ಹೊರಟೆವು. ಆರ್.ಎಸ್. ನಾಯ್ಡುಗೆ ಜೈ. ಮತ್ಯಾವಾಗಲಾದ್ರೂ ಕಂಟಿನ್ಯೂ ಮಾಡೋಣ?" ಅಂತ ನನ್ನ ಗೆಳೆಯರು ತಾವು ಸೇದಿ ಮುಗಿಸಿರುತ್ತಿದ್ದ ಸಿಗರೇಟಿನ ತುಂಡನ್ನು ash trayಗೆ ಒತ್ತಿ ಹೊರಟ ಮೇಲೂ ನಾನು ಅದೆಷ್ಟೋ ಹೊತ್ತು ಆರ್.ಎಸ್. ನಾಯ್ಡು ಅವರ ಗುಂಗಿನಲ್ಲೇ ಕೂತಿರುತ್ತಿದೆ. ತೀರ ಹತ್ತಿರದಲ್ಲೇ, ಪಕ್ಕದ ಮೈಸೂರಿನಲ್ಲೇ ಇದ್ದರೂ ಇವರು ನಮಗೆಲ್ಲ ಕಾಣಿಸಿಕೊಳ್ಳೋದೇ ಇಲ್ಲವಲ್ಲ ಎಂದು ಪರಿತಪಿಸುತ್ತಾ. ನಾಯ್ಡು ಕುರಿತಂತೆ ನಮ್ಮ ಈ ತನಿಖೆ ಹೀಗೆ ಮುಂದುವರಿದಿದ್ದಾಗಲೇ ವರ್ಷಗಳು ಕಳೆದಿದ್ದವು. ನಮಗೆಲ್ಲರಿಗೂ ವಯಸ್ಸಾಗತೊಡಗಿತ್ತು. ೧೯೮೫ರಲ್ಲಿ ಒಂದು ದಿನ ನಮಗೆ ಪತ್ರಿಕೆಗಳ ಮೂಲಕ ಸುದ್ದಿ ತಲುಪಿತ್ತು. ನಾಯ್ಡು ಗಂಟಲು ಕ್ಯಾನ್ಸರ್‌ನಿಂದ ತೀರಿಕೊಂಡರು ಎಂದು. ಮರಿ ಕಲಾವಿದರು ಆತ್ಮೀಯನೊಬ್ಬನನ್ನು ಕಳೆದುಕೊಂಡವರಂತೆ ನೀರು ತುಂಬಿದ ಕಣ್ಣುಗಳಿಂದ ನನ್ನನ್ನು ಮೌನವಾಗಿ ದಿಟ್ಟಿಸಿದಾಗ, ನಾನು ತಲೆ ತಗ್ಗಿಸಿದ್ದೆ. ಆರ್.ಎಸ್. ನಾಯ್ಡು ಅವರನ್ನು ಕಾಣುವ ಅವಕಾಶ ಖಾಯಂ ಆಗಿ ನನ್ನ ಪಾಲಿಗೆ ಮುಚ್ಚೇ ಹೋಯಿತಲ್ಲಾ ಎಂಬ ಹತಾಶೆಯಿಂದ.

ಮೊನ್ನೆ ಮೊನ್ನೆ ಬೆಂಗಳೂರಿನಲ್ಲಿ ಯಾವುದೋ ಪೈಂಟಿಂಗ್ ಎಗ್ಸಿಬಿಶನ್. ಅದೇಕೋ ಮತ್ತೆ ಆರ್.ಎಸ್. ನಾಯ್ಡು ನೆನಪಾಗಿದ್ದರು. ಸರಳ ಗೆರೆಗಳ ಮೂಲಕವೇ ಅದ್ಭುತ ಚಿತ್ರಗಳನ್ನು ಮೂಡಿಸುತ್ತಿದ್ದ ತೀರಾ ಅಪರೂಪದ ಕಲಾವಿದ. ವಿಮರ್ಶಕರ ಮಾತಿನಲ್ಲಿ ಹೇಳುವುದಾದರೆ ಬ್ಲೇಕ್, ಎಲ್ ಗ್ರೇಕೋ, ರೋದಾ, ದೇಗಾಸ್ ಮುಂತಾದವರ ಸಾಲಿನಲ್ಲಿ ನಿಲ್ಲಬಲ್ಲ ಪ್ರತಿಭೆಯಿದ್ದ ಆರ್.ಎಸ್.ಎನ್. ಮನೆಗೆ ಬಂದೊಡನೆ ನಾನು ಹುಡುಕಿದ್ದು, ಬಿ.ವಿ.ಕೆ. ಶಾಸ್ತ್ರಿಗಳು ಬರೆದಿರುವ "ಬ್ಯಾಲೆಗೆ ಭ್ರಮಿಸಿದ ಆರ್.ಎಸ್.ಎನ್." ಎಂಬ ಪುಸ್ತಕ. ಪುಸ್ತಕದ ತುಂಬಾ ನಾಯ್ಡು ರಚಿಸಿದ ಬ್ಯಾಲೆ ನರ್ತಕಿಯರ ರೇಖಾ ಚಿತ್ರಗಳು. "ನೃತ್ಯದ ಲಯಕ್ಕೆ, ಅದಕ್ಕನುಸಾರವಾದ ನರ್ತಕಿಯ ಚಲನಕ್ಕೆ, ಅಂಗಾಂಗಗಳ ತಿರುವುಗಳಿಗೆ ಮನಸೋತಿದ್ದರು ಆರ್.ಎಸ್.ಎನ್. ರಷ್ಯಾದ ಬ್ಯಾಲೆ ಅವರನ್ನು ಸಮ್ಮೋಹನಗೊಳಿಸಿತ್ತು". ಎಂದೋ ಮಾಡಿಕೊಂಡಿದ್ದ ನೋಟ್ಸ್‌ನಲ್ಲಿ ಮತ್ತಷ್ಟು ವಿವರಣೆ ದೊರೆತಿತ್ತು. "ಆರ್.ಎಸ್.ಎನ್. ಗೆರೆಗಳು ಕುಣಿಯುತ್ತವೆ. ಬಾಗಿ ಬಳುಕುತ್ತವೆ. ತಾಕಲಾಡುತ್ತವೆ. ಕೈಹಿಡಿದು ಕುಲುಕುತ್ತವೆ. ಮೇಲೆರಗಿ ಮಸೆಯುತ್ತವೆ. ಯಾವುದೂ ಸೆಟೆದು ನಿಲ್ಲುವುದಿಲ್ಲ-ರೇಖೆಗೊಂದು ಜೀವವಿದೆ. ಅದರದ್ದೆ ಪ್ರವೃತ್ತಿಗಳಿವೆ ಎಂಬುದು ತಿಳಿಯುವುದು ಆರ್.ಎಸ್.ಎನ್. ಚಿತ್ರಗಳಿಂದ ರೇಖೆಗಳ ಮೇಲೆ ಇವರಿಗಿದ್ದ ಆಧಿಪತ್ಯವೇ ಅದ್ಭುತ". ಇದೇ ಗುಂಗಿನಲ್ಲಿ ನಾನು ಭೇಟಿ ನೀಡಿದೆ. ಆರ್.ಎಸ್.ಎನ್. ಅವರನ್ನು ಹತ್ತಿರದಿಂದ ಕಂಡಿದ್ದ ಶ್ರೀ ಕೆ.ಎಲ್. ಗೋಪಾಲಕೃಷ್ಣರಾವ್ ಅವರ ಮನೆಗೆ. ಪ್ಲಾಸ್ಟರ್ ಆಫ್ ಪ್ಯಾರಿಸ್‌ನಿಂದ ಮ್ಯಾಗ್ಸಿಂ ಗಾರ್ಕಿ, ಮಾಯ್ಕೋವೆಸ್ಕಿ, ಟಾಲ್‌ಸ್ಟಾಯ್, ಬರ್ನಾರ್ಡ್‌ಷಾ, ಗಾಂಧಿ, ನೆಹ್ರೂ, ರಾಧಾಕೃಷ್ಣನ್, ವಲ್ಲತೋಲ್, ಪ್ರೇಮ್‌ಚಂದ್, ಅರವಿಂದೋ, ಕೈಲಾಸಂ, ಬಿ.ಎಂ.ಶ್ರೀ, ಬೇಂದ್ರೆ ಇವರೆಲ್ಲರ ಆಕೃತಿಗಳನ್ನು ಅತ್ಯದ್ಭುತವಾಗಿ ರಚಿಸಿದ್ದ ಆರ್.ಎಸ್.ಎನ್. ತಮಗೆ ಪ್ರೀತಿಯಿಂದ ನೀಡಿದ್ದ ಸೌಮ್ಯ ಮುಖದ ಬುದ್ಧನ ಶಿಲ್ಪವನ್ನು ಹೆಮ್ಮೆಯಿಂದ ತೋರಿಸುತ್ತಲೇ ಗೋಪಾಲಕೃಷ್ಣರಾವ್ ಮರೆಯಾದ ತಮ್ಮ ಗೆಳೆಯನನ್ನು ಅಕ್ಕರೆಯಿಂದ ನೆನಪು ಮಾಡಿಕೊಂಡಿದ್ದರು. ಆರ್.ಎಸ್.ಎನ್. ರಚಿಸಿದ ವ್ಯಂಗ್ಯಚಿತ್ರಗಳೆಷ್ಟೋ! ಅದೆಷ್ಟು ಸಾಹಿತಿಗಳು ತಮ್ಮ ಪುಸ್ತಕಗಳಿಗೆ ಇವರಿಂದ ಮುಖ ಪುಟಗಳನ್ನು ಪಡೆದುಕೊಂಡರೋ! ಧಾರಾಳ ಮನಸ್ಸು, ಸಾಮಾನ್ಯ ಮಾಡುತ್ತಿದ್ದುದೆಲ್ಲ ಪುಕ್ಕಟೆ ಕೆಲಸ. ದುಡ್ಡು ಪಡೆದರೂ ಅದು ತಮ್ಮ ಹೊಟ್ಟೆ ಹೊರೆದುಕೊಳ್ಳಲು ಅಗತ್ಯವಿದ್ದಷ್ಟು ಮಾತ್ರ. ಸ್ನೇಹಿತರಿಗೆ ಬರೆಯುತ್ತಿದ್ದ ಪತ್ರಗಳು, ಅಂಚೆ ಕಾರ್ಡುಗಳು, ಶುಭಾಶಯ ಸಂದೇಶಗಳು ಇವುಗಳ ಮೇಲೂ ನಾಯ್ಡು ಮೂಡಿಸಿರುತ್ತಿದ್ದರು, ಅಂದದ ರೇಖಾ ಚಿತ್ರಗಳನ್ನು. ಅಂಚೆ ಕಚೇರಿಯಲ್ಲಿ ಪೋಸ್ಟ್ ಬಾಕ್ಸ್ ಮುಂದೆ ನಿಂತೇ ಪತ್ರಗಳ ಮೇಲೆ ಗೆರೆಗಳಿಂದ ವಿನ್ಯಾಸ. ಸಂದೇಶವೊಂದಕ್ಕೆ ಸೌಂದರ್ಯವನ್ನು ಲೇಪಿಸಬೇಕೆಂಬ ಅಮಿತ ಉತ್ಸಾಹ! ಬರೆದಿದ್ದು, ರೂಪಿಸಿದ್ದು ನೂರಾರು ಕೃತಿಗಳನ್ನು. ಆದರೆ ಉಳಿಸಿಕೊಂಡಿದ್ದು ಮಾತ್ರ ಇಲ್ಲವೇ ಇಲ್ಲ. ಈ ಅಲೆಮಾರಿ ಕಲಾವಿದ ಇಂಗ್ಲೆಂಡಿಗೆ ಭೇಟಿ ಕೊಟ್ಟರು. ಗಾರ್ಕಿ, ಮಾಯ್ಕೊವೆಸ್ಕಿ, ಪೂವೆಯೊಸ್ಕಿಯ ಪೋರ್ಸಿಲಿನ್ ಕೃತಿಗಳನ್ನು, ಪುಷ್ಕಿನ್ ಅವರ ಭಾವಚಿತ್ರಗಳನ್ನು ತಯಾರಿಸಿ, ಗೋಪಾಲಕೃಷ್ಣರಾವ್ ಮೂಲಕವೇ ರಷ್ಯಾದ ಮ್ಯೂಸಿಯಂಗಳಿಗೆ ಕಳಿಸಿಕೊಟ್ಟರು. ಎಲ್ಲೆಂದರಲ್ಲಿ, ಯಾರಿಗೆಂದರೆ ಅವರಿಗೆ,

ವಿತರಣೆಗೊಂಡ ಇವರ ಕಲಾಕೃತಿಗಳು. ಇವನ್ನೆಲ್ಲಾ ಒಂದೆಡೆ ಸಂಗ್ರಹಿಸಿಡುವಂತೆ ಯಾರಿಗಾದರೂ ತಿಳಿಸಬೇಕು, ಇದರಿಂದ ತಾನೂ ಒಂದಿಷ್ಟು ದುಡ್ಡು ಮಾಡಿಕೊಳ್ಳಬೇಕು ಎಂಬುದು ಅವರಿಗೆ ಹೊಳೆಯಲೇ ಇಲ್ಲವೇನೋ! ಹೀಗಾಗೇ ಇವರ ಕೃತಿಗಳು ಎಲ್ಲೂ ಒಂದೆಡೆ ನೋಡಲು ಸಿಗದಂತಾದವು. ಪತ್ತೆಯಾಗದಿರುವ ರೀತಿಯಲ್ಲಿ ಹಂಚಿ ಹೋದವು. ಅಪ್ರತಿಮ ಕಲಾವಿದನ ಕೃತಿಗಳನ್ನು ಜತನದಿಂದ ಕಾಪಾಡಬೇಕೆಂಬ ಮುಂದಾಲೋಚನೆಯನ್ನು ಯಾವ ಸಂಸ್ಥೆಯೂ ಹೊಂದಿರದಿದ್ದರಿಂದಲೇ ಇಂಥ ಮೇರು ಹಂತವನ್ನು ತಲುಪಿಯೂ ನಾಯ್ಡು ಅನಾಮಿಕರಾಗೆ ಉಳಿದು ಹೋದರು. ಕರ್ನಾಟಕವನ್ನು ತಮ್ಮ ನೆಲೆಯಾಗಿಸಿಕೊಂಡೂ ಇಲ್ಲಿ ತಮ್ಮ ಹೆಸರಿನಲ್ಲಿ ಒಂದು ಗ್ಯಾಲರಿಗೂ ಕಾರಣರಾಗದೆಯೇ ಮರೆಯಾಗಿಬಿಟ್ಟರು!

ಬೆಂಗಳೂರಿನಲ್ಲಿ ಜನಿಸಿದ ಆರ್. ಸೀತಾಪತಿ ನಾಯ್ಡು ತಂದೆ ರಂಗಸ್ವಾಮಿ ನಾಯ್ಡು. ಓದಿದ್ದು ತಿರುಚನಾಪಳ್ಳಿ, ಬೆಂಗಳೂರು, ಧಾರವಾಡ ಹಾಗೂ ಪುಣೆಯಲ್ಲಿ. ಅಣ್ಣ ಜಗಪತಿ ನಾಯ್ಡು ಪ್ರಸಿದ್ಧ ಜಿಯಾಲಜಿ ಪ್ರೊಫೆಸರ್. ಸೀತಾಪತಿ ನಾಯ್ಡು ಅಂದರೆ ಆರ್.ಎಸ್.ಎನ್. ಓದು ಮುಗಿಯುತ್ತಿದ್ದ ಹಾಗೇ ಮುಂಬೈಗೆ ಹೋದರು. ಕಾಂಗ್ರೆಸ್ ಸೇರಿದರು. ಅಶೋಕ ಮೆಹ್ತಾ, ಮಹದೇವ ದೇಸಾಯಿ ಇವರೊಂದಿಗೆ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಜೈಲು ವಾಸ. ಆನಂತರ ಇವರು ಸೋಶಿಯಲಿಸ್ಟ್. ಇಂಥ ರಾಜಕೀಯ ಆಸಕ್ತಿಗಳ ಮಧ್ಯದಲ್ಲೇ ಲಂಡನ್ನಿಗೆ ಹೋಗಿ ಡೇವಿಡ್ ಲೋ ನಂಥ ಪ್ರಸಿದ್ಧ ಚಿತ್ರಕಾರನ ಸಂಪರ್ಕ ಬೆಳೆಸಿ, "ಡೂಡ್ಲ" ಎಂಬ ಪ್ರಕಾರಕ್ಕೆ ಸೇರಿದ ಚಿತ್ರಗಳನ್ನು ಅಭ್ಯಾಸ ಮಾಡಿದರು. ಜಗತ್ತಿನ ಎಲ್ಲಾ ಸಮಸ್ಯೆಗಳಿಗೆ ಕಮ್ಯುನಿಸ್ಟ್ ತತ್ವಗಳೇ ಮದ್ದು ಎನ್ನಿಸಿದಾಗ ಇಂಗ್ಲೆಂಡಿನಿಂದ ಹೇಗಾದರೂ ರಷ್ಯಾಗೆ ಹೋಗುವ ಆಸೆ ಅವರಿಗೆ ಹುಟ್ಟಿಕೊಂಡಿದ್ದಾಗಲೇ ಸ್ಕಾಟ್ಲೆಂಡ್‌ಯಾರ್ಡ್ ಪೊಲೀಸಿನವರಿಂದ ಸಾಕಷ್ಟು ಹಿಂಸೆಗೆ ಒಳಗಾದರು. ಇದು ಅವರಿಗೆ ಬಿದ್ದ ದೊಡ್ಡ ಪೆಟ್ಟು. ನಾಯ್ಡು ಮೊದಲಿನ ನಾಯ್ಡು ಆಗಿ ಉಳಿಯಲೇ ಇಲ್ಲ. ಭಾರತಕ್ಕೆ ಹಿಂತಿರುಗಿದ ನಂತರವೂ ಪೊಲೀಸರು ತಮ್ಮನ್ನು ಜೀವನಪೂರ್ತಿ ಅಟ್ಟಿಸಿಕೊಂಡು ಬರುತ್ತಿದ್ದಾರೆ ಎಂಬ ಭ್ರಮೆ. ಎಲ್ಲೇ ಇರಲಿ, ಏನೇ ಮಾಡುತ್ತಿರಲಿ, ತಮ್ಮ ಹಿಂದೆ ಬೇಹುಗಾರನೊಬ್ಬ ಇದ್ದಾನೆ ಎಂಬ ಶಂಕೆ. ಸ್ನೇಹಿತರಿಗೆ ಸದಾ ಹೇಳುತ್ತಿದ್ದರಂತೆ: "I would like to do many things. But this fellow will never allow me". ಬೊಂಬಾಯಿಯಲ್ಲಿದ್ದಾಗ ಮಹಡಿಯಿಂದ ಕೆಳಗೆ ಹಾರಿ ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸಿದರಾದರೂ ಪುಣ್ಯದಿಂದ ಇತರರಿಂದ ಉಳಿದರು. ಬೆಂಗಳೂರಿಗೆ ಬಂದು ಮಡಿವಾಳದಲ್ಲಿ ಒಂದು ರೂಂ ಮಾಡಿದರು. ಅವರನ್ನು ಬೆದರಿಸುತ್ತಿದ್ದ ಅಗೋಚರ ವ್ಯಕ್ತಿಯಿಂದ ಕಂಗಾಲಾಗುತ್ತಲೇ ಚಿತ್ರಗಳನ್ನು ಬರೆಯುತ್ತಾ, ಕೃತಿಗಳನ್ನು ರಚಿಸುತ್ತಾ, ಕೊನೆಗೊಮ್ಮೆ ಮೈಸೂರು ಸೇರಿದರು, ದಿವಂಗತ ಕಲಾವಿದ ಪಿ.ಆರ್. ತಿಪ್ಪೇಸ್ವಾಮಿಯವರ ದೆಸೆಯಿಂದಾಗಿ. ರಷ್ಯಾಗೆ ಭೇಟಿ ನೀಡಬೇಕೆಂಬ ಮಹಾದಾಸೆ ಈಡೇರಲೇ ಇಲ್ಲ. ಕೊನೆಯವರೆಗೂ ಒಂಟಿಯಾಗಿ, ಬ್ರಹ್ಮಚಾರಿಯಾಗಿಯೇ ಉಳಿದುಬಿಟ್ಟ ಆರ್.ಎಸ್.ಎನ್. ಪ್ರಾಯಶಃ ತಮ್ಮ ನಿರಾಸೆಯನ್ನೂ ಯಾರಿಗೂ ತೋರಿಸಿಕೊಳ್ಳದೆಯೇ ತಮ್ಮ ಕೊನೆಯ ದಿನಗಳನ್ನು ಸದ್ದಿಲ್ಲದೆ ಮೈಸೂರಿನಲ್ಲಿ ಕಳೆದರು.

ಆರ್.ಎಸ್.ಎನ್. ಯಾರೊಂದಿಗೂ ಹೆಚ್ಚಾಗಿ ಸೇರದೆ ಹೋದ್ದರಿಂದಲೇ ಅವರಿಗೆ ಕರ್ನಾಟಕದಲ್ಲಿ ಸಿಗಬೇಕಾದ ಮನ್ನಣೆ ಸಿಗದೇ ಹೋಯಿತೇ? ಅವರ ಹೆಸರು ಮಾಸಿ ಹೋಯಿತೇ? ಇಂಥ ಪ್ರಶ್ನೆಗಳನ್ನೆಲ್ಲಾ ಎತ್ತಿದಾಗ ಪ್ರಸಿದ್ಧ ಕಲಾವಿದ ಆರ್. ಎಂ. ಹಡಪದ ಏನು ಹೇಳುತ್ತಾರೆ ಗೊತ್ತೇ? "ನದಿ ಯಾವಾಗಲೂ ಇಳಕಲ್ಲಿನ ಕಡೆಗೆ ಹೋಗುತ್ತೆ. ನದೀಗೆ ಇಂಥ ಕಡೇನೇ ಹರಿ ಅಂತ ನಾವು ಶರತ್ತು ಹಾಕೋ ಹಂಗಿಲ್ಲ. ಆದರೆ ನದಿ ಎಲ್ಲಿಗೆ ಹೋಗುತ್ತೋ ಅಲ್ಲಿ ನಗರವನ್ನು ಕಟ್ಟಬೇಕು. ಕನ್ನಡದಲ್ಲಿ ಕಮ್ಯೂನಿಜಂನ ನಂಬಿದ್ದ ಎಷ್ಟೋ ಬರಹಗಾರರು ಆಗಿ ಹೋದರು. ಅವರು ಆರ್.ಎಸ್. ನಾಯ್ಡು ಅವರ ಬಗ್ಗೆ ಬರೆಯಬಹುದಾಗಿತ್ತು. ಕಾದಂಬರಿ ಬರೆದು ನಾಯ್ಡು ಅವರನ್ನು ಹೋಲುವ ಪಾತ್ರವನ್ನು ಸೃಷ್ಟಿಸಬಹುದಾಗಿತ್ತು. ಸಾಮೂಹಿಕವಾಗಿ ಜನರನ್ನು ತಲುಪುವ ಪಾತ್ರವನ್ನು ಸೃಷ್ಟಿಸಬಹುದಾಗಿತ್ತು... ಸಾಮೂಹಿಕವಾಗಿ ಜನರನ್ನು ತಲುಪುವ ಮೂಲಕವೇ ಒಬ್ಬನ ವೈಯಕ್ತಿಕ ಸಂಗತಿಗಳನ್ನು ಕುರಿತು ಜೀವಂತ ದೃಷ್ಟಿಯಿಂದ ಎಲ್ಲವನ್ನೂ ನೋಡ್ತಾರೆ. ನಮ್ಮಲ್ಲಿ ನಿನ್ನೆಯ ಬಗ್ಗೆ ಪೌರಾಣಿಕ ಪ್ರಜ್ಞೆಯಿರುವ ರೀತಿಯಲ್ಲೇ ಐತಿಹಾಸಿಕ ಪ್ರಜ್ಞೆಯಿಲ್ಲ. ಉದಾಹರಣೆಗೆ ವ್ಯಕ್ತಿಗಳನ್ನು ತೆಗೆದುಕೊಂಡರೆ ಭ್ರಮೆಗಳು ಕೆಲಸ ಮಾಡುತ್ತವೆ. ಆತನ ಪ್ರತಿಯೊಂದು ನಿಲುವನ್ನೂ ಸಂಶಯದಿಂದ ನೋಡುವ ಕಾರಣ ವ್ಯಕ್ತಿಯ ಬಗ್ಗೆ ಸರಿಯಾದ ವಿಷಯಗಳು ಪ್ರಕಟಗೊಳ್ಳುವುದೇ ಇಲ್ಲ". ಆರ್.ಎಸ್.ಎನ್.ರನ್ನು ಕಂಡಿದ್ದವರ ಪೈಕಿ ಈಗ ನಮ್ಮ ಮಧ್ಯೆ ಇರುವವರ ಸಂಖ್ಯೆ ತೀರಾ ಕಡಿಮೆ ಇರುವವರ ಪೈಕಿಯೂ ಬಿ.ವಿ.ಕೆ. ಶಾಸ್ತ್ರಿಗಳು

ಮಾತನಾಡುವ ಸ್ಥಿತಿಯಲ್ಲೇ ಇಲ್ಲ. ಗೋಪಾಲಕೃಷ್ಣರಾಯರು ರಷ್ಯಾದಲ್ಲಿ ನೆಲೆಸಿದ ನಂತರ ಅವರಿಗೂ ನಾಯ್ಡು ಸಂಪರ್ಕ ತಪ್ಪಿ ಹೋದದ್ದರಿಂದ ಆವರೂ ಕೆಲವು ವಿಷಯಗಳನ್ನು ಖಚಿತವಾಗಿ ಹೇಳಲಾರರು. ಹಾಗೆ ನೋಡಿದರೆ, ಹಡಪದ ಕೂಡಾ ಅವರನ್ನು ಕಂಡಿದ್ದು ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಆರ್.ಎಸ್.ಎನ್. ಚಿಕಿತ್ಸೆ ಪಡೆಯುತ್ತಿದ್ದಾಗ. ವಿಷಯ ತಿಳಿದ ಹಡಪದ ಈ ಮಹಾನ್ ಕಲಾವಿದನ ನೆನಪು ಹೇಗಾದರೂ ಉಳಿಯಲೇ ಬೇಕೆಂಬಂತೆ ನಾಯ್ಡು ಅವರ ಅನಾರೋಗ್ಯ ಸ್ಥಿತಿಯಲ್ಲೇ ಅವರನ್ನು ಎರಡು ಗಂಟೆಗಳ ಕಾಲ ತಮ್ಮ ಮುಂದೆ ಕೂರಿಸಿಕೊಂಡು ಅವರ Portrait ತಯಾರಿಸಿದ್ದರು, ಆಯಿಲ್ನಲ್ಲಿ ೧೮" x ೨೨" ಅಳತೆಯ canvas. ನಾಯ್ಡು ಅವರ ಜತೆಯಲ್ಲಿ ಆನಂತರ ಹಡಪದ ಇದ್ದದ್ದು ಸುಮಾರು ಆರೆಂಟು ಗಂಟೆಗಳ ಕಾಲ. ಇವರನ್ನು ಬೀಳ್ಕೊಡಲು ಪುಟ್ಟಣ್ಣಚೆಟ್ಟಿ ಟೌನ್ ಹಾಲ್‌ವರೆಗೂ ಬಂದಿದ್ದ ನಾಯ್ಡು ದಾರಿಯುದ್ದಕ್ಕೂ ರಾಜಕೀಯ ಹಾಗೂ ಕಲೆಗಳ ವಿಚಾರ ಮಾತನಾಡಿದ್ದರಂತೆ. ಹಡಪದ ಆನಂತರ ಕರ್ನಾಟಕ ಲಲಿತ ಕಲಾ ಅಕಾಡೆಮಿಯ ಅಧ್ಯಕ್ಷರಾದರು. ದಸರಾ ಎಕ್ಸಿಬಿಷನ್ ಸಂದರ್ಭದಲ್ಲಿ ವಾಯ್ಡು ಅವರನ್ನು ಉದ್ಘಾಟನೆಗೆಂದು ಕರೆದಾಗ ಅಲ್ಲಿಗೆ ಬಂದರೂ ಕೂಡ. ಹಡಪದ ಹೇಳುತ್ತಾರೆ: "ನಾಯ್ಡುಗೆ ಸಾಮಾಜಿಕ ವಿಷಯಗಳ ಬಗ್ಗೆ ಕಳಕಳಿ ಹಾಗೂ ಹಸಿವೆ ಇತ್ತು. ಹೀಗಾಗಿ ಅವರು ಪ್ರಾಯಶಃ ಶಾರೀರಿಕ ನೋವುಗಳ ಬಗ್ಗೆ ಚಿಂತೆ ಮಾಡ್ತಿರಲಿಲ್ಲ. ಅವರ ಡ್ರಾಯಿಂಗ್ ಕೂಡಾ ಜಾಗತಿಕ ರಾಜಕೀಯದಲ್ಲಿ ವಿಸ್ತಾರವನ್ನು ಪಡೆದುಕೊಳ್ಳಬೇಕಾಗಿತ್ತು. ಏಕೆಂದರೆ ಎಲ್ಲಿ ರಾಜಕೀಯ ಜೀವಂತವಾಗಿರುತ್ತೋ ಅಲ್ಲಿ ಬೆಳವಣಿಗೆ ಇರುತ್ತೆ. ಆಗ ಕಮ್ಯೂನಿಸಂ ಸಕ್ರಿಯವಾಗಿತ್ತು. ರಾಜಕೀಯದ ಮೂಲಕ ಅವರು ಸಾಂಸ್ಕೃತಿಕ ಬೇಸ್ ಪಡೆದುಕೊಳ್ಳಬೇಕಾಗಿತ್ತು. ನಾಯ್ಡು ಅವರದ್ದು ಬಹು ಬೇಗ ಸ್ಪಂಧಿಸುವಂತಹ ಮನೋಧರ್ಮ. ಹ್ಯಾಂಡ್ ಚೆನ್ನಾಗಿತ್ತು. ಕ್ರಾಫ್ಟ್ ಮೇಲೆ ಕಂಟ್ರೋಲ್ ಇತ್ತು. ಕ್ಲಾಸಿಕಲ್ ಕಾರ್ಟೂನುಗಳಲ್ಲಿ ಅಕಾಡೆಮಿಕ್ ಸ್ಟಡಿ ಎದ್ದು ಕಾಣುತ್ತಿತ್ತು. ಪ್ರಜ್ಞಾಪೂರ್ವಕವಾಗಿ ಜನರನ್ನು ಮುಟ್ಟುವ ಒತ್ತಡ. ಈಗಿನ ಕಾರ್ಟೂನ್‌ಗಳ ಹಾಗೆ ಸಿಂಪ್ಲಿಸಿಟಿ ಇರಲಿಲ್ಲ. ತಾವು ಮಾತ್ರ ಉನ್ನತ ಮಟ್ಟದಲ್ಲಿ ಕೂತು ಗರೀಬರ ಬಗ್ಗೆ ಶ್ರೀಸಾಮಾನ್ಯನ ಬಗ್ಗೆ ಬರೆಯುತ್ತಿರುವ ಈಗಿನ ಕಾರ್ಟೂನಿಸ್ಟ್‌ರಂತಲ್ಲ ಅವರು. ನಾಯ್ಡು ಸಮಾಜ ಚಿಂತಕ. ಪರ್ಯಟನ ಮಾಡೋ ಅಂಥ ಸ್ವಭಾವ. ಬಹು ಸಮಾಜಗಳನ್ನು, ಬಹು ವ್ಯಕ್ತಿಗಳನ್ನು ನೋಡಿದ್ದವರು. ಮಹತ್ವದ ಕಲಾವಿದ. ವಿಚಾರವಾದಿ. ಆದರೆ ಪ್ಲಾನ್ಡ್ ಲೈಫ್ ಅನ್ನೋದು ಇರಲೇ ಇಲ್ಲ. ಹೀಗಾಗಿ ತೀವ್ರವಾದ ಸಂವೇದನೆ ಇದ್ದರೂ ಅವರೆಂದೂ ಒಂದೆಡೆ ನಿಲ್ಲಲಾರದೆ ಹೋದದ್ದರಿಂದ ಎಂದೂ ಸಂಘಟಕರಾಗಿ ಕೆಲಸ ಮಾಡಲೇ ಇಲ್ಲವೇನೋ! ನಾಯ್ಡು ಈ ಭಾಗದ ಸಾಮಾಜಿಕ ಹಾಗೂ ರಾಜಕೀಯ ಚಟುವಟಿಕೆಗಳಲ್ಲಿ ಬೆಳೆಯಲು ಸಾಧ್ಯವಾಗದೇ ಹೋಗಿರಬಹುದು. ಏಕೆಂದರೆ ಇಲ್ಲಿ ಅವರನ್ನು ಉಪಯೋಗಿಸಿಕೊಂಡ ದಾಖಲೆಗಳೇ ಇಲ್ಲ." ತೀರಾ ಆಪ್ತರೆನ್ನಿಸಿದವರೊಂದಿಗೆ ಮಾತ್ರ ಹರಟುವುದು, ಅತ್ಯುತ್ತಮವೆನ್ನಿಸಿದ್ದನ್ನೆಲ್ಲಾ ಓದುವುದು, ಕುಡಿಯುತ್ತಾ ಕೂಡುವುದು... ನಾಯ್ಡು ಆವರಿಗಿದ್ದ ಹವ್ಯಾಸಗಳು ಒಂದೇ ಎರಡೇ! ಸುತ್ತಲಿನ ಜನ ಅವರನ್ನು ವಿಸ್ಮಯದಿಂದ ನೋಡಿದರಷ್ಟೆ. ಆದರೆ ಇಂಥ ವ್ಯಕ್ತಿಯೊಬ್ಬನಿಗೆ ನೈತಿಕ ಆಧಾರವನ್ನು ಒದಗಿಸಿ ಆತನ ಚಿಂತನೆಗಳನ್ನು, ಕೃತಿಗಳನ್ನೂ ಕಾಯ್ದಿರಿಸಿಕೊಳ್ಳಬೇಕು ಎಂದು ಪ್ರಾಯಶಃ ಯಾರೂ ಪ್ರಯತ್ನಿಸಲೂ ಇಲ್ಲ. ಯಾರ ಸ್ವಾರ್ಥ ಇದಕ್ಕೆ ಕಾರಣವಾಗಿರಬಹುದು?

ನಾಯ್ಡು ಕರ್ನಾಟಕದಲ್ಲೇ ತಮ್ಮ ಇಡೀ ಬದುಕನ್ನು ಕಳೆದರು. ಆಗಿನ ಎಲ್ಲಾ ರಾಜಕೀಯ ಮುಖಂಡರ ಬಗ್ಗೆ ಅವರಿಗೆ ತಿಳುವಳಿಕೆ ಇತ್ತು. ಆದರೂ ರಾಜಕೀಯದಲ್ಲಿ ಮಾತ್ರ ಭಾಗವಹಿಸಲಿಲ್ಲ. ಹಡಪದ ಹೇಳುವ ಹಾಗೆ ಆಗ ನಾಯ್ಡು ಅವರು ನಂಬಿದ್ದ ಕಮ್ಯೂನಿಜಂ ಅಂದ್ರೆ ಇಲ್ಲಿನವರಿಗೆ ಪ್ರಾಯಶಃ ಅದು ಯಾವುದೋ ದೇಶದ್ದು ಅಂತ ಭಾವನೆ. "ಪಾಲಿಟಿಕ್ಸ್ ಎಷ್ಟು ಜನರಿಗೆ ಗೊತ್ತಿತ್ತು? ಜನರಿಗೆ ಆಂತರಿಕ ತಾರತಮ್ಯಗಳಿದ್ದವು. ಬೂರ್ಜ್ವಾ ತರಹದ ಸಮಾಜವನ್ನು ಎದುರಿಸುವ ತಾಕತ್ತಿರಲಿಲ್ಲ. ಮಹಾರಾಜರನ್ನು, ಅಧಿಕಾರಿಗಳನ್ನು ದೂಷಿಸಿದರೆ, ಮೈಸೂರನ್ನೇ ದೂಷಿಸುತ್ತಿದ್ದಾರೆ ಅನ್ನೋ ಭಾವನೆ ಇದ್ದಂಥ ಕಾಲವೊಂದರಲ್ಲಿ ತುಲನಾತ್ಮಕ ಪ್ರಜ್ಞೆಯನ್ನು ಬೆಳೆಸಿಕೊಂಡಿದ್ದರೂ ನಾಯ್ಡು ತರಹದವರಿಗೆ ಎಲ್ಲವನ್ನೂ ಬಹಿರಂಗವಾಗಿ ಹೇಳುವ ಧೈರ್ಯ ಇತ್ತಾ? ಇಂಥ ಒಡಂಬಡಿಕೆಗಳು ಈಗ ನಮ್ಮನ್ನು ತಿಂದು ಹಾಕುವಂತೆ ಆಗಲೂ ತಿಂದು ಹಾಕುವ ಸಾಧ್ಯತೆಗಳು ಇದ್ದಿರಬಹುದು. ಇಂಥ ವಾತಾವರಣವಿದ್ದಾಗ ಜೀವನದಲ್ಲಿ ಕೌತುಕವಿದ್ದಂಥ ನಾಯ್ಡು ತರಹದವರು ಸುತ್ತಲಿನ ಘಟನೆಗಳನ್ನು ನೋಡುತ್ತಾ, ಸಾಮಾಜಿಕವಾಗಿ ಚಿಂತಿಸುತ್ತಾ ತಮ್ಮ ರೋಷವನ್ನು ಮಾತ್ರ ವ್ಯಕ್ತಪಡಿಸಬಹುದಾಗಿತ್ತೇ ಹೊರತು ಮತ್ತೇನೂ ಮಾಡುವಂತೆಯೇ ಇರಲಿಲ್ಲ. ಅವರಿಗೆ ಜನರ ಬಗ್ಗೆ, ಭಾರತೀಯತೆಯ

ಬಗ್ಗೆ ಪ್ರೀತಿ ಹಾಗೂ ಕೋಪ ಎರಡೂ ಇದ್ದವು ಎನ್ನಿಸುತ್ತೆ. ನಾಯ್ಡು ಡೈರಿಯನ್ನಾದರೂ ಬರೆದಿಟ್ಟಿದ್ದಾರೋ ಇಲ್ಲವೋ ಅದೂ ಗೊತ್ತಿಲ್ಲ. ಒಟ್ಟಿನಲ್ಲಿ ಸಮೂಹದೊಳಗೆ ಆ ವ್ಯಕ್ತಿ ಕಾಣಲಾರದೇ ಹೋಗೇಬಿಟ್ಟರು.

"ಕಲಾವಿದರಿಗೆ ಸಂಬಂಧಿಸಿದ ಹಾಗೆ ಮಾತನಾಡುವುದಾದರೆ, ನಾವು ಆತನನ್ನು ಗೌರವಿಸಬಹುದಾದ ಒಂದೇ ವಿಧಾನ ಆತನ ಕೃತಿಗಳನ್ನು ಸಂಗ್ರಹಿಸುವುದು. ಆತನೇನಾದರೂ ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿದ್ದರೆ ಅದನ್ನು ಕುರಿತು ಮಾಹಿತಿಯನ್ನು ದೊರಕಿಸಿಕೊಳ್ಳುವುದು. ನಮ್ಮಲ್ಲಿ ಮಾನಸಿಕ ಹಾಗೂ ಭೌತಿಕ ಬಯಕೆ ಕಡಿಮೆ. ನಾಯ್ಡು ಅವರ ಸುತ್ತಮುತ್ತಲಿದ್ದವರು ಅವರಿಂದ ಕೇವಲ ಹಣ ಮಾಡಿಕೊಂಡರೇ? ಡಂಭಾಚಾರಕ್ಕಾಗಿ ಅವರೊಂದಿಗೆ ಉಳಿದುಕೊಂಡಿದ್ದರೇ? ಇವ್ಯಾವವೂ ಗೊತ್ತೇ ಇಲ್ಲ. ನಾಯ್ಡುರವರನ್ನು ನಿಮಿತ್ತವಾಗಿಸಿಕೊಂಡು ತಾವು ಬದುಕಿ ಅವರನ್ನು ಮಾತ್ರ ಬದುಕಿಸದೇ ಹೋಗಿರಬಹುದು!

"ನಮ್ಮಲ್ಲಿ ಆರ್ಟ್ ವರ್ಕ್‌ಗಳನ್ನು ಕಾಪಾಡುವ ಗುಣ ಇಲ್ಲ. ಹಣಕ್ಕಾಗಿ ಅವನ್ನು ಮಾರಾಟ ಮಾಡಬಹುದು ಅಷ್ಟೆ. ಸಾಮಾಜಿಕ ಘಟ್ಟವೊಂದರಲ್ಲಿ, ಅದಕ್ಕೆ ಸ್ಪಂದಿಸಿದ ಕಲಾವಿದನ ಕೃತಿಗಳನ್ನು ಕಾಯ್ದಿಟ್ಟುಕೊಳ್ಳಲು ಜನ ಮುಂದೆ ಬರುವುದೇ ಇಲ್ಲ".

ಕೊನೆಯದಾಗಿ ಇಲ್ಲೊಂದು ಮಾತನ್ನು ಸೇರಿಸಲಾ? ಕೆಲವು ವರ್ಷಗಳ ಹಿಂದೆ ಒಬ್ಬಾತ ನಾಯ್ಡು ಕೃತಿಗಳನ್ನು ಹೊಂದಿದ್ದವರ ಬಳಿಗೆ ಮತ್ತೆ ಮತ್ತೆ ಹೋಗಿ "ನಾಯ್ಡು ಕಾರ್ನರ್" ಮಾಡ್ತೀನಿ, ಅವನ್ನೆಲ್ಲ ನಮಗೆ ಕೊಡಿ" ಅಂತ ಪುಸಲಾಯಿಸಿ ಅವನ್ನೆಲ್ಲಾ ಸಂಗ್ರಹಿಸಿದರಂತೆ. "ಕಾರ್ನರ್" ಕಾಣಿಸೋದಿರಲಿ ಸಧ್ಯ, ಕೃತಿಗಳೇ ಕಾಣಿಸುತ್ತಿಲ್ಲ. ಅವೆಲ್ಲಿ ಹೋದವೆಂದು ಯಾರಿಗೆ ಗೊತ್ತು?

*('ಚರ್ಚೆಗೊಂದು ಚಾವಡಿ' ಮಾಸಿಕ, ಜನವರಿ ೨೦೦೩)*





# ಕಲೋಪಾಸಕ ಆರ್.ಎಸ್.ಎನ್.

■ *ಪಿ.ಆರ್.ತಿಪ್ಪೇಸ್ವಾಮಿ*

**ಮೈ**ಸೂರಿನ ಮಾರ್ಕೆಟ್ ಸಮೀಪದ ಸಿಟಿ ಬಸ್ ನಿಲ್ದಾಣದಲ್ಲಿ ಎನ್.ಆರ್.ಮೊಹಲ್ಲಾದ ಬಸ್ಸಿಗಾಗಿ ಕಾದು ನಿಂತ ಸಮಯ. ಬೆನ್ನ ಹಿಂದೆ ಬಿಳಿಯ ಪೈಜಾಮ, ತೆಳ್ಳನೆ ಪಂಜಾಬಿ ಜುಬ್ಬ ಧರಿಸಿದ ವ್ಯಕ್ತಿ ನಿಂತಂತಾಗಿ ಹಿಂದೆ ತಿರುಗಿದಾಗ 'ಆರ್.ಎಸ್.ಎನ್.' ಅವರನ್ನು ಕಂಡು ಹರ್ಷವಾಯಿತು. ಶಸ್ತ್ರಚಿಕಿತ್ಸೆಗೆ ಆಸ್ಪತ್ರೆ ಸೇರಿದ್ದ ಆರ್.ಎಸ್.ಎನ್. ಅವರನ್ನು ವರ್ಷದಿಂದ ಕಂಡಿರಲಿಲ್ಲ. ಆರೋಗ್ಯ ವಿಚಾರಿಸಿದೆ. ಮುಖದಲ್ಲಿ ಮತ್ತೆ ಕಾಂತಿ ಮೂಡಿದೆ. ಕನ್ನಡಕದೊಳಗಿಂದ ತೂರಿ ಬರುವ ಅದೇ ಮೊನಚಾದ ದೃಷ್ಟಿ. ಮಟ್ಟಸವಾದ ಅರೆನೆರೆತ ಗಡ್ಡ, ಆರ್.ಎಸ್.ಎನ್. ಅವರು ಹೊಸ ವ್ಯಕ್ತಿಯಂತೆ ಕಂಡರು.

ಲಲಿತಕಲಾ ಅಕಾಡೆಮಿಯ ಪ್ರದರ್ಶನದ ವಿಷಯ ಬಂದು ಅವರು ವ್ಯಂಗ್ಯವಾಗಿ ನಕ್ಕರು.

"ಆ ಬಗ್ಗೆ ಓದಿದ್ದೆ"
"ಮೈಸೂರು ದಸರಾ ಕಲಾಪ್ರದರ್ಶನದಲ್ಲಿ ಆಗುತ್ತಿದ್ದಂತೆ ಅಲ್ಲಿಯೂ ಪಕ್ಷಪಾತಗಳು ತಾನೆ?" ಎಂದರು.
ನಿರ್ದಾಕ್ಷಿಣ್ಯವಾದ ವಾಗ್ವೈಖರಿಯ ಕಟ್ಟುನಿಟ್ಟಾದ ವ್ಯಕ್ತಿ ಆರ್.ಎಸ್.ಎನ್.
'ನವ್ಯ ಕಲೆ'ಯ ಮಾತು ಬಂತು.

"ಅರ್ಧ ಶತಮಾನದಿಂದ ವಿಶ್ವದಲ್ಲಿ ನವ್ಯಕಲೆಯ ಪ್ರಯೋಗಗಳು ನಡೆಯುತ್ತಿವೆಯಾದರೂ ಯಾವ ರೂಪ ತಾಳುತ್ತವೋ ನೋಡಬೇಕಾಗಿದೆ. ಮನೆಗೆ ಬನ್ನಿ, 'ಪೋಲೆಂಡ್' ಸಂಚಿಕೆಗಳನ್ನು ಇರಿಸಿರುವೆ, ಅದರಲ್ಲಿ ನವ್ಯಕಲೆ ಯಾವ ಸ್ವರೂಪ ತಾಳಿದೆ ಎಂಬುದು ಆಶ್ಚರ್ಯವಾಗುತ್ತದೆ." ಎಂದರು.

ಆರ್.ಎಸ್.ಎನ್. ಮನೆಗೆ ಕರೆದರೇನೋ ನಿಜ. ಎರಡು ಮೂರು ಮೈಲಿಗಳ ಆಚೆ ಕೆಸರೆಯ ಕೊಟ್ಟ ಕೊನೆಯ ಮನೆಯ ಆ ಪ್ರಶಾಂತ ನೆಲೆ ಒಮ್ಮೆ ದೃಷ್ಟಿಯಲ್ಲಿ ಹಾದು ಹೋಯಿತು. ಮನೆಯ ಮೂರೂ ಕಡೆ ಕವಿದುಕೊಂಡ ದಟ್ಟವಾದ ತೋಟಗಳು ನಗರದ ವಾತಾವರಣವನ್ನು ಮರೆಸುತ್ತವೆ. ಆದರೂ ಅವರು ದೂರದ ಹಳ್ಳಿಯೊಂದರಲ್ಲಿ ನಿಸರ್ಗದ ನಡುವೆ ಒಂದು ಗುಡಿಸಲಿವಲ್ಲಿ ತಮ್ಮ ಕೊನೆಯ ದಿನಗಳನ್ನು ಕಳೆಯುವ ಬಯಕೆಯನ್ನು ವ್ಯಕ್ತಪಡಿಸುತ್ತಾರೆ. ಜಗತ್ ಪ್ರಸಿದ್ಧ ಕಲಾವಿದರಾದ ಇವರು ಇಂದು ಎಲ್ಲಿಯೋ ಯಾವುದೋ ಮೂಲೆಯಲ್ಲಿ ಯಾರ ದೃಷ್ಟಿಗೂ ಬೀಳದಂತೆ ಕಲೆಯ ತವರು ಮನೆಯಾದ ಮೈಸೂರಿನಲ್ಲೇ ಇದ್ದಾರೆಂದರೆ ಒಂದು ದೃಷ್ಟಿಯಲ್ಲಿ ಉತ್ಕೃಷ್ಟ ಕಲಾವಿದ ನಮ್ಮ ನಡುವೆ ಇರುವರಲ್ಲಾ ಎಂದು ಹೆಮ್ಮೆ ಎನಿಸುತ್ತಿದೆ. ಆದರೂ ಆರ್.ಎಸ್.ಎನ್.ರಂಥ ಉಜ್ವಲ ಕಲಾವಿದನ ಸ್ಥಿತಿ ಯಾರಾದರೂ ಕಂಬನಿ ಮಿಡಿಯುವಂಥದೇ! ಏನೇ ತೊಂದರೆ ಆಗಲಿ, ಏನೇ ಅಡಚಣೆಗಳಿರಲಿ, ಇಳಿವಯಸ್ಸಿನ ಯಾವುದೋ

ಕೊರತೆ ಇರಲಿ ಈ ಅವಿವಾಹಿತ ಏಕಾಂಗಿ ಕಲಾವಿದ ಏಕಾಂತ ವಾಸವನ್ನೇ ಅನುಭವಿಸುತ್ತಿದ್ದಾರೆ. ಕನ್ನಡ ನಾಡಿನ ಏಕೆ, ಭಾರತದ ಮೇಧಾವಿ ಕಲಾವಿದರೆಂದರೆ ಇವರೊಬ್ಬರೆ!

ಕುಶಲಿಯಾದ ಕಲಾವಿದ ಯಾವ ಅನುಭವವನ್ನು ಬೇಕಾದರೂ ತನ್ನ ಕಲಾವಸ್ತುವಾಗಿ ಬಳಸಿಕೊಳ್ಳಬಲ್ಲ. ಆದರೆ ಓರ್ವ ಕಲಾವಿದನಿಗೆ ಕಲೆಯ ಎಲ್ಲಾ ಪ್ರಕಾರಗಳು ಒಲಿಯುವುದು ತೀರಾ ಅಪರೂಪ. ಅಸಾಧಾರಣ ಪ್ರತಿಭಾಶಾಲಿಯಾಗಿದ್ದ ಕಲಾಸಾಧಕನ ಬಹುದಿನದ ಸಾಧನೆಯಿಂದ ಇಂಥ ಅಪೂರ್ವಸಿದ್ಧಿ ಕೈಗೂಡಬಹುದು. ಆರ್. ಸೀತಾಪತಿ ನಾಯ್ಡು (ಆರ್.ಎಸ್.ಎನ್.) ಅವರಲ್ಲಿ ಚಿತ್ರ ಹಾಗೂ ಶಿಲ್ಪ ಎರಡೂ ಕಲೆಗಳ ಸಂಗಮವನ್ನು ಗುರುತಿಸಬಹುದು. ಪೆನ್ನಿನಿಂದ ಪ್ಲಾಸ್ಟರ್ ತನಕ ಯಾವುದೇ ಕಲಾ ಮಾಧ್ಯಮದಲ್ಲೂ ಅವರು ವರಕಲಾವಿದರಾಗಿದ್ದಾರೆ. ಅವರ ವಿಶಿಷ್ಟ ಕಲ್ಪನಾ ವೈಖರಿ, ಉಜ್ವಲ ಪ್ರತಿಭಾಶಕ್ತಿಗಳನ್ನು ಅವರ ಯಾವ ಕಲಾಕೃತಿಗಳಲ್ಲಾದರೂ ಗಮನಿಸಬಹುದು. ಇವು "ಆರ್.ಎಸ್.ಎನ್."ರ ಕೃತಿಗಳೇ ಎಂದು ಯಾವ ಕೃತಿಯ ರಾಶಿಯಲ್ಲೂ ವ್ಯಕ್ತವಾಗುತ್ತದೆ. ಅವಕ್ಕೆ ಅಂಥ ವೈವಿಧ್ಯವೂ ಇರುತ್ತದೆ.

ಚಿತ್ರಕಲೆಯಲ್ಲಂತೂ ವಿಡಂಬನಾತ್ಮಕ ರೇಖಾಚಿತ್ರದಿಂದ ವರ್ಣಚಿತ್ರದವರೆಗೆ ಅವರ ತೂಲಿಕೆ ಕಲಾಸೃಷ್ಟಿಯನ್ನು ಮೆರೆದಿದೆ. ವಿಶ್ವದಲ್ಲಿಯೇ ಇವರನ್ನು ಹೋಲುವ ವ್ಯಂಗ್ಯಚಿತ್ರಕಾರರು ಶಿಲ್ಪಿಗಳು ಎಲ್ಲೋ ಕೆಲವು ಮಂದಿ. ಆರ್.ಎಸ್.ಎನ್. ಮೊದಲಿನಿಂದಲೂ ಸಂಪ್ರದಾಯಕಲೆಯನ್ನು ಒಪ್ಪಿದವರಾದರೂ ಅಂದಚಂದಗಳ ಅಂಧಾನುಕರಣೆಗೆ ಮಾರುಹೋದವರಲ್ಲ. ಬರೀ ತಾಂತ್ರಿಕವಾಗಿ, ಯಾಂತ್ರಿಕವಾಗಿ ಉಳಿಯಲಿಲ್ಲ. ಯಾರೊಬ್ಬರ ಯಾವೊಂದರ ಪ್ರಭಾವಕ್ಕೂ ಬಲಿಬೀಳಲಿಲ್ಲ. ಜೀವನದ ಸಿಹಿ ಕಹಿಗಳ ತೂಗಾಟದಲ್ಲಿ ಬೆಳೆದು ಬಂದ ಈ ಹಿರಿಯ ಜೀವಿಗೆ ಸಾಮಾನ್ಯ ಮಾನವರ ಬಗ್ಗೆಯೂ ಅಪಾರ ಅನುಕಂಪ, ಆದರ, ಸಹಾನುಭೂತಿ ಮೈಗೂಡಿದೆ. ಅವರ ಕಲೆ ಸಹಜ, ಸರಳ ಮತ್ತು ಸುಂದರ.

ಇವರು ರಚಿಸುವ ಚಿತ್ರಗಳ ರೇಖೆಯಲ್ಲಿ ಜೀವಂತಿಕೆ, ಸಾದೃಶ್ಯ ತುಂಬಿ ತುಳುಕುತ್ತದೆ. ರೇಖೆಗಳಲ್ಲಿ ಅದ್ಭುತ ನಿರೂಪಣೆ, ಗತಿ, ವಿನ್ಯಾಸ ಸೂಚಿಸುವ ಮಿತವ್ಯಯ ನೂತನ ಶೈಲಿಯಿಂದಾಗಿ ಸಾಮರಸ್ಯವನ್ನು ಕಾಣುವೆವು. ಸತ್ವಪೂರಿತ ಕಲೆಗಾರಿಕೆ ಇವರದು. ಇವರು ಎಳೆಯುವ ಪ್ರತಿಯೊಂದು ಗೆರೆಯೂ ಅವರ ಹೃದಯದ ಅಂತರಾಳದಿಂದ ನೇರ ಚಿಮ್ಮಿ ಬಂದಂತಿದೆ. ಅವರ ರೇಖಾಚಿತ್ರಗಳ ವಸ್ತು ವಿಶೇಷ, ಕಲ್ಪನಾಶಕ್ತಿ ಅಪೂರ್ವವಾದುದು.

ಅವರು ಪ್ಲಾಸ್ಟರಿನ ಉಬ್ಬಚ್ಚಿನ ಭಾವಚಿತ್ರವಾಗಲಿ, ಶಿಲ್ಪಕೃತಿಯಾಗಲೀ ಬರಿಮಣ್ಣಿನ ಮುದ್ದೆಯಾಗಿ ತೋರದೆ ಜೀವಂತ ವ್ಯಕ್ತಿತ್ವವೇ ಮೂರ್ತಿವೆತ್ತಂತೆ ಭಾವಪೂರ್ಣವಾಗಿ ರಚಿಸಲ್ಪಟ್ಟಿರುತ್ತವೆ.

ಅವರ ವ್ಯಕ್ತಿತ್ವ ಎಷ್ಟು ಸರಳವೋ ಅವರು ಗಳಿಸಿರುವ ಪಾಂಡಿತ್ಯ ಅಷ್ಟೇ ಪ್ರೌಢ. ಅವರ ಜೀವನ ತುಂಬಾ ಕ್ರಾಂತಿಕಾರಕ. ಅವರು ಹುಟ್ಟಿದ್ದು, ಬೆಂಗಳೂರು. ತಂದೆ ರಂಗಸ್ವಾಮಿ ನಾಯುಡು. ತಾಯಿ ರಂಗನಾಯಕಮ್ಮ. ಬಾಲ್ಯದ ವಿದ್ಯಾಭ್ಯಾಸ ಬೆಂಗಳೂರಿನಲ್ಲೂ, ಕೆಲವು ವರ್ಷಕಾಲ ತಿರುಚನಾಪಳ್ಳಿಯಲ್ಲಿಯೂ ಜರುಗಿತು. ನಂತರ ಧಾರವಾಡದಲ್ಲಿ ಮುಂದುವರೆಯಿತು. ಅಲ್ಲಿ ಆಟಪಾಟದಲ್ಲಿ, ಚರ್ಚಾಕೂಟದಲ್ಲಿ ಅವರದೇ ಹೆಚ್ಚು ಪ್ರಭಾವ. ಪೂನಾದ ಫರ್ಗ್ಯೂಸನ್ ಕಾಲೇಜಿನಲ್ಲಿ ಅವರು ವ್ಯಾಸಂಗಮಾಡುವಾಗ ಯೂತ್ ಕಾಂಗ್ರೆಸ್ ಚಳವಳಿಯಲ್ಲಿ ಓಡಾಡತೊಡಗಿದರು. ೧೯೩೦ರಲ್ಲಿ ಮೊದಲಬಾರಿಗೆ ಆರು ತಿಂಗಳ ಸಾದಾಸಜವನ್ನು ಜೈಲಿನಲ್ಲಿ ಕಳೆದರು. ೧೯೩೨ರಲ್ಲಿ ಮತ್ತೆ ಎರಡನೆ ಬಾರಿಗೆ ಕಠಿಣ ಶಿಕ್ಷೆಗೊಳಗಾದರು. ಅವರಿದ್ದ ಜೈಲಿನಲ್ಲಿ ಪೂಜ್ಯ ಗಾಂಧೀಜಿಯವರೇ ಅಲ್ಲದೆ ಮಹದೇವ ಭಾಯಿ, ಜಮ್ನಲಾಲ್ ಬಜಾಜ್-ಮುಂತಾದ ಗಣ್ಯವ್ಯಕ್ತಿಗಳು ಇದ್ದರು. ಆ ಜೈಲಿನಲ್ಲಿ ಪ್ರಾಂತೀಯ ಪಕ್ಷಪಾತ ತೋರಲಾಗುತ್ತಿತ್ತು. ಇದನ್ನು ಶ್ರೀ ನಾಯುಡು ಪ್ರತಿಭಟಿಸಿದರು. ಇದನ್ನು ಸಹಿಸಲಾರದೆ ಜೈಲ್‌ಕೋರ್ಟ್ ಮತ್ತೆ ಸಜಾ ಹೆಚ್ಚಿಸಿತು. ನಾಯುಡು ಅವರ ಗಲಾಟೆ ಅಲ್ಲಿಗೆ ಮುಗಿಯಲಿಲ್ಲ. ಹೇಳತೀರದಾಯಿತು ಪ್ರತಿಭಟನೆ. ಇದನ್ನು ಸಹಿಸಲಾಗದೆ ಅಲ್ಲಿದ್ದ ಜೈಲು ಅಧಿಕಾರಿ ಕರ್ನಲ್ ಶ್ರೀ ಭಂಡಾರಿಯವರು ಗಾಂಧಿಯವರ ಮೂಲಕ ನಾಯುಡು ಅವರಿಗೆ ಹೇಳಿಸಿ ಗಲಾಟೆಯನ್ನು ತಣ್ಣಗೆ ಮಾಡಬೇಕಾಯಿತು. ಆಗ ಅವರೊಡನೆ ಜರ್ಮನ್ ದಿನಪತ್ರಿಕೆಯ ಸಂಪಾದಕರೊಬ್ಬರು ಇದ್ದರು. ಅವರ ಜೊತೆ ಬಿದ್ದ ಮೇಲೆ ಸಿಗರೇಟು ಚುಟ್ಟಾ ಸುಡುವುದರಲ್ಲಿ ಅಗ್ರಗಣ್ಯರಾದರು ನಾಯುಡು. ಕಾಂಗ್ರೆಸ್ ದಿನಾಚರಣೆಯಂದು ಜೈಲಿನಲ್ಲಿದ್ದ ತನ್ನ ಮಿತ್ರರ ಸಹಾಯದಿಂದ ಜೇಡಿ ಮಣ್ಣು ತರಿಸಿ ರಾತ್ರಿಯೆಲ್ಲಾ ನಿದ್ದೆಗೆಟ್ಟು ನಾಲ್ಕು ಅಡಿ ಪ್ರಮಾಣದ ಕ್ರಾಂತಿವೀರ ಲೆನಿನ್ ಮೂರ್ತಿಯನ್ನು ಸೃಜಿಸಿಟ್ಟರು.

ಜೈಲುವಾಸ ಮುಗಿದು ಹೊರಬಂದ ಮೇಲೆ ನಾಯುಡು ಅವರ ಹೃದಯವೇ ಕೊಂಚ ಬೇರೆಯಾಯಿತು. ಅವರ

ಮನೋಮಂದಿರಕ್ಕೆ ಯಾವುದೋ ಭೂತಚೇಷ್ಟೆ ಬಂದು ಸೇರಿದಂತಾಯಿತು. ಹೃದಯ ತಲ್ಲಣಗೊಳಿಸುವ ಕಿರಿಕಿರಿ ವಾತಾವರಣದಲ್ಲಿ ಬೆಳೆಯತೊಡಗಿದರು. ಜುಗುಪ್ಸೆಗೊಂಡ ಅವರು ಬೊಂಬಾಯಿಯಲ್ಲಿ ತಾವಿದ್ದ ಮಹಡಿಯಿಂದ ಕೆಳಕ್ಕೆ ಧುಮುಕಿ ಜೀವನವನ್ನು ಅಂತ್ಯಗೊಳಿಸುವ ಅವರ ಯತ್ನ ವಿಫಲವಾಯಿತು. ಈ ಮನೋವಿಪ್ಲವವನ್ನು ಮರೆಯಲು ಪುಸ್ತಕಗಳ ಮೊರೆಹೊಕ್ಕರು. ಯುವಕರನ್ನು ಬ್ರಿಟಿಷ್ ಸರ್ಕಾರದ ವಿರುದ್ಧ ಹುರಿದುಂಬಿಸುವ ಸಲುವಾಗಿ ಒಂದು ಯುವಜನ ಸಂಸ್ಥೆ ಕಟ್ಟಿಕೊಂಡರು. ಈ ಮೂಲಕ ಒಂದು ಕ್ರಾಂತಿಕಾರಕ ಪತ್ರಿಕೆಯೂ ಹೊರ ಬಂದಿತು. ಪೊಲೀಸ್ ಚಿತ್ರಗುಪ್ತರ ದೃಷ್ಟಿ ನಾಯುಡು ಅವರ ಮೇಲೆ ಹೊರಳಿತು. ಶ್ರೀ ನಾಯುಡು ಅವರು ಡಾ. ಮೆಹತಾ ಮತ್ತು ಬೆಹರಾಂ ಅವರೊಡನೆ ನೆಲಮಾಳಿಗೆಗೆ ಸರಿಯಬೇಕಾಯಿತು. ಅಲ್ಲಿ ಕ್ರಾಂತಿವೀರರ ಚರಿತ್ರೆಗಳ ಅಧ್ಯಯನಕ್ಕೆ ಒಳ್ಳೆ ಸದವಕಾಶ ದೊರೆಯಿತು. "ಫ್ರೀ ಪ್ರೆಸ್ಸಿನ" ಸಂಪಾದಕ ಶ್ರೀನಿವಾಸನ್ ಮತ್ತು ವಾಣಿಜ್ಯೋದ್ಯಮಿ ದೀಕ್ಷಿತ್‌ಜಿ ಅವರೂ ಆಗಾಗ ನಾಯುಡು ಜೊತೆ ಕಲೆತು ಸಮಾಲೋಚನೆ ಮಾಡಿಕೊಂಡು ಹೋಗುತ್ತಿದ್ದರು. ಶ್ರೀ ನಾಯಿಡು ಅವರ ಉಪಟಳ ಉಲ್ಬಣವಾಯಿತು. ಗುಪ್ತಚಾರರು ಎಡೆಬಿಡದೆ ಅವರನ್ನು ಪತ್ತೆ ಹಚ್ಚಲು ಪ್ರಯತ್ನಿಸಿದರು. ಕೊನೆಗೆ ನಾಯುಡು ಅವರ ಕೈಗೆ ಸಿಕ್ಕಿಬಿದ್ದರು. ಕೆಲವು ತಿಂಗಳ ಕಾಲ ಶಿಕ್ಷೆ ಅನುಭವಿಸಬೇಕಾಯಿತು.

ರಾಜಕೀಯ ಬುದ್ಧಿಜೀವಿಗಳಾಗಿದ್ದ ಮೇಹರಾಲಿ, ಮೀನೂ ಮಸಾನಿ, ಅಶೋಕ ಮೆಹ್ತಾ ಮುಂತಾದವರ ಜೊತೆಯಲ್ಲಿ ನಾಯುಡು ಅವರೂ ಸೇರಿಕೊಂಡರು. ಅವರೆಲ್ಲಾ ಸೇರಿ ಸಮಾಜವಾದ ಪಕ್ಷ ಕಟ್ಟಿದರು. ಆ ಮೂಲಕ ಭಾರತದ ಆರ್ಥಿಕ ವಿಷಯದ ಬಗ್ಗೆ "ಪಿಕ್ಟೋರಿಯಲ್ ಎಕನಾಮಿಕ್ಸ್"- ಎಂಬ ಸಚಿತ್ರ ವಾರಪತ್ರಿಕೆಯನ್ನು ಪ್ರತಿವಾರವೂ ಎಡೆಬಿಡದೆ ಪ್ರಕಟಿಸುತ್ತಿದ್ದರು. ಇಲ್ಲಿ ನಾಯ್ಡು ಅವರ ಪಾತ್ರ ಬಹು ಹೆಚ್ಚಿನದಾಗಿತ್ತು. "ಅಂಥ ಸಚಿತ್ರ ಜಾಗೃತ ಪತ್ರಿಕೆಯನ್ನು ಭಾರತದಲ್ಲಿ ಮತ್ತೆ ನೋಡಲಿಲ್ಲ" ಎನ್ನುತ್ತಾರೆ ಶ್ರೀ ಆರ್.ಎಸ್.ಎನ್. ಆಗಾಗ ಇದರ ಕ್ರಾಂತಿಕಾರಿ ವ್ಯಂಗ್ಯಚಿತ್ರಗಳನ್ನು 'ನ್ಯಾಷನಲ್ ಫ್ರಂಟ್' ಪತ್ರಿಕೆಯವರು ಪ್ರಕಟಿಸುತ್ತಿದ್ದರು.

ಈ ಕ್ರಾಂತಿಕಾರಕ ನಾಯುಡು ಒಮ್ಮೆ ಇಂಗ್ಲೆಂಡಿಗೆ ಹೊರಟರು. ತಮ್ಮ ಖರ್ಚಿನಲ್ಲಿ ಅವರು ಲಂಡನ್ ಮುಟ್ಟುವ ಮೊದಲೇ ಅಲ್ಲಿನ ಪೊಲೀಸ್ ಅಧಿಕಾರಿಗಳಿಗೆ ನಾಯುಡು ಬಗ್ಗೆ ವಿವರಣೆ ಮುಟ್ಟಿತು. ಶ್ರೀಯುತರನ್ನು 'ಸ್ಕಾಟ್ಲೆಂಡ್ ಯಾರ್ಡ್' ಪೊಲೀಸ್ ಠಾಣೆಗೆ ಕರೆದುಕೊಂಡು ಹೋದರು. ಒಂದು ಗಂಟೆಯಕಾಲ ಅಲ್ಲಿ ಕೂರಿಸಿದ್ದರೂ ಏನೂ ವಿಚಾರಿಸಲಿಲ್ಲ. "ತಾವು ಇನ್ನು ಹೋಗಬಹುದೆಂದು" ಹೇಳಿ ಕಳುಹಿಸಿದರು.

ಆದರೆ ನಾಯುಡು ಅವರ ಹಿಂದೆ ಪೊಲೀಸ್ ಗೂಢಾಚಾರರು ಮಾತ್ರ ನಕ್ಷತ್ರಿಕರಂತೆ ಬೆನ್ನು ಹತ್ತಿ ತಿರುಗುತ್ತಿದ್ದರು.

ಲಂಡನ್ನಿನಲ್ಲಿ ಶ್ರೀ ನಾಯುಡು ಅವರು ಇರುವಷ್ಟು ದಿನವೂ ಕಾರ್ಮಿಕರ ಗುಂಪಿನಲ್ಲಿ ಬೆರೆತಿದ್ದರು. ಅವರೊಡನೆ ಜ್ಯೋತಿಬಸು, ರಜನಿಪಟೇಲ್, ಕುಮಾರ ಮಂಗಲಂ ಮುಂತಾದ ಭಾರತೀಯರು ಇದ್ದುಕೊಂಡು ಕೊಂಚ ನೆರವಾಗಿದ್ದರು. ಲಂಡನ್ನಿನಿಂದ ಮಾಸ್ಕೋವಿಗೆ ಹೋಗಬೇಕೆಂಬ ನಾಯುಡು ಅವರು ಆಸೆ ದ್ವಿತೀಯ ಮಹಾಯುದ್ಧ ಪ್ರಾರಂಭದಿಂದಾಗಿ ಆಗಲಿಲ್ಲ. ಹೇಗಾದರೂ ಮಾಡಿ ತಪ್ಪಿಸಿಕೊಂಡಾದರೂ ಮಾಸ್ಕೋ ಮುಟ್ಟಬೇಕೆಂದಿದ್ದ ಅವರಿಗೆ ಬೆಂಬತ್ತಿದ್ದ ಗುಪ್ತಚಾರ ಮಿತ್ರರಿಂದಾಗಿ ದಾರಿ ಸುಗಮವಾಗಲಿಲ್ಲ. ಅದೇ ವೇಳೆಗೆ ಇಂಡಿಯಾದಿಂದ ಶ್ರೀ ನಾಯುಡು ಅವರಿಗೆ ಕರೆಯೊಂದು ಬಂದು ಬೇಗ ಹಿಂತಿರುಗುವಂತೆ ಮಾಡಿತು. ವಾಪಸಾಗಲು ಜಹಜಿನಲ್ಲಿ ಶ್ರೀಯುತರಿಗೆ ಅವಕಾಶ ದೊರೆಯಲಿಲ್ಲ. ಇಂಡಿಯಾ ದೇಶದ ಓರ್ವ ವಿದ್ಯಾರ್ಥಿಯ ನೆರವಿನಿಂದಾಗಿ ಶ್ರೀ ನಾಯುಡು ಬೇಗ ತಮ್ಮ ಮಾತೃದೇಶ ಮುಟ್ಟಿದರು.

ಬೊಂಬಾಯಿಯ ಕೆಲವು ವರ್ಷಗಳ ಜೀವನದಲ್ಲಿ ಸ್ವಾತಂತ್ರ್ಯ ಚಳವಳಿಯಲ್ಲಿ ಇವರ ಪಾತ್ರ ತುಂಬಾ ಕ್ರಾಂತಿಕಾರಕವಾಗಿತ್ತು. ಒಮ್ಮೆ ಗುಜರಾತಿನ ಸ್ವಾರ್ಥಲಂಪಟರ ವ್ಯಂಗ್ಯಚಿತ್ರವನ್ನು ಶೀಶೆಯೊಂದರ ಆಕೃತಿಯಲ್ಲಿ ರಚಿಸಿ ಪ್ರಕಟಿಸಿದರು. ಆ ಚಿತ್ರದ ಬಗ್ಗೆ ಎಲ್ಲಾ ಕಡೆ ಗುಲ್ಲೋಗುಲ್ಲು. ಯಾರ ಬಾಯಯಲ್ಲಿಯೂ ಆ ಚಿತ್ರದ ಮಾತೇ! ಕೊನೆಗೆ ಬೆಂಕಿ ಪೊಟ್ಟಣದ ಮೇಲೆಯೂ ಕಾಣಿಸಿಕೊಂಡಿತು. ಬೊಂಬಾಯಿಯಿಂದ ಕಲ್ಕತ್ತಾದವರೆಗೂ ಹರಡಿತು.

ಬೊಂಬಾಯಿ ಜೀವನಕ್ಕೆ ಬೇಸರಗೊಂಡು ನೇರ ಬೆಂಗಳೂರಿಗೆ ಬಂದು ಸೇರಿದರು. ಮಡಿವಾಳದಲ್ಲಿ ಕೆಲವು ವರ್ಷ ಕಳೆದರು. ೧೯೫೭ರಲ್ಲಿ ಪ್ರಶಾಂತ ನಗರವಾದ ಮೈಸೂರಿಗೆ ಬಂದು ಸೇರಿದರು. ನಗರದ ವಾತಾವರಣವನ್ನು ಮರೆಸುವ ಕೆಸರೆಯ (ರಾಜೇಂದ್ರನಗರ) ಕೊನೆಯ ಮನೆಯ ಪ್ರಶಾಂತ ವಾಸವನ್ನು ಅನುಭವಿಸುತ್ತಿದ್ದಾರೆ. ವಿಶ್ವದಲ್ಲಿಯೇ ಹೆಸರಾಂತ

ಕಲಾವಿದರೆನಿಸಿಕೊಳ್ಳುವ ಕಲಾಶಕ್ತಿ ಇರುವ ಅವರು ತಮ್ಮ ಯಾವುದೋ ಅನಿವಾರ್ಯ ಒತ್ತಡದಿಂದ ತೆರೆಮರೆಗೆ ಸರಿದಂತೆ ಕಾಣುವುದು ಖೇದದ ಸಂಗತಿ.

ಆರ್.ಎಸ್.ಎನ್. ಅವರ ವ್ಯಕ್ತಿತ್ವ ಎಷ್ಟು ನಿರಾಡಂಬರ. ನನ್ನನ್ನು ಒಳಗೆ ಕರೆದರು, ಅವರ ಮಂಚದ ಮೇಲೆಯೇ ಕೂರಿಸಿದರು. ಕಲೆಯ ಬಗ್ಗೆ ರಾಜಕೀಯದ ಬಗ್ಗೆ ಇನ್ನೂ ಅನೇಕ ವಿಷಯಗಳ ಬಗ್ಗೆ ಆಳವಾಗಿ ಅದ್ಭುತವಾಗಿ ಮಾತನಾಡುವ ಈ ವಿಶಿಷ್ಟ ವ್ಯಕ್ತಿತ್ವಕ್ಕೆ ಬೆರಗಾಗಿ ಕುಳಿತೆ. ತಮ್ಮ ವಾಗ್ಝರಿಯ ವೈಖರಿಯಲ್ಲಿ ನಮ್ಮನ್ನು ಮುಳುಗಿಸಿಬಿಡುತ್ತಾರೆ. ಅವರ ಕೊಠಡಿ ಪುಟ್ಟದು. ಅಷ್ಟೇ ಅಚ್ಚುಕಟ್ಟು. ಎದುರಿನ ಗೋಡೆಯಲ್ಲಿ ಗಾಂಧೀಜಿ ಫೋಟೋ ರಷ್ಯಾದ ನಾಯಕನೊಬ್ಬನ ಭಾವಚಿತ್ರ ಇಷ್ಟು ಹೊರತು ಮತ್ತೇನೂ ಇಲ್ಲ. ಅವರ ಪಕ್ಕದಲ್ಲಿ ಪುಟ್ಟಫ್ಯಾನ್. ಕೈಗೆ ನಿಲುಕುವಂತೆ ಪುಸ್ತಕದ ಕಪಾಟು. ಬೆನ್ನಿನ ಬಳಿ ದೀಪ.

"ಟೀ ಮಾಡಲೇ?" ಎಂದರು ಆರ್.ಎಸ್.ಎನ್.

ಇವರೊಡನೆ ಸಂಭಾಷಣೆಗೆ ಕುಳಿತರೆ ತಾವು ತಿಳಿದ ಅಪಾರ ಜ್ಞಾನಭಂಡಾರವನ್ನು ನಮ್ಮ ಮುಂದೆ ಎಳೆ ಎಳೆಯಾಗಿ ಬಿಚ್ಚುತ್ತಾರೆ. ನಡುನಡುವೆ ತಲೆಯಲ್ಲಿ ಆತಂಕ ಉಂಟಾದಂತಾಗಿ "ಹಾಳು ಆ ಕುಳ್ಳ ತಲೆ ಮೇಲೆ ಹೊಡೆಯುತ್ತಾನೆ ಸ್ವಾಮಿ" ಎನ್ನುತ್ತಾರೆ. ಒಮ್ಮೊಮ್ಮೆ ಅವರ ಮಾತುಗಳಿಂದಾಗಿ ನಮಗೆ ದಿಗಿಲಾಗುತ್ತದೆ.

"ಭೂತ ಚೇಷ್ಟೆ ನನ್ನ ಮೇಲೆ ಬಂದಿದೆ. ಇದು ನನ್ನ ಜೀವನದ ಮೇಲೂ, ನನ್ನ ಕಲೆಯ ಮೇಲೂ ಉಂಟಾಗಿದೆ. ಅದರ ಉಪದ್ರವ ಸಹಿಸಲಾರೆ. ಈ ಬಗ್ಗೆ ನೆಹರೂರವರಿಗೂ ಪತ್ರ ಬರೆದಿದ್ದೇನೆ ..ಓದಿ" ಎಂದು ಪ್ರತಿಯನ್ನು ಕೈಗಿತ್ತಿದ್ದರು ಒಮ್ಮೆ... "ಇದು ಸುಳ್ಳು ಎಂದೂ ತಿಳಿಯಬೇಡಿ; ಬೇಕಾದರೆ ವಿಚಾರಣೆಗೆ ಒಂದು ಸಂಸ್ಥೆ ಗೊತ್ತುಮಾಡಿ" ಎನ್ನುತ್ತಾರೆ.

ತಾವಿರುವ ಮನೆಯಲ್ಲಿ ಆರಾಮ ಕುರ್ಚಿಯಲ್ಲಿ ಒಬ್ಬರೇ ಕುಳಿತಿರುತ್ತಾರೆ. ಯಾವುದೋ ಮಗುವೊಂದು ಬಂದು ಅವರ ಎದುರಿನ ಗೇಟಿನ ಬಳಿ ಬಂದು 'ಚಾಕ್ಲೆಟ್ ಚಾಕ್ಲೆಟ್' ಎಂದು ಕೂಗುತ್ತದೆ. ಇವರ ಮನಸ್ಸು ನೆಮ್ಮದಿಯಿಂದಿದ್ದರೆ ತಕ್ಷಣ ಎದ್ದು ಕೋಣೆಯಿಂದ ಏನನ್ನೋ ತಂದು ಆ ಮಗುವಿನ ಕೈಗಿಡುತ್ತಾರೆ. ಆ ಮಗು ಹೋದ ಕೊಂಚ ವೇಳೆಯಲ್ಲಿ ಒಬ್ಬೊಬ್ಬರಾಗಿ ಆ ಸುತ್ತಿನ ಮನೆ ಮಕ್ಕಳ ದಂಡೇ ಬರುತ್ತದೆ.

"ನಂಗೇ...ನಂಗೇ..."

"ಮಂಜೆ ಸಾಬ್" ಎಲ್ಲರನ್ನೂ ತೃಪ್ತಿಗೊಳಿಸಿ ಕಳುಹಿಸುತ್ತಾರೆ.

ಒಮ್ಮೊಮ್ಮೆ ಇವರ ಮನೆಯ ಮುಂದಿನ ರಸ್ತೆಯ ಕಡೆ ಇವರ ದೃಷ್ಟಿ ಹರಿಸುತ್ತಾ ಕುಳಿತಿರುತ್ತಾರೆ. ಅವರ ಮೊಹಲ್ಲಾದಿಂದ ಯಾವುದಾದರೂ 'ಸಿಟಿ'ಯ ಕಡೆ ಬಂಡಿಯೊಂದು ಹೊರಟಿತೆಂದರೆ ಹತ್ತಾರು ಪುಟ್ಟ ಮಕ್ಕಳೂ ಬಂಡಿ ಏರುತ್ತವೆ. ನಾಯ್ಡು ಕುಳಿತಿರುವ ಬಾಗಿಲು ಕಡೆ ಆ ಮಕ್ಕಳು ನೋಡಿ ಕೈ ಬೀಸುತ್ತವೆ. ಶ್ರೀ ನಾಯ್ಡು ಅವರೂ ಪ್ರತಿಯಾಗಿ ಕೈ ಬೀಸುತ್ತಾರೆ. ಅವರ ವಾತ್ಸಲ್ಯ ಮಮತೆ ಪ್ರೇಮ ಕಂಡ ನಮಗೆ ವಿಸ್ಮಯವಾಗದಿರದು.

ಇಂದಿಗೂ ಅವರು ತಮ್ಮ ಕೆಲಸ ಕಾರ್ಯಗಳನ್ನು ತಾವಾಗಿಯೇ ಮಾಡಿಕೊಳ್ಳುವ ಅನಿವಾರ್ಯತೆ ಅವರ ಪಾಲಿಗೆ ಮೀಸಲಾಗಿದೆ.. ಬೇಸರವಾದರೆ ಲೇಖನಿಯನ್ನು ಎತ್ತಿಕೊಂಡು ಮಿತ್ರರಿಗೆ ಕಾರ್ಡಿನಲ್ಲಿ ಚಿತ್ರಗಳನ್ನು ಒಕ್ಕಣೆಯನ್ನು ಬರೆದು ಪೋಸ್ಟ್ ಮಾಡುವ ಹವ್ಯಾಸ ಇಟ್ಟುಕೊಂಡಿದ್ದಾರೆ. ಆರ್.ಎಸ್.ಎನ್. ಅವರ ಇಂಥ ಅಪೂರ್ವವಾದ ಪೋಸ್ಟ್ ಕಾರ್ಡಗಳನ್ನು ಸಂಗ್ರಹಿಸಿ ಇಡುವುದೇ ಕೆಲವು ಮಿತ್ರರಿಗೆ ಹಬ್ಬವೆನಿಸಿದೆ.

ವರಶಿಲ್ಪಿಗೆ ಯಾವ ರಾಷ್ಟ್ರಪ್ರಶಸ್ತಿಯೂ ಬೇಕಿಲ್ಲ. ಯಾವ ಸನ್ಮಾನ ಸಮಾರಂಭಗಳೂ ಬೇಕಿಲ್ಲ. ಆದರೆ ಇಂಥ ಉಜ್ವಲ ಕಲಾವಿದನನ್ನು ನಾವು ಪಡೆದಿದ್ದೇವೆ ಎಂಬ ಹೆಮ್ಮೆ ಮಾತ್ರ ನಮಗೆ ಇದ್ದರೆ ಸಾಕೇ?

*('ಕಲೋಪಾಸಕರು' ಗ್ರಂಥದಿಂದ)*





# ಆರ್.ಎಸ್. ನಾಯ್ಡು

■ *ಕೆ.ವಿ. ಸುಬ್ರಹ್ಮಣ್ಯಂ*

**ಅ**ಸಾಧಾರಣ ಪ್ರತಿಭಾಶಾಲಿ, ಕಲಾಸಾಧಕ, ಕ್ರಾಂತಿಯ ಕಾವಿನಿಂದ ಕೂಡಿದ ಕಲಾವಿದ, ಸ್ವಾತಂತ್ರ್ಯ ಯೋಧ, ವಿಚಾರವಾದಿ, ಜ್ಞಾನಿ, ಬುದ್ಧಿಜೀವಿ ಎಂಬ ಹಲವಾರು ವಿಶೇಷಣಗಳಿಗೆ ಸರಿಹೊಂದುವ ರಂಗಸ್ವಾಮಿ ಸೀತಾಪತಿ ನಾಯ್ಡು, ಆರ್.ಎಸ್.ಎನ್. ಎಂದೇ ಕಲಾವಲಯಗಳಲ್ಲಿ ಖ್ಯಾತರಾಗಿದ್ದವರು. ನಾಯ್ಡು ಎಂದರೆ ಚಿತ್ರ ಹಾಗೂ ಶಿಲ್ಪಕಲೆ ಸಂಗಮವೆಂದೇ ಹೇಳಬಹುದು. ಅವರದೇ ಆದ ಪ್ರತ್ಯೇಕತೆಯೊಂದನ್ನು ಚಿತ್ರಶಿಲ್ಪಗಳಲ್ಲಿ ಕಾಯ್ದುಕೊಂಡು ಬಂದವರಲ್ಲದೆ, ವೈವಿಧ್ಯಮಯವಾಗಿ ಅಭಿವ್ಯಕ್ತಿಯಾಗಿ ಅಭಿವ್ಯಕ್ತಿಸುವ ಪ್ರಾಮಾಣಿಕ ಪ್ರಯತ್ನಗಳನ್ನು ಮಾಡಿದವರಾಗಿ ಇಂದು ಗಮನಾರ್ಹವೆನಿಸುತ್ತಾರೆ.

೧೯೦೬ರಲ್ಲಿ ನಾಯ್ಡು ಬೆಂಗಳೂರಿನಲ್ಲಿ ಹುಟ್ಟಿದರಾದರೂ, ವೇಲೂರು, ತಿರುಚನಾಪಳ್ಳಿ, ಧಾರವಾಡ, ಪೂನಾ ನಗರಗಳ ಜೊತೆ ಬೆಂಗಳೂರಿನಲ್ಲೂ ವಿದ್ಯಾಭ್ಯಾಸ ಮಾಡಿದರು. ವಿದ್ಯಾರ್ಥಿ ಜೀವನದಲ್ಲಿ ಉತ್ತಮ ವಾಗ್ಮಿ, ಕ್ರೀಡಾಪಟು ಮತ್ತು ಉತ್ಸಾಹೀ ವಿದ್ಯಾರ್ಥಿ ನಾಯಕರಾಗಿದ್ದರು. ಪೂನಾ ಫರ್ಗ್ಯೂಸನ್ ಕಾಲೇಜಿನ ವ್ಯಾಸಂಗದ ಅವಧಿಯಲ್ಲಿ ಯುವ ಕಾಂಗ್ರೆಸ್ ಸಂಸ್ಥೆ ಕಟ್ಟಿದರಲ್ಲದೆ ೧೯೩೧ರಲ್ಲಿ ಸ್ವಾತಂತ್ರ್ಯ ಹೋರಾಟ ಸಮರದಲ್ಲಿ ಯೋಧನಾಗಿ ಪ್ರವೇಶಿಸಿ ೧೫ ತಿಂಗಳು ಜೈಲುವಾಸ ಅನುಭವಿಸಿದರು. ಮತ್ತೆರಡು ಬಾರಿ ಇದೇ ಶಿಕ್ಷೆ ಅನುಭವಿಸಿದರು. ೧೯೩೯ರಲ್ಲಿ ಯರವಾಡ ಜೈಲಿನಲ್ಲಿದ್ದ ನಾಯ್ಡು ಅಲ್ಲಿನ ಪಕ್ಷಪಾತಗಳನ್ನು ಪ್ರತಿಭಟಿಸಿ, ಅದೇ ಜೈಲಿನಲ್ಲಿದ್ದ ಗಾಂಧೀಜಿಯವರಿಂದ ಶಾಂತಿ ಉಪದೇಶ ಪಡೆದದ್ದೂ ಉಂಟು.

ಆದರೂ ಅಲ್ಲಿದ್ದ ಜರ್ಮನ್ ಪತ್ರಿಕೋದ್ಯಮ ಮಿತ್ರರ ಸ್ನೇಹದಿಂದ ಸದಾ ಚುಟ್ಟಾ ಸೇದುವುದರಲ್ಲಿ ಅಗ್ರಗಣ್ಯರಾದರು.

ನಂತರ ವಾಮಪಂಥದವರ ನಿಕಟ ಸಂಪರ್ಕ ಮತ್ತು ದೀನದಲಿತರ ಬಗೆಗೆ ಅನುಕಂಪ ಇವುಗಳಿಂದ ಹುಟ್ಟಿದ ಅನುಭೂತಿಯು ಶಿಲ್ಪ ಮತ್ತು ಚಿತ್ರಣಗಳ ಮೂಲಕ ಅರಳಲಾರಂಭಿಸಿತು. ಜೈಲಿನಿಂದ ಹೊರಬಂದ ಕಾಲದಲ್ಲಿಯೇ ಬದಲಾಗಿದ್ದ ನಾಯ್ಡು ಮುಂಬಯಿಯಲ್ಲಿ ಭಗ್ನಪ್ರೇಮಿಯಾಗಿ ಮನದ ತಳಮಳಗಳನ್ನು ಮರೆಯಲು ಪುಸ್ತಕಗಳ ಮೊರೆಹೊಕ್ಕರು. ಕ್ರಾಂತಿಕಾರಿಗಳ ಸಹವಾಸ–ನಡವಳಿಕೆಗಳಿಂದ ಭೂಗತ ಚಳವಳಿಗಳಲ್ಲಿ ಸೇರಿ ಕ್ರಾಂತಿವೀರರ ಚರಿತ್ರೆಯ ಅಧ್ಯಯನ ಮಾಡಿದ್ದು ಸಾಕಷ್ಟು ಪ್ರಭಾವ ಬೀರಿತು. ಜೈಲು ಶಿಕ್ಷೆ, ಏಕಾಂತ ಜೀವನ, ಪ್ರೀತಿಯ ಜೊತೆ ಏಕ ಪ್ರಕಾರ ಕೃತಿ ರಚನೆಯಾಗತೊಡಗಿತು.

ನಾಸಿಕದ ಬಂದೀಖಾನೆಯಲ್ಲಿ ನಾಯ್ಡು ರಚಿಸಿದ ಆಳೆತ್ತರದ ಲೆನಿನ್ ಮೂರ್ತಿಯನ್ನು ಜೇಡಿಮಣ್ಣಿನಲ್ಲಿ ರಾತ್ರಿಯಲ್ಲಾ ನಿದ್ದೆಗೆಟ್ಟು ಸೃಷ್ಟಿಸಿದಾಗ ಅಂಕುರಾರ್ಪಣವಾಗಿ, ಅವರಲ್ಲಿ ಸುಪ್ತವಾಗಿದ್ದ ಕಲಾಪ್ರತಿಭೆ ನಂತರ

ನೂರಾರು ಶಿಲ್ಪ, ಸಾವಿರಾರು ರೇಖಾಚಿತ್ರ ಹಾಗೂ ವರ್ಣಚಿತ್ರಗಳಲ್ಲಿ ಮೂರ್ತೀಭವಿಸಿದೆ. ಅವರು ರಚಿಸಿದ ಪ್ಲಾಸ್ಟರ್ ಮಾಧ್ಯಮದ ಉಬ್ಬಚ್ಚಿನ ಭಾವಚಿತ್ರಗಳಾಗಲೀ, ಶಿಲ್ಪಗಳಾಗಲೀ, ಜೀವಂತವಾಗಿರುವಂತೆ ಭಾಸವಾಗುತ್ತವೆ. ಲೆನಿನ್, ಗಾರ್ಕಿ, ಮುಸಲೋನಿ, ಗಾಂಧಿ, ಬುದ್ಧ, ಶಿವ, ಕ್ರಿಸ್ತ, ಬೇಂದ್ರೆ, ಕುವೆಂಪು, ಕೈಲಾಸಂ, ಷಾ ಮೊದಲಾದವರ ಕೃತಿಗಳು ಈ ಮಾತುಗಳಿಗೆ ಉದಾಹರಣೆಗಳಂತಿವೆ. ಯಾವ ಕಲಾ ಶಾಲೆಯಲ್ಲೂ, ಯಾವ ಗುರುವಿನಲ್ಲೂ ಅಭ್ಯಾಸ ಮಾಡದೆ ಸ್ವಶಕ್ತಿಯಿಂದ ರೂಢಿಸಿಕೊಂಡ ಕಲೆ ಇವರದಾಗಿದೆ.

ಸರಳ ವ್ಯಕ್ತಿತ್ವದ ತೀವ್ರ ಕ್ರಾಂತಿಕಾರೀ ಮನೋಭಾವದ ನಾಯ್ಡುರವರ ಚಿತ್ರಗಳಲ್ಲಿ ತೀಕ್ಷ್ಣತೆ ಇದೆ, ಬದುಕಿನ ವಿಡಂಬನೆ, ವೇದನೆಗಳಿವೆ, ಶೈಲಿಗಳ ಬಾಹುಳ್ಯವಿದೆ. ಅವರ ರೇಖೆಗಳು ಅವರ ಮನೋಭಾವದ ಪ್ರತಿರೂಪದಂತೆ ಕ್ರಾಂತಿಗಾಗಿ ಬಾರಿಸಿದ ಚಂಡೆ ಮದ್ದಲೆಗಳ ಬಡಿತದ ವೀರ್ಯವಂತಿಕೆಯನ್ನು ಹೊಂದಿವೆ; ಕೆಲವೊಮ್ಮೆ ತಲ್ಲಣಗೊಂಡ ಕವಿಯೊಬ್ಬನ ಕಾವ್ಯಮಯ ಭಾವವನ್ನೂ ಅಭಿವ್ಯಕ್ತಿಸುತ್ತವೆ. ಅದ್ಭುತ ನಿರೂಪಣೆ, ಗತಿ, ವಿನ್ಯಾಸಗಳನ್ನು ಸೂಚಿಸುವ ಮಿತವ್ಯಯದ ನೂತನ ಶೈಲಿಯ ಉತ್ತಮ ಸಾಮರಸ್ಯ ಕಂಡುಬರುತ್ತದೆ. ಅವರ ವ್ಯಂಗ್ಯಚಿತ್ರಗಳ ವಿಡಂಬನೆ ಅಪರೂಪ. ಸಮಾಜದ ಪ್ರೀತಿಯಿಂದ ಸರ್ಕಾರವನ್ನು ಟೀಕಿಸಲು ಈ ಮಾಧ್ಯಮವನ್ನವರು ಯಶಸ್ವಿಯಾಗಿ ದುಡಿಸಿಕೊಂಡರು. ಕೆಲವೇ ರೇಖೆಗಳಲ್ಲಿ, ತುಟಿ ಹಾಗೂ ಕಣ್ಣಂಚಿನಲ್ಲಿ, ಹಣೆಯ ನೆರಿಗೆಯಲ್ಲಿ ರೇಖಿಸುತ್ತಿದ್ದ ಒಂದೆರಡು ಡೊಂಕುಗಳು, ಗೆರೆ, ಬಿಂದುಗಳು ಇಡೀ ಚಿತ್ರಕ್ಕೆ ಒಂದು ರೀತಿಯ ಶಕ್ತಿಯನ್ನು ನೀಡುತ್ತಿತ್ತು. ವಿದೇಶಗಳಲ್ಲೂ ಪ್ರಶಂಸೆ ಗಳಿಸಿದ್ದ 'ಪಿಕ್ಟೋರಿಯಲ್ ಎಕ್‌ನಾಮಿಕ್ಸ್' ಪ್ರಕಟಣೆಗಳಲ್ಲಿ ನಾಯ್ಡುರವರ ವ್ಯಂಗ್ಯಚಿತ್ರಗಳ ಪಾತ್ರ ಅಮೂಲ್ಯ. ಅವರ ಕ್ರಾಂತಿಕಾರಿ ಚಿತ್ರಗಳು 'ಭಾರತ ಜ್ಯೋತಿ', 'ಹಿಂದೂ' ಮೊದಲಾದ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾದ ನಂತರ ಅವು ವಿದೇಶೀ 'ಮ್ಯಾಂಚೆಸ್ಟರ್ ಗಾರ್ಡಿಯನ್' ಪತ್ರಿಕೆಯಲ್ಲಿ ಮರುಮುದ್ರಣ ಕಾಣುತ್ತಿರುವುದಲ್ಲದೆ ಭಾರತದ ಇತರ ಭಾಷಾ ಪತ್ರಿಕೆಗಳಲ್ಲೂ ಕಾಣಿಸಿಕೊಳ್ಳುತ್ತಿದ್ದವು. ಬೆಂಗಳೂರಿನಲ್ಲಿ ವಾಸವಿದ್ದಾಗ ಇವರ ವ್ಯಂಗ್ಯಚಿತ್ರಗಳು 'ಪ್ರಜಾವಾಣಿ', 'ಡೆಕ್ಕನ್ ಹೆರಾಲ್ಡ್' ಪತ್ರಿಕೆಗಳಲ್ಲೂ ಪ್ರಕಟವಾದವು.

೧೯೫೭ರ ವೇಳೆಗೆ ಮೈಸೂರಿಗೆ ಧಾವಿಸಿದ ನಾಯ್ಡು, ಅಲ್ಲಿಯ ಕಾರ್ಮಿಕರ ನಡುವೆ ಸರಳ ಜೀವನ ನಡೆಸಲಾರಂಭಿಸಿದರು. ದಿನಾಂಕ: ೦೬-೧೦-೧೯೮೫ರಲ್ಲಿ ಇಹಲೋಕ ತ್ಯಜಿಸುವವರೆಗೆ ತಮ್ಮ ೮೦ ವರ್ಷಗಳ ಬ್ರಹ್ಮಚಾರಿ ಜೀವನದಲ್ಲಿ ಯಾರೊಬ್ಬರ ಹಂಗನ್ನೂ ಅವಲಂಬಿಸದೆ ಸರಳ, ಪ್ರಾಮಾಣಿಕ ಜೀವನ ನಡೆಸುತ್ತಾ ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳುತ್ತಿದ್ದ ನಾಯ್ಡು ಪ್ರಶಸ್ತಿಗಳನ್ನು ಎಂದೂ ಬಯಸಿದವರಲ್ಲ. ಕಲಾವಿದರನ್ನು, ಕಲೆಯನ್ನು ಪ್ರೀತಿಸುತ್ತಿದ್ದ ಇವರ ಬಳಿಗೇ ಸಾಹಿತ್ಯ ಪರಿಷತ್ತು, ವ್ಯಂಗ್ಯಚಿತ್ರಕಾರರ ಸಂಸ್ಥೆಗಳು ಬಂದು ಸನ್ಮಾನಿಸಿದುವಲ್ಲದೆ ರಾಜ್ಯ ಲಲಿತ ಕಲಾ ಅಕಾಡೆಮಿ ಪ್ರಶಸ್ತಿ ಹಾಗೂ ರಾಜ್ಯ ಪ್ರಶಸ್ತಿಗಳೂ ದೊರೆತವು. ನಾಯ್ಡುರವರ ಕೃತಿಗಳು ಅವರ ಗಾಢ ರಾಷ್ಟ್ರಪ್ರೇಮ, ವಾಮಪಂಥದ ಬಗ್ಗೆ ಇದ್ದ ಒಲವು, ಸಂಸ್ಕೃತಿಯ ಅಭಿಮಾನ ಪ್ರಗತಿಶೀಲ ದೃಷ್ಟಿ ಮಿಗಿಲಾಗಿ ಸಾಮಾನ್ಯರು ಅದರಲ್ಲಿಯೂ ದಲಿತ ವರ್ಗದ ಬಗೆಗೆ ಅನುಕಂಪಗಳ ಪ್ರತೀಕದಂತಿವೆ.

*('ದೃಶ್ಯಕಲೆಯ ಆರಾಧಕರು' ಗ್ರಂಥದಿಂದ)*

*ಪ್ರ.ಸಂಪಾದಕರು: ಬಿ.ವಿ.ಕೆ. ಶಾಸ್ತ್ರೀ, ಸಂಪಾದಕರು: ಎಚ್.ಎನ್. ಸುರೇಶ್*



# ಅನನ್ಯ ಶೈಲಿಯ ಕಲಾವಿದ

■ *ರವಿಕುಮಾರ ಕಾಶಿ*

ಆರ್.ಎಸ್. ನಾಯ್ಡು ಅವರು ರೇಖಾಚಿತ್ರಗಳಿಗೆ, ವ್ಯಂಗ್ಯಚಿತ್ರಗಳಿಗೆ, ಶಿಲ್ಪಗಳಿಗೆ ಹೆಸರಾದವರು. ಅವರು ಅನೇಕ ಪ್ರಸಿದ್ಧ ವ್ಯಕ್ತಿಗಳ ರೇಖಾಚಿತ್ರಗಳನ್ನು ಬಿಡಿಸಿದ್ದಾರೆ. ಆದರೆ ಹೀಗೆ ರೇಖಾಚಿತ್ರ ಬಿಡಿಸುವಾಗ ಅವರದ್ದೇ ಆದ ಛಾಪನ್ನು ಅದರಲ್ಲಿ ತಂದಿದ್ದಾರೆ. ಅವನ್ನು ನೈಜ ಭಾವಚಿತ್ರ ಹಾಗೂ ಸಂಪೂರ್ಣ ವ್ಯಂಗ್ಯಚಿತ್ರ ಇವುಗಳ ನಡುವೆ ನಿಂತ ಸ್ಥಿತಿ ಎನ್ನಬಹುದು.

ಅನಕೃ ಅವರ ಈ ವ್ಯಂಗ್ಯಚಿತ್ರದಲ್ಲಿ ಅನಕೃ ಅವರ ಹಿಂದೆ ಬಾಚಿದ ಕೂದಲು, ಅವರು ಹುಬ್ಬು ಗಂಟಿಕ್ಕಿ ದಿಟ್ಟಿಸಿ ನೋಡುತ್ತಿರುವ ರೀತಿ ಹೀಗೆ ಅನೇಕ ವಿವರಗಳು ಅನಕೃ ಅವರ ವ್ಯಕ್ತಿತ್ವದ ಪರಿಚಯವನ್ನು ನಮಗೆ ನೀಡುವಲ್ಲಿ ಸಫಲವಾಗಿದೆ. ಕ್ಲೋಸ್ ಕಾಲರಿನ ಕರಿಬಣ್ಣದ ಕೋಟನ್ನು ತೊಟ್ಟು ಇಲ್ಲಿ ಮೂಡಿ ಬಂದ ಅನಕೃ ಮುಂಗೋಪದವರಾಗಿ, ತಮ್ಮ ವಿಚಾರಗಳಲ್ಲಿ ದೃಢ ವಿಶ್ವಾಸ ಇಟ್ಟವರಾಗಿ, ವೈಚಾರಿಕ ನೋಟದಿಂದ ಎಲ್ಲವನ್ನೂ ಜಾಲಿಸುವವರಂತೆ ಕಾಣಿಸುತ್ತಾರಲ್ಲದೆ, ಅವರ ತೀಕ್ಷ್ಣ ನೋಟದಲ್ಲಿ ಬಿಗಿ ಹಿಡಿದ ತುಟಿಯಲ್ಲಿ ಎದುರಾಳಿಯನ್ನು ಅಳೆಯುವ ತೀವ್ರತೆ ಇದೆ.

ಈ ರೇಖೆಗಳನ್ನು ಮೂಡಿಸಲು ಅವರು ಬಳಸಿರುವುದು ಕುಂಚ ಹಾಗೂ ಇಂಕ್. ಪೂರ್ವ ತಯಾರಿ ಇಲ್ಲದೆ, ಅಂದರೆ ಪೆನ್ಸಿಲ್‌ನಲ್ಲಿ ತೆಳುವಾದ ರೇಖೆಗಳನ್ನು ಹಾಕಿಕೊಂಡು ನಂತರ ಇಂಕ್‌ನಿಂದ ಅದನ್ನು ಅನುಸರಿಸದೆ ನೇರವಾಗಿ ಬ್ರಷ್‌ನಿಂದಲೇ ಬಿಡಿಸಿದಂತಿದೆ ಈ ಚಿತ್ರ. ಹಾಗಾಗಿ ರೇಖೆಗಳ ಓಘ ಚೆನ್ನಾಗಿ ಮೂಡಿಬಂದಿದೆ. ಈ ರೇಖೆಗಳು ಸಪೂರವಾಗುವ, ದಟ್ಟವಾಗುವ ಪರಿಯಲ್ಲೇ ಚಿತ್ರಿತ ವಸ್ತುವಿನ ತ್ರಿಮಾನ ಸೂಚಿತವಾಗಿದೆ. ಈ ರೀತಿಯ ರೇಖಾಚಿತ್ರಗಳು ಯಶಸ್ವಿಯಾಗಬೇಕಾದರೆ ಆದಷ್ಟು ಕಡಿಮೆ ವಿವರಗಳು ಇರಬೇಕು. ಅಂತೆಯೇ ಅನಕೃ ಭಾವಚಿತ್ರದಲ್ಲಿ ಎಷ್ಟು ಬೇಕೋ ಅಷ್ಟೇ ಅದಕ್ಕಿಂತ ಹೆಚ್ಚೂ ಇಲ್ಲ, ಕಡಿಮೆಯೂ ಇಲ್ಲ ಎಂಬಂತೆ ಬಿಡಿಸಿದ್ದಾರೆ ನಾಯ್ಡು.

ಇದು ಮುದ್ರಣಕ್ಕೆಂದು ಮಾಡಿದ್ದ ರೇಖಾಚಿತ್ರವಾದ್ದರಿಂದ ಅಂದಿನ ಮುದ್ರಣ ತಂತ್ರದ ಮಿತಿಯನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಬಿಡಿಸಿದ ಚಿತ್ರವಾಗಿದೆ. ಇಲ್ಲಿ ವಿವರದ ಮಿತಿಗೆ ಇದೂ ಸಹ ಒಂದು ಕಾರಣ.

ಈ ರೇಖಾಚಿತ್ರವನ್ನು ಬಿಡಿಸಿದ ರೀತಿಯಲ್ಲಿ ನಾಯ್ಡು ಅವರು ಪೌರ್ವಾತ್ಯ ದೇಶಗಳ–ಚೀನಾ, ಜಪಾನ್, ರೇಖಾಚಿತ್ರಗಳನ್ನು ಬಹಳ ಮೆಚ್ಚಿಕೊಂಡಿದ್ದಾರೆ ಎಂಬುದು ಕಂಡುಬರುತ್ತದೆ. ರೇಖೆಗಳನ್ನು ಬ್ರಷ್‌ನಿಂದ ಬರೆದ ರೀತಿ, ರೇಖೆಗಳ ಲಕ್ಷಣ ಹಾಗೂ ಅವರು ಸಹಿ ಮಾಡಿದ ರೀತಿ–ಕ್ಯಾಲಿಗ್ರಾಫಿಕ್ ಎನ್ನುವಂತಹ ಲಕ್ಷಣಗಳು ಇದಕ್ಕೆ ಸಬೂತು.

ನವ್ಯದವರು ನಂಬಿಕೊಂಡಂತೆ, ಕಲಾವಿದ ಅವನ ಸಹಿ ಎನ್ನುವಂತಹ ಅನನ್ಯ ಶೈಲಿಯನ್ನು ರೂಢಿಸಿಕೊಳ್ಳಬೇಕು ಎಂಬ ಪರಿಪಾಠವನ್ನು ಇಲ್ಲಿ ಕಾಣುತ್ತೇವೆ. ಏಕೆಂದರೆ ಆರ್.ಎಸ್. ನಾಯ್ಡು ಅವರ ಇನ್ನಿತರ ರೇಖಾ ಚಿತ್ರಗಳಲ್ಲಿ ಸಹ ಬಹುತೇಕ ಹತ್ತಿರ ಎನ್ನಿಸುವ ಗುಣ, ಲಕ್ಷಣವನ್ನೇ ಕಾಣಬಹುದು.

*(ಪ್ರಜಾವಾಣಿ, ಸಾಪ್ತಾಹಿಕ ಪುರವಣಿ, ೨೯–೧–೨೦೦೬)*





# ಕುವೆಂಪು ಜನ್ಮ ದಿನದಂದು ಆರ್.ಎಸ್. ನಾಯ್ಡು ನೆನಪು

ಇದೇ ತಿಂಗಳು ೨೯ನೇ ತಾರೀಖು ಕುವೆಂಪು ಅವರಿಗೆ ೮೮ ವರ್ಷ ತುಂಬುತ್ತದೆ. ಅವರು ಜನಿಸಿದ ದಿನ ೨೯.೧೨.೧೯೦೪.

ಈ ಇಡೀ ಶತಮಾನವನ್ನು ತಮ್ಮ ಶ್ರೀಮಂತ ವ್ಯಕ್ತಿತ್ವ ಮತ್ತು ಅರ್ಥಪೂರ್ಣ ಕೃತಿಗಳಿಂದ ತುಂಬಿದ ಕುವೆಂಪು ಅವರಿಗೆ 'ಪತ್ರಿಕೆ' ವಿಶಿಷ್ಟ ರೀತಿಯಲ್ಲಿ ಅಭಿನಂದನೆ ಸಲ್ಲಿಸ ಬಯಸುತ್ತದೆ.

ಆರ್.ಎಸ್. ನಾಯ್ಡು ಅವರು ಕರ್ನಾಟಕದ ಮಹಾನ್ ಶಿಲ್ಪಿ ಮತ್ತು ಚಿತ್ರಕಾರರಾಗಿದ್ದರು; ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಗಾಂಧೀಜಿಯವರ ನಿಕಟವರ್ತಿಯಾಗಿದ್ದರು. ಅವರು ರಚಿಸಿದ ಕುವೆಂಪು ಅವರ ಶಿರೋಶಿಲ್ಪ (bust)ದ ಚಿತ್ರವನ್ನು ಕೆ.ಸಿ. ಚೌಡಪ್ಪರೆಡ್ಡಿಯವರು ನಮಗೆ ನೀಡಿ ನಾಯ್ಡು ಅವರ ಬಗ್ಗೆ ಕೆಳಗಿನ ಮಾಹಿತಿಯನ್ನು ಒದಗಿಸಿದ್ದಾರೆ;

ಪದ್ಮವಿಭೂಷಣ, ರಾಷ್ಟ್ರಕವಿ ಡಾ॥ ಕುವೆಂಪು ಅವರ ಅಪೂರ್ವ ಶಿರೋಶಿಲ್ಪದ ಕಲಾಕೃತಿಯ ಪ್ಲಾಸ್ಟರ್ ಆಫ್ ಪ್ಯಾರಿಸ್ ವಸ್ತುವಿನಲ್ಲಿ ರೂಪಿಸಿದವರು ಅಂದಿನ ವಿಶ್ವವಿಖ್ಯಾತ ಕಲಾ ಶಿಲ್ಪಿ ಆರ್.ಎಸ್. ನಾಯ್ಡು ಅವರು. ಮಹಾತ್ಮ ಗಾಂಧಿಯವರೊಡನೆ ಯರವಾಡ ಮತ್ತು ನಾಸಿಕ್ ಜೈಲುಗಳಲ್ಲಿ ಆರು ವರ್ಷ (೧೯೪೦ ರಿಂದ ೧೯೪೬ ಪೂರ್ತಿ) ಕಠಿಣ ಶಿಕ್ಷೆ ಅನುಭವಿಸಿದ ಸ್ವಾತಂತ್ರ್ಯ ಯೋಧ ಆರ್.ಎಸ್. ನಾಯ್ಡು. ಬೆಂಗಳೂರಿನವರೇ ಆದ ಶ್ರೀ ಆರ್.ಎಸ್.ಎನ್. ಅವರು ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಪ್ರೊಫೆಸರ್ ಆರ್. ಜಗಪತಿ ನಾಯ್ಡು ಅವರ ತಮ್ಮ. ಇಂಗ್ಲೆಂಡಿನ ಮ್ಯಾಂಚೆಸ್ಟರ್ ಗಾರ್ಡಿಯನ್ ಪತ್ರಿಕೆಯ ಆಹ್ವಾನದ ಮೇಲೆ ಇಂಗ್ಲೆಂಡಿಗೆ ಹೋಗಿದ್ದು, ಹಿಂತಿರುಗುವಾಗ ಲಂಡನ್ನಿನ ಸ್ಕಾಟ್ಲೆಂಡ್ ಯಾರ್ಡ್ ಪೊಲೀಸರ ಕಣ್ಣಿಗೆ ಬಿದ್ದು, ಅವರಿಂದ ಶಿಕ್ಷೆ ಅನುಭವಿಸಿ ಬೆಂಗಳೂರು ತಲುಪಿದಾಗ ಅವರ ನೆಂಟ (ಮುಂದೆ ಮೈಸೂರು ಹೈಕೋರ್ಟ್‌ನ ನ್ಯಾಯಮೂರ್ತಿಯಾಗಲಿದ್ದ) ಶೇಷಾದ್ರಿಪುರಂ ಬಾಲಕೃಷ್ಣಯ್ಯನವರ ಮನಗೆ ಹೋದರು.

ಆರ್.ಎಸ್.ಎನ್. ಅವರು ಗಾಂಧೀಜಿಯವರೂಡನೆ ನಾಸಿಕ್ ಜೈಲಿನಲ್ಲಿದ್ದಾಗ ನಡೆದ ಒಂದು ಘಟನೆ ಸ್ವಾರಸ್ಯಕರ. ಆಗ ಜೈಲಿನ ಊಟ ವಿತರಣೆ ವಿಚಾರದಲ್ಲಿ ಪ್ರಥಮ ದರ್ಜೆ ಖೈದಿಗಳಿಗೊಂದು, ಉಳಿದವರಿಗೊಂದು ರೀತಿ ಇತ್ತು. ಇದನ್ನು ವಿರೋಧಿಸಿ ಜೈಲಿನ ಅಧಿಕಾರಿಗಳ ವಿರುದ್ಧ ಶ್ರೀ ನಾಯ್ಡು ಅವರು ಸಿಡಿದೆದ್ದು ಹರತಾಳ ಪ್ರದರ್ಶನದ ಮೂಲಕ ಉಗ್ರಪ್ರತಿಭಟನೆಯನ್ನು ವ್ಯವಸ್ಥೆಗೊಳಿಸಿದರು. ಆಗ

ಜೈಲಿನ ಅಧಿಕಾರಿಗಳಾಗಿದ್ದ ಲೆಫ್ಟಿನೆಂಟ್ ಕರ್ನಲ್ ಭಂಡಾರಿ ಮತ್ತು ನಾಯ್ಡು ಅವರ ಅಭಿಮಾನಿ ಜೈಲಿನ ಸೂಪರಿಂಟೆಂಡೆಂಟ್ ಶ್ರೀಕಟೇಲ ತಮ್ಮ ನಿಸ್ಸಹಾಯಕತೆಯನ್ನು ವ್ಯಕ್ತಪಡಿಸಿ ಹರತಾಳ ನಿಲ್ಲಿಸುವಂತೆ ನಾಯ್ಡು ಅವರಿಗೆ ಸಲಹೆ ನೀಡಬೇಕೆಂದು ಗಾಂಧೀಜಿಯವರ ಮೊರೆಹೊಕ್ಕರು. ತತ್ಪರಿಣಾಮವಾಗಿ ಮಹಾತ್ಮ ಗಾಂಧೀಜಿಯವರು, ಮಹದೇವ ದೇಸಾಯಿಯವರನ್ನು ಬರಮಾಡಿಕೊಂಡು ತಮ್ಮ ಕೊಠಡಿಯಲ್ಲಿ ಎರಡು ಕುರ್ಚಿಗಳನ್ನು ಇಡುವಂತೆ ಸೂಚಿಸಿದರು. ಒಂದು ಕುರ್ಚಿಯಲ್ಲಿ ಗಾಂಧೀಜಿಯವರು ಕುಳಿತಿದ್ದರು. ಅಲ್ಲಿಗೆ ಹೋದ ನಾಯ್ಡುರವರು ಭಕ್ತಿಪರವಶರಾಗಿ ಗಾಂಧೀಜಿಯವರ ಪಾದದೆಡೆಯಲ್ಲಿ ಕುಳಿತು ತಮ್ಮ ನಮ್ರತೆಯನ್ನು ಪ್ರಕಟಿಸಿದ್ದರು. ಆಗ ಗಾಂಧೀಜಿಯವರು ಒಮ್ಮೆಲೇ ದಿಗ್ಗನೆದ್ದು ಆರ್.ಎಸ್.ಎನ್. ಅವರ ಭುಜವನ್ನು ಹಿಡಿದೆತ್ತಿ "ನೀನು ಕುರ್ಚಿಯ ಮೇಲೆ ಕೂಡದಿದ್ದರೆ ನಾನೂ ನಿನ್ನಂತೆ ನೆಲದ ಮೇಲೆ ಕೂಡಬೇಕಾಗುತ್ತದೆ" ಎಂದು ಹೇಳುತ್ತಾ ಆರ್.ಎಸ್.ಎನ್. ಅವರ ಎದೆ ಮತ್ತು ಭುಜಗಳ ಮೇಲೆ ಕೈಯಾಡಿಸಿ ಸವರುತ್ತಾ ಇರುವಾಗ ಅವರ ಕಣ್ಣಂಚಿನಲ್ಲಿ ಅಶ್ರುಧಾರೆ ಹರಿಯಿತು. ಅದೇ ಸಂದರ್ಭದಲ್ಲಿ ಗಾಂಧೀಜಿಯವರು ಆರ್.ಎಸ್.ಎನ್. ಅವರನ್ನು ಕುರಿತು ಈ ರೀತಿ ಹೇಳಿದರು: "ಯುವಕನೆ, ನಿನ್ನ ಯುವಶಕ್ತಿ ನಿರರ್ಥಕ ಗೊಳಿಸಬೇಡ. ಬಲವನ್ನು ವೃದ್ಧಿಸಿಕೊ. ಮುಂದೆ ನಮಗೆ ಹಲವಾರು ಹೋರಾಟಗಳಿವೆ" ಎಂದರು.

*('ಲಂಕೇಶ್' ಪತ್ರಿಕೆ, ೨೦-೧೨-೧೯೯೨)*





# R.S.N. : The Brilliant Caricaturist

■ ***K. Ravindra Nath***

Sri R. Seethapathi Naidu, familiar to art lovers by the short name RSN, was the son of Smt. Ranganayaki and brother of eminent Geologist Sri Jagapathi Naidu. RSN stormed into Kannada Art and Journalist world like a meteor in 1950 and disappeared in 60's. This decade can be verily termed as RSN's decade by Caricaturist.

Undoubtedly RSN was a genius. He had all the qualities and eccentricities of a genius; which we find in Kailasam, daVinci. He was a versatile genius. Primarily he was a black and white artist. Be it cartooning or caricature. But with his command on the basis of drawing, and fine art, like proportion, perspective, foreshortening, balance, he would deal with any medium like water colour, oil painting, sculpture etc., with ease. His lightning speed of thinking, grasping was phenomenal. His command on English could blush an English. What RSN has left behind is few pieces of sculpture, few cartoons and a host of admirers carrying indelible impression.

RSN walked into our house in early 1950 and was introduced to me by my father (Anakri). He was short statured with a goaty beard, turned half gray, thin lips, sharp eyes with a bagful of drawing paper, brushes and hung across his breast on the shoulder. He sat in father's room. They talked incesscently. He fell in love with fathers profound knowledge on every subject, particularly fine arts. He scribbled a number of sketches of my father then and there. He was spontaneous and an inspired artist every inch. First day he took me with him to Madiwala where he and sculptor Vadiraj had hired a small house. He went on talking about different mediums. He was then sculpting Buddha in Gandhara style. He would work feverishly with monstrous speed. Suddenly he would say I am ill-keep mumbling as if he is cursing a ghost torturing him within. He confessed to me he was poisoned by somebody during Bombay days. He was out and out a communist in 1930's and 40's. He knew intimately Mulkraj Anand, K.A. Abbas and many others. My father wrote a novel "Sangrama" based on RSN's life.

The style, thinking speed of RSN and Vadiraj were diagonally opposite. RSN

moved into a small house in Cunningham road in a vast compound, by the courtesy of Justice Balakrishna Iyer. All his friends would visit them. I was a regular visitor, at early hours, (4.30 AM). He would prepare tea, toast and some biscuits to both of us – bring it in a tray. We would talk for hours over the pot of tea. He would tell me the intricacies of the black and white art.

"Mr. Nath, Black and white art is more different than water colour and oil painting. In black you have to bring the colour, texture and everthing of the physical objects. In caricature a dot extra on the face will add years of age. In sculpture we have to think in mass, rise and depth, voids & bulges" His masterpieces in sculpture, Bendre, Budha, Kailasam, Bernard Shaw (In cubist style), Jesus, man of sorrows all came out one by one. The chief of porcelain factory Sri Hariharan, (now taken over by BHEL) encouraged and helped RSN in converting his original to plaster copies, for marketing.

One morning RSN told me "Look Nath, Shivaswamy (of AIR) wants me to talk on Bengal art. I know nothing. Can you help me?". I said "yes" and took a dozen books on D.P. Roy Chowdry, Nandlal Bose, Manishi Dey, Abanindranath Tagor, Jamini Roy etc. and gave him. He devoured the whole lot in just 2 days and returned my books. Called AIR and reeled off his talk to tape record which was broadcast.

He asked me "I say, my sister in Andaman wants me to make a Beethoven – can you help". We had a beautiful photo of Beethoven. I gave it to him. He made a masterpiece and sent it away to Andamans.

His illustrations to DVG's book on Election Lavani, poems, cover design for my father's novels, illustrations in Prajavani, Janapragathi and the journal "Lekhaka" published by Sha. BalooRao are some memorables He narrated to me his meeting with David Low, world's greatest cartoonist. He was in Low's room, filled with master pieces of Low's works, models of Tanks, Jet fighter Bombers, etc. like a personal museum. After seeing all that he was so thrilled – he felt so small – "I came away without meeting Low".

RSN is unsurpassed and unsurpassable.

The art of cartooning has two basic requirements, clear and powerful thinking , secondly draughtsmanship. He was master of both.





# Between You and me

■ *C.H. Prahlada Rao*

Thanks to Mr. K.R. Krishaswamy, whose 60-odd years have been dedicated to the conservation and dissemination of folklore, folk music, folk-art. I have with me a sheet of RSN papers. That is R.S. Naidu, who sketched in margins of postcards, added value to his letters with sketches, illustrated books, created busts of Kailasam, Shaw, Gorki in plaster of Paris.

Among the papers one caught my attention. It is captioned, "A short, short story: Long, long ago." It recalls his days in Yerawada prison, his rebellion, confinement in a dark cell. The hunger strike was organised in the prison, leading to visits by Jamnalal Bajaj, Mahadev Desai and Gandhiji, in 1933.

He recounts a moving story. There were just two chairs, and gandhiji occupied one. Naidu squatted at his feet. The Mahatma was quickly on his feet, lifted Naidu by the shoulder, told him. "If you don't sit on the other chair. I too will squat."

In the August number of "March of Karnataka" you will find Naidu's story. It saddens you that though the journal has a strong Editorial presence (Chief Editor, Editor, Sub-Editor and Editorial Assistant) it has been grossly misprinted. If they used Naidu's manuscript, they have not been able to read it, or edit where there is an obvious slip of the pen. Ofcourse, they do not consider it necessary to tell readers a word or two about Naidu, who received State awards and a political pension, or indicate the date of composition. Naidu died in 1985, a bachelor. He was then nearly 80.

There is a sub-story. Among the papers there is in Naidu's flowing, artistic hand a true copy of a letter from Nasik Road central prison. Dated July 31, 1968 in response to Naidu's postcard dated july 23, 1968 it tells a moving story. Notice the prompt reply, and a jailer's concern for a former prisoner. It says, "the records of detenus prior to 1942 not being available, the certificate Naidu calls for cannot be issued". It goes on to suggest that Naidu's affidavit sworn before a Magistrate would serve the purpose.

Naidu's use of margins is interesting; either he sheds light on the text or makes a light- hearted comment, often with a sketch or two. Here on one side he says, "Long term detenus were transferred from Yerawada to Nasik and Yerawada Prison office.Want details which I do not remember: I was tortured no end". On The other side, he sketches Basavanna, who Attests his affidavit, saying Naidu's statements in his application for pension are true, wholly true.

*(Hindu 1-12-1997)*





# ಸೆರೆಮನೆಯ ನೆನಪು

■ *ಮೂಲ ಇಂಗ್ಲಿಷ್: **ಆರ್. ಎಸ್. ನಾಯ್ಡು***

■ *ಅನುವಾದ: **ಶ್ರೀಮತಿ ಜ್ಯೋತಿ ಶಶಿಕುಮಾರ್***

**ಅ**ದು ನಡೆದದ್ದು ೧೯೩೩ನೇ ಇಸವಿಯಲ್ಲಿ ಯರವಾಡ ಸೆರೆಮನೆಯಲ್ಲಿ. ಒಬ್ಬ ಕಾಂಗ್ರೆಸ್ ಕಾರ್ಯಕರ್ತ ಎಂದರೆ ಸತ್ಯಾಗ್ರಹಿಯ ತಲೆ ಸೀಳಿ ಹೋಳಾಗಿತ್ತು. ಅದಕ್ಕೆ ಹೊಣೆಗಾರನಾದ ಜೈಲರ್ ಸ್ವತಃ ತಾನೆ ನಮ್ಮ ಸಹ ಖೈದಿಯಾಗಬೇಕಾಗಿ ಬಂತು. ಜೈಲರ್ ನಿಜವಾಗಿಯೂ ಅದೃಷ್ಟವಂತ. ಗಲ್ಲು ಶಿಕ್ಷೆಗೆ ಒಳಗಾಗಬೇಕಿದ್ದವ ಬದುಕಿಕೊಂಡ.

"ಅರಣ್ಯ" ಸತ್ಯಾಗ್ರಹಿಗಳೆಂಬ ದೊಡ್ಡ ಹೆಸರಿನ ಸಣ್ಣ ತಂಡವೊಂದನ್ನು ಹುಬ್ಬಳ್ಳಿ, ಧಾರವಾಡ, ಬೆಳಗಾಂಗಳಿಂದ ಕಳುಹಿಸಲಾಗಿತ್ತು. ಅವರಲ್ಲೊಬ್ಬರಾದ ಧಾರವಾಡದ ಬಿಂದು ಮಾಧವ ಬುರ್ಲಿಯವರು ಬಹುಶಃ ತಂಡದ ನಾಯಕರಾಗಿದ್ದರು. ನಿಜಲಿಂಗಪ್ಪನವರೂ ಸೇರಿ ಕಟ್ಟಾ ಸ್ವದೇಶಪ್ರೇಮಿಗಳಾದ ಸುಮಾರು ಸಾವಿರದ ಐದುನೂರು ಮಂದಿ ಇದ್ದರು*. ಇವರಿಗೆ ಬೀಸುವುದು, ರಸ್ತೆ ರಿಪೇರಿ ಮಾಡುವುದೇ ಮುಂತಾದ ಅತಿ ಕಠಿಣ ಕೆಲಸಗಳನ್ನು ಕೊಡಲಾಗಿತ್ತು. ಅವರೆಲ್ಲರೂ ಮೌನವಾಗಿ ಕೆಲಸ ಮಾಡುತ್ತಿದ್ದರು. ಅವರಿಗೆ ಕನ್ನಡ ಬಿಟ್ಟು ಬೇರೆ ಭಾಷೆಯ ಗಂಧವೂ ಇರಲಿಲ್ಲ. ಶೀಘ್ರವಾಗಿ ಅವರಲ್ಲಿ ಕೆಲವರು ಮುವತ್ತರಿಂದ ಎಪ್ಪತ್ತು ಪೌಂಡುಗಳಷ್ಟು ತೂಕ ಕಳೆದುಕೊಂಡರು. ಮತ್ತೆ ಕೆಲವರು ಕೆಮ್ಮಿದಾಗ ಕಫದ ಜೊತೆ ರಕ್ತವನ್ನು ಉಗುಳುತ್ತಿದ್ದರು. ಕಿರುದಾರಿಯಲ್ಲಿ ಒಂದು ರಾತ್ರಿ ನಾನು ವ್ಯಗ್ರನಾಗಿ ಶತಪಥ ಹಾಕುತ್ತಿದ್ದೆ. ಸುಮಾರು ಒಂದು ಗಂಟೆಯ ಹೊತ್ತಿನಲ್ಲಿ ನಿಜಲಿಂಗಪ್ಪನಂಥವರು ತಮ್ಮ ತಮ್ಮ ಕಂಬಳಿಗಳ ಒಳಗಿಂದ (ಸೆರೆಮನೆಯಲ್ಲಿ ಒದಗಿಸಲಾಗುತ್ತಿದ್ದ ಅಡ್ಡಾದಿಡ್ಡಾದ ಚಾಪೆಯ ಜೊತೆ ಅತಿ ಒರಟಾದ, ಉಪಯೋಗಿಸಲು ಅಸಾಧ್ಯವಾದ ಬಟ್ಟೆ) ನರಳುತ್ತಿರುವುದು ಕೇಳಿಸಿತು. ಕಂಬಳಿಯನ್ನು ಸರಿಸಿ ಮುಖಗಳನ್ನು ಕಂಡಾಗ ಅವರಲ್ಲನೇಕರು ಯಾತನೆಯಿಂದ ಮೂಕವಾಗಿ ಕಣ್ಣೀರು ಸುರಿಸುತ್ತಿರುವುದು ಕಂಡಿತು. ಅವರ ಅಂಗಾಂಗಗಳು, ಮೂಳೆಗಳು, ಅತ್ಯಂತ ಕಠಿಣ ಕೆಲಸದಿಂದಾಗಿ ಸಹಿಸಲಸಾಧ್ಯವಾಗಿ ನೋಯುತ್ತಿದ್ದವು. ಅದು ನನಗೂ ತಿಳಿದದ್ದೇ. ಏಕೆಂದರೆ ಸ್ವತಃ ನಾನೂ ಕೂಡ ದಿನಕ್ಕೆ ೯೦ ಪೌಂಡ್‌ಗಳಷ್ಟು ಹಿಟ್ಟು ಬೀಸುತ್ತಿದ್ದೆ. ಅದನ್ನು ಕಂಡು (ನನಗಾಗಿ) ಮರುಗಿದ ಶ್ರೀ ಅಚ್ಯುತ ಪಟವರ್ಧನ್ ನನ್ನನ್ನು ಪಾರುಮಾಡಲು ತಮ್ಮಿಂದಾದ ಸರ್ವ

---

* ಬಾಂಬೆವಾಲಾಗಳಾದ ಚೌವಿಂಶಿ ಚೌವಾಣರುಗಳಿಗಿಂತ ಇವರು ಬೇರೆ – ಎಂದು ಪತ್ರದಲ್ಲಿದೆ. ಕರ್ನಾಟಕದವರನ್ನು ನಿಜಲಿಂಗಪ್ಪನವರ ಕಡೆಯವರೆಂದು ಗುರುತಿಸಿದೆ. ಸ್ಪಷ್ಟವಾಗಿ ನಿಜಲಿಂಗಪ್ಪನವರು ಇದ್ದರೋ ಇಲ್ಲವೊ ತಿಳಿಯುವುದಿಲ್ಲ– ಪತ್ರದ ಆ ಭಾಗ ಅಳಿಸಿಹೋಗಿದೆ. ಈ ಪತ್ರ ಕೆ.ಸಿ. ಚೌಡಪ್ಪರೆಡ್ಡಿಯವರಿಗೆ ಆರ್.ಎಸ್.ಎನ್. ೨೬–೩–೧೯೬೭ರಲ್ಲಿ ಬರೆದದ್ದು – ಪ್ರಾರಂಭ : A short short story, Long Long ago ಎಂದು. ಆ ಪತ್ರವನ್ನು ಲೇಖನರೂಪದಲ್ಲಿ 'ಜನಪದ'ದಲ್ಲಿ ಪ್ರಕಟಿಸಿದೆ.

ಪ್ರಯತ್ನವನ್ನೂ ಮಾಡಿದ್ದರು. ಆದರೆ ವಾರ್ಡನ್ನರ ಕಣ್ಣಿಗೆ ನಾನು ಅತ್ಯಂತ ಗಟ್ಟಿ ಮುಟ್ಟಾಗಿ (ಬುದ್ಧಿಜೀವಿಯಂತೆ) ಕಾಣಿಸುತ್ತಿದ್ದುದರಿಂದಲೇನೋ ಪಟವರ್ಧನರು ಜಯಶಾಲಿಗಳಾಗಲಿಲ್ಲ. ನನ್ನನ್ನು ಅಪ್ಪಚ್ಚಿ ಮಾಡಬೇಕೆಂಬ ವಾರ್ಡನ್ನರ ಚಾಪಲ್ಯವನ್ನು ಹತ್ತಿಕ್ಕಲು ನಾನು ನಮ್ಮವರನ್ನೆಲ್ಲಾ ಒಟ್ಟಾಗಿ ಕರೆದು ನೇರವಾಗಿ ಕೇಳಿದೆ. "ನೋಡಿ, ಏನೇ ಆಗಲಿ, ಈ ಮಟ್ಟದಲ್ಲಿ ದುಡಿದರೆ ನೀವು ಖಂಡಿತ ಬದುಕುಳಿಯಲಾರಿರಿ. ನಾವು ಹೋರಾಡುತ್ತಲೇ ಏಕೆ ಸಾಯಬಾರದು?" "ಹೇಳಿ, ನಾವೇನು ಮಾಡಬೇಕು?" ಕೇಳಿದರು ಅವರು.

"ನಡುಮಧ್ಯೆ ಅಸಹಾಯಕತೆಯಿಂದ ಉಳಿದ ಹೋರಾಟವನ್ನು ಬಿಟ್ಟುಬಿಡುವುದಿಲ್ಲವೆಂಬುದು ನಿಮಗೆ ಬಾಂಬೆವಾಲಗಳಾದ ಚೌವಿಂಗ್ ಚೌವಾಣ ಶಿಲ್ಪಿಗಳಿಗಿಂತ ಇವರು ಬೇರೆ ಕರ್ನಾಟಕದವರನ್ನು ನಿಜಲಿಂಗಪ್ಪನವರ ಕಡೆಯವರೆದು ಗುರುತಿಸಿದೆ. ಸ್ಪಷ್ಟವಾಗಿ ನಿಜಲಿಂಗಪ್ಪನವರು ಇದ್ದರೋ ಇಲ್ಲವೊ ತಿಳಿಯುವುದಿಲ್ಲ- ಪತ್ರದ ಆ ಭಾಗ ಅಳಿಸಿಹೋಗಿದೆ. ಈ ಪತ್ರ ಕೆ.ಸಿ. ಚೌಡಪ್ಪರೆಡ್ಡಿಯವರಿಗೆ ಆರ್.ಎಸ್.ಎನ್. ೨೬-೦೩-೧೯೬೭ರಲ್ಲಿ ಬರೆದದ್ದು-ಪ್ರಾರಂಭ: 4 short short story, Long Long ago ಎಂದು ಆ ಪತ್ರವನ್ನು ಲೇಖನರೂಪದಲ್ಲಿ 'ಜನಪದ'ದಲ್ಲಿ ಪ್ರಕಟಿಸಿದೆ. ಖಚಿತವಾಗಿದೆಯೇ?" "ಇಲ್ಲ, ಇಲ್ಲಾ, ನಾಯ್ಡು ನಾವು ಜಾಗರೂಕರಾಗಿದ್ದೇವೆ" ಎಂಬುದು ಅವರೆಲ್ಲರ ಒಕ್ಕೊರಲಿನ ದೃಢನಿರ್ಧಾರದ ಉತ್ತರವಾಗಿತ್ತು.

ಕೆಲ ಸಮಯದ ನಂತರ ಒಬ್ಬ ಪೊಲೀಸು (ಪೊಲೀಸ್ ವಾರ್ಡನ್) ಕೈಯೊಳಗೆ ಸಿಕ್ಕಿಬಿದ್ದ. ಎಂದಿನಂತೆ ಒಂದು ದಿನ ರಾತ್ರಿಯ ಊಟದ ವೇಳೆಯಲ್ಲಿ ಪೊಲೀಸನ ಲಾಠಿಯು ಅಕಸ್ಮಾತ್ತಾಗಿ ಸತ್ಯಾಗ್ರಹಿಯೊಬ್ಬನ ಬಾಯಿಗೆ ತಗುಲಿತು. ಪೊಲೀಸು ಅನವಶ್ಯಕವಾಗಿ ಸತ್ಯಾಗ್ರಹಿಗೆ ಹೊಡೆಯಲಾರಂಭಿಸಿದ. ಅವನಿಗೆ ಗಾಯವಾಗಿ ರಕ್ತ ಸುರಿಯಲಾರಂಭಿಸಿತು. ನಾನು ಕೂಡಲೇ ಪೊಲೀಸನ ಮೇಲೇರಿ ಹೋದೆ. ಕೂಡಲೆ ಬ್ಯಾರಕ್ಕಿನಲ್ಲಿದ್ದ ಸುಮಾರು ನೂರೈವತ್ತು ಜನ ಖೈದಿಗಳೆಲ್ಲರೂ ನನ್ನ ನೆರವಿಗೆ ಬಂದು ಆ ಒಬ್ಬ ಮನುಷ್ಯನಿಗೆ ಮುಗಿಬಿದ್ದರು. ಪೊಲೀಸನ ಪಾಡು ಹಣ್ಣುಗಾಯಿ-ನೀರುಗಾಯಿ ಆಯಿತು. ಅಂದಿನಿಂದ ದಿನಕ್ಕೆ ಇಪ್ಪತ್ತು ಜನ ಹಾಗೂ ಮುವತ್ತು ಜನರ ತಂಡಗಳಂತೆ ಒಪ್ಪಿಕೊಂಡು ಉಪವಾಸ ಸತ್ಯಾಗ್ರಹವನ್ನು ಪ್ರಾರಂಭಿಸಲಾಯಿತು. ನಾನು ಮುಖ್ಯ 'ತಂಟೆಕೋರ' (ತೊಂದರೆ ಮಾಡುವವನಾಗಿ) ಸೆರೆಮನೆಯ ನ್ಯಾಯಾಲಯದಲ್ಲಿ ವಿಚಾರಣೆಯನ್ನು ಎದುರಿಸುತ್ತಿರುವಾಗಲೇ ಬಾಪೂಜಿ ಮುಂತಾದವರ ಗಮನ ನನ್ನ ಕಡೆಗೆ ಹರಿಯಿತು. ಅವರಿದ್ದ ಆ ಸುಪ್ರಸಿದ್ಧ ಬ್ಯಾರಕ್ಕು (ಸೆರೆಮನೆಯ ಕೊಠಡಿಯೊಳಗೆ) ರಸ್ತೆಯ ಪಕ್ಕದಲ್ಲೇ ಸುಮಾರು ಮುವತ್ತು ಅಡಿಗಳಷ್ಟು ದೂರದಲ್ಲಿತ್ತು. ದೊಡ್ಡ ದೊಡ್ಡ ಸಲಾಕಿಗಳಿದ್ದ ಬಾಗಿಲು ಸ್ವಲ್ಪವೇ ತೆರೆದುಕೊಂಡು ಅಲ್ಲಿಂದಲೇ ಒಂದು ಜೊತೆ ಕಣ್ಣುಗಳು ಇಲ್ಲಿ ನಡೆಯುತ್ತಿದ್ದ ವ್ಯವಹಾರವನ್ನು ವೀಕ್ಷಿಸುತ್ತಿದ್ದುದು ನನ್ನ ಅರಿವಿಗೆ ಬಂತು.

ಅಲ್ಲಿಂದ ಮುಂದೆ ನನ್ನನ್ನು ಸುತ್ತಲೂ ಸುಮಾರು ನೂರು ಅಡಿಗಳ ವರೆಗೆ ಮನುಷ್ಯರಾರೂ ಸುಳಿದಾಡದಂತಹ ಪ್ರತ್ಯೇಕ ಸೆಲ್‌ನಲ್ಲಿ (ಅಂಧೇರಿ-ಬೆಳಕು ಬೀಳದ ಸ್ಥಳ) ಇರಿಸಲಾಯಿತು. ಆ ರಾತ್ರಿ ಅಧಿಕಾರಿಗಳಿಗೆ ಸೂಕ್ತ ಗೌರವ ನೀಡುವ ಬಗ್ಗೆ ನನಗೆ ಯುಕ್ತ ಶಿಕ್ಷಣ ನೀಡಲು (ಅತ್ಯಂತ ಹೇಸಿಕೆ ತರಿಸುವ ಕಾರ್ಯ) ನನ್ನನ್ನು ಕರೆದುಕೊಂಡು ಹೋಗುವವರಿದ್ದರು. ರಾತ್ರಿ ಎಚ್ಚರಾಗುತ್ತಿದ್ದಂತೆ, ನಾನೂ ಪ್ರಸ್ತುತ ಪರಿಸ್ಥಿತಿಗಳ ವಿಚಿತ್ರ ಸರಮಾಲೆಗಳ ಬಗ್ಗೆ ದೀರ್ಘಾಲೋಚನಾಮಗ್ನನಾಗಿ ಕುಳಿತಿದ್ದಾಗ ನನ್ನ ಸೆಲ್ಲಿನ ಬಾಗಿಲ ಬಳಿ ಇದ್ದಕ್ಕಿದ್ದಂತೆ ನೆರಳು ಮೂಡಿದಂತಾಗಿ ಕೂಡಲೇ ಒಂದು ಮುಖವೂ ಕಾಣಿಸಿಕೊಂಡಿತು. ನನ್ನ ಆಲ್ ಮಿನಾಹ್ ಫರ್ಗ್ಯುಸನ್ ಕಾಲೇಜಿನ ಪುಸ್ತಕ ಭಂಡಾರದಲ್ಲಿ ಬೊಂಬಾಯಿ ರಾಜ್ಯಪಾಲರಿಗೆ ಗುಂಡಿಕ್ಕಿದ ಗಾಗ್ಟೆಯನ್ನು ನಾನು ತಕ್ಷಣವೇ ಗುರುತಿಸಿದೆ. ಅವರು ಪಿಸುದನಿಯಲ್ಲಿ, "ರಾತ್ರಿಯ ಹೊತ್ತಿನಲ್ಲಿ, ಕೇವಲ ಗೆಜೆಟೆಡ್ ಅಧಿಕಾರಿಗೆ ಮಾತ್ರವೇ ಸೆಲ್ಲನ್ನು ತೆರೆಯುವ ಹಕ್ಕು ಇದೆ. ಈ ರಾತ್ರಿ ಯಾವನೇ ಆಗಲಿ, ನಿನ್ನ ಸೆಲ್ ಅನ್ನು ತೆರೆಯಲು ಯತ್ನಿಸಿದರೆ, ಜೋರಾಗಿ ಬೊಬ್ಬೆ ಹಾಕು. ನಾನು ಈಗಾಗಲೇ ಗೋಡೆಯಾಚೆ (೩೦ ಅಡಿ ಎತ್ತರ) ಇತರ ಖೈದಿಗಳಿಗೆ ಸೂಚನೆ ನೀಡಿದ್ದೇನೆ. ಒಂದು ಬೆರ್ಚಪ್ಪನನ್ನು ನಿಲ್ಲಿಸಿದ್ದೇವೆ*. ನಾವು ಈ ಸುಂದರ(!) ಸ್ಥಳಕ್ಕೆ ಬೆಂಕಿ ಹಚ್ಚಿಬಿಡೋಣ!"

ಆಟಗಾರನಾದ ಗಾಗ್ಟೆಯು ಅತ್ಯಂತ ಭಾರವಾದ ಒಂದು ಬೀಸುವ ಕಲ್ಲನ್ನೇ ಮೇಲೆತ್ತಿ ಹಿಡಿದು ಪೊಲೀಸನೊಬ್ಬನ ತಲೆಯನ್ನೇ ಜಜ್ಜಿ ಹಾಕುವುದಾಗಿ ತುಂಬು ಆಶ್ವಾಸನೆ-ನೀಡಿದ್ದರಿಂದ ವಾರ್ಡನ್ನನಿಗೆ (ವಾಸ್ತವವಾಗಿ, ಅವನೊಬ್ಬ ರಾಕ್ಷಸನೇ ಸರಿ) ಗಾಗ್ಟೆ ಬಗ್ಗೆ ಒಂದು ರೀತಿಯ ಭಯಮಿಶ್ರಿತ ಗೌರವವಿತ್ತು.

---

* by golly ಎಂದಿದೆ, ದೇವರಾಣೆ ಎಂದರ್ಥ. ಕೈಬರೆಹ ಓದುವ ತೊಡಕು. ಆದ್ದರಿಂದ ಅಲ್ಲಲ್ಲಿ ತಪ್ಪುಗಳಿವೆ.

ಪ್ರಾಯಶಃ ಬಾಪೂಜಿ ಮತ್ತಿತರರಿಗೆ ಅದಾಗಲೇ ವಿಷಯವು ತಿಳಿದಿದ್ದರಿಂದ ಇರಬೇಕು. ಅದೃಷ್ಟವಶಾತ್ ಆ ರಾತ್ರಿಯಾಗಲೀ, ಮರುದಿನದ ರಾತ್ರಿಯಾಗಲೀ ಏನೂ ಸಂಭವಿಸಲಿಲ್ಲ. ಸುಮಾರು ಐದು ನೂರು ಜನ ಖೈದಿಗಳು ಮಾತ್ರ, ಅತ್ಯಂತ ಶ್ರದ್ಧಾಪೂರ್ವಕವಾಗಿ ನಡೆಸುತ್ತಿದ್ದ ಮುಷ್ಕರ ಮಾತ್ರ ನಿಲ್ಲದೆ ಮುಂದುವರೆಯಿತು.

ಇತರರಂತೆ 'ಸಿ' ವರ್ಗದ ಖೈದಿಯಾಗಿದ್ದ ಶ್ರೀ ಜಮಾನಾಲಾಲ್ ಬಜಾಜ್‌ರವರು ಹೆಣಗುತ್ತಿದ್ದ ನಿರಶನ ವ್ರತಧಾರಿಯ ಮನಪರಿವರ್ತಿಸಲು ಬಂದಿದ್ದರು. ಆದರೆ, ಈ ಅತ್ಯಂತ ಅವಿಧೇಯ ಮೂರ್ತಿ ಅವರನ್ನು ಕಣ್ಣೆತ್ತಿ ಕೂಡ ನೋಡಲಿಲ್ಲ. ಕೆಲ ದಿನಗಳ ತರುವಾಯ ಮಹದೇವಭಾಯಿ ದೇಸಾಯಿಯವರು ನೇರವಾಗಿ ನನ್ನ ಸೆಲ್‌ಗೆ ಬಂದು ಮಂಚ/ಚಾಪೆಯ ಮೇಲೆ ನನ್ನ ಪಕ್ಕದಲ್ಲೇ ಕುಳಿತುಬಿಟ್ಟರು. ಅಷ್ಟೊತ್ತಿಗಾಗಲೇ ನಾನು ನಿತ್ರಾಣನೂ, ನಿಸ್ತೇಜನೂ ಆಗಿದ್ದೆ. ಅವರು ನನಗೆ ಗಾಂಧೀತತ್ವ ಹಾಗೂ ಸತ್ಯಾಗ್ರಹದ ವಿಧಾನಗಳ ಬಗ್ಗೆ ಉಪನ್ಯಾಸ ನೀಡಿದರು. ಆನಂತರವೂ ಕೂಡ ಅವರು ಅನುಕ್ರಮವಾಗಿ ನಾಲ್ಕು ಅಥವಾ ಐದು ದಿನಗಳಿಗೊಮ್ಮೆ ಬಂದು ತತ್ವಬೋಧೆ ಮಾಡಿ ಹೋಗುತ್ತಿದ್ದರು. ಆದರೆ ಅದರಿಂದ ನನ್ನ ಮೇಲೆ ಏನೂ ಪರಿಣಾಮವಾಗಲಿಲ್ಲ.

ಮತ್ತೆ ಕೆಲವು ದಿನಗಳ ನಂತರ, ನಾನು ಬಾಪೂಜಿಯವರನ್ನೇ ಮುಖಾಮುಖಿಯಾಗಿ ಕಾಣುವ ಯೋಗ ಕೂಡಿಬಂತು. ಅವರ ಪತ್ರದಲ್ಲಿ ಕಂಡುಬರುವ ದೈನ್ಯತೆಯನ್ನು ನೀಗುವ ಹಾಗೂ ವ್ಯಕ್ತಿಯ ಬಗ್ಗೆ ಅತೀವ ಕಳಕಳಿ ತೋರುವಂಥ ವಿಷಯಗಳು ಇಂದಿಗೂ ನನ್ನ ಮನಸ್ಸಿನಲ್ಲಿ ಹಸಿರಾಗಿ ಉಳಿದಿವೆ.

ಅಧಿಕಾರಿಗಳು (ಲೆಫ್ಟಿನೆಂಟ್ ಕರ್ನಲ್ ಭಂಡಾರಿ ಮತ್ತು ಮೊದಲಿನಿಂದಲೂ ಸಹಾನುಭೂತಿಪರರಾಗಿದ್ದ ಹಾಗೂ ಮುಂದೆ ನಾಸಿಕದಲ್ಲಿ ಸೂಪರಿಂಟೆಂಡೆಂಟ್‌ರಾದ ಶ್ರೀ ಕಟೇಲಿ) ಎರಡೇ ಕುರ್ಚಿಗಳನ್ನು ಹಾಕಿದ್ದರಿಂದ ಎಲ್ಲರೂ ಸುತ್ತಲೂ ನಿಂತಿದ್ದರು. ಬಾಪೂಜಿ ಬಂದು ಒಂದು ಕುರ್ಚಿಯಲ್ಲಿ ಕುಳಿತರು. ತಕ್ಷಣ ನಾನು ಸರಕ್ಕನೆ ಅವರ ಪಾದಗಳ ಬಳಿ ಕುಸಿದೆ, ಮಿಂಚಿನಂತೆ ತಮ್ಮ ಖುರ್ಚಿಯಿಂದ ಎದ್ದುನಿಂತು ನನ್ನ ತೋಳುಗಳನ್ನು ಹಿಡಿದು ಎಬ್ಬಿಸುತ್ತಾ ಅವರೆಂದರು "ನೀವು ಆ ಕುರ್ಚಿಯಲ್ಲಿ ಕುಳಿತುಕೊಳ್ಳದಿದ್ದರೆ ನಾನೂ ಕೂಡ ನೆಲದ ಮೇಲೆ ಕುಳಿತುಕೊಳ್ಳುತ್ತೇನೆ ಅಷ್ಟೆ." ನನಗೆ ಉದ್ವೇಗವನ್ನು ಹತ್ತಿಕ್ಕಲಾಗಲಿಲ್ಲ.

ಅವರು ತಮ್ಮ ಕೈಗಳಿಂದ ನನ್ನ ಭುಜವನ್ನು, ಎದೆಯನ್ನೂ ತಡವುತ್ತಿದ್ದಾಗ ನಿಶ್ಚಯವಾಗಿಯೂ, ಅವರ ಕಣ್ಣಾಲಿಗಳು ತುಂಬಿ ಬಂದಿದ್ದವು. ಅವರು ನುಡಿದರು "ನೀವು ನಿಮ್ಮ ಯುವಶಕ್ತಿಯನ್ನು ವ್ಯರ್ಥಗೊಳಿಸಬಾರದು. ನೀವು ಯಾವಾಗಲೂ ಶಕ್ತಿಶಾಲಿಯಾಗಿರಬೇಕು, ಇನ್ನು ಮುಂದೆ ನಾವು ಇನ್ನೂ ದೊಡ್ಡ ದೊಡ್ಡ ಹೋರಾಟಗಳಲ್ಲಿ ತೊಡಗಬೇಕಿದೆ."

ಈ ಹೋರಾಟದಲ್ಲಿ (ಮುಷ್ಕರದಲ್ಲಿ) ನಾವು ಗೆದ್ದೆವು. ಪುಣೆಯ ಪತ್ರಿಕೆಗಳು ಆ ಬಗ್ಗೆ ಅಸಮಾಧಾನಕರ ವರದಿಗಳನ್ನು ಪ್ರಕಟಿಸಿದವು. ಅಷ್ಟೇಕೆ ಒಬ್ಬ ಸಿನಿಕನು ನಾಯ್ಡು ಪ್ರಸಿದ್ಧಿಗಾಗಿಯೇ ಈ ಬಗೆಯ ನಿರಶನವ್ರತವನ್ನು ಹಿಡಿದಿದ್ದರೆಂದು ಟೀಕಿಸಿಯೂಬಿಟ್ಟ. ಇದರಿಂದ ನನಗೆ ನೋವಿಗಿಂತ ಹೆಚ್ಚಾಗಿ ಆಶ್ಚರ್ಯವೇ ಆಯಿತು. ಇದು ನನ್ನ ರಾಜಕೀಯ ಸಂಪರ್ಕವು ತರಬಹುದಾದುದರ ಮೊದಲ ರುಚಿಯದಾಗಿತ್ತು.

ಮಹನೀಯರೇ, ಕೆಲದಿನಗಳವರೆಗೆ ನಾನು, "ವೀರ, ಧೀರ, ಶೂರ ಏನೆಲ್ಲವೂ ಆಗಿಹೋದೆ" ಬುರ್ಲಿ ಮತ್ತು ಅವರ ಕರ್ನಾಟಕದ ಸತ್ಯಾಗ್ರಹಿಗಳ ತಂಡದವರು (ಅವರಲ್ಲಿ ಕೆಲವರಿಗೆ ಅರಣ್ಯ ಸತ್ಯಾಗ್ರಹಕ್ಕಾಗಿ ಹತ್ತು ವರ್ಷ ಅವಧಿಯ ಸೆರೆವಾಸದ ಶಿಕ್ಷೆ ವಿಧಿಸಲಾಗಿತ್ತು.) ನನ್ನ ಮೇಲೆ ಕವನಗಳನ್ನು ಕಟ್ಟಿ ಹಾಡಿದರು. (ಅವರಲ್ಲಿ ಬಹುಮಂದಿ ಕವಿಗಳಿದ್ದರು.) ಅಲ್ಲದೆ, ನಂಬಿದರೆ ನಂಬಿ, ಬಿಟ್ಟರೆ ಬಿಡಿ, ಅವಧಿಗೆ ಮುಂಚೆಯೇ ನನ್ನ ಬಿಡುಗಡೆಯಾಗುವವರೆಗೂ ಚೋಟಾ ನಿಜಲಿಂಗಪ್ಪನಂಥವರಿಗೆ ಚಿಕ್ಕಪುಟ್ಟ ಅಥವಾ ಕಟ್ಟಾ ದೇಶಪ್ರೇಮಿಗಳ ಮಹೋತ್ಸಾಹಕ್ಕೆ ಬೊಂಬಾಯಿ ವಾಲಾಗಳಿಗೆ (ಕಾಕಾ ಸಾಹೇಬರ ಮಗನಾದ ಶಂಕರ ಕಾಲೇಲ್ಕರ್ ಆಗ ಅದೇ ಸೆರೆಮನೆಯಲ್ಲಿ ಬೇರೆ ಬ್ಯಾರಕ್ಕಿನಲ್ಲಿದ್ದರು. ಈ ಯುವಕ ಅಸಾಧಾರಣ ಸ್ಮರಣಶಕ್ತಿಯನ್ನು ಹೊಂದಿದ್ದುದಲ್ಲದೆ ನಾವು ಜೊತೆಯಲ್ಲಿದ್ದ ಪ್ರಾರಂಭದ ದಿನಗಳಲ್ಲಂತೂ ಅಪ್ಪಟ ಮಹಾರಾಷ್ಟ್ರೀಯ ಶೈಲಿಯಲ್ಲಿ ಲಾವಣಿಗಳನ್ನು ಅತ್ಯದ್ಭುತವಾಗಿ ಹಾಡುತ್ತಿದ್ದರು.) ನಾನೊಬ್ಬ ಸಾಕ್ಷಾತ್ ದೇವಮಾನವನಂತೆ ಕಾಣುತ್ತಿದ್ದೆ.

*('ಜನಪದ', ಅಕ್ಟೋಬರ್ ೧೯೯೭)*





# Pre-eminence of Form

■ *R.S. Naidu*

***(The following was dictated in answer to some doubts I raised regarding Form – H.S. Inamti)***

Life and all that it includes on our beauteous earth is inconceivable without form, so much so, to say that form is irrelevant is to say that life is irrelevant and as a direct consequence art is irrelevant. Obviously nothing could be more absurd.

Intellectual sophisticates quibble themselves out of form. I can see no sophistication in their quibbling. It is mostly a brazen – faced, incessantly repeated statement. Because matter, in the ultimate analysis, is in all energy, formless energy, so matter for the artist need have no form, say the learned sophisticates. The so called sophisticate would go further to say that in fact 'Form' restricts freedom of matter and therefore of the artist. Now beat that for logic. The point is that these busy bodies try to be clever, merely clever. I wish they were at least that.

Instead of indulging in thoughtless, loose, rambling tall-talk about 'Form', we go to nature, to Biology and Geology. We marvel at the way nature has provided for the efficient functioning of life. Man through successive generations has improved upon nature's form to suit his specific needs and created all those myriads of artifacts. Now and then we take off into the realm of pure aesthetics and there we have fused forms, abstractions, in a sense that in their totality, give us sensed, shared, aesthetic pleasure. Here again it is possible, I aver to analyse the various formal elements in the composite creation to find the source for what seems a vague and indefinable sense of pure aesthetic uplifting joy in all its spiritual purity.

Life is form and form life; and separated they are inconceivable. For the rest it is downright rank hypocracy on the part of frustrated aborted aesthetics (critics). The continuous verbose, - busy bodies, sick minds in fact, who will not let you be. A true artist is totally immersed in the spiritual joy of exercising his naturally endowed or if you please God-given talent.

*(ಬೆಂಗಳೂರಿನ 'ಆಲ್ ಕರ್ನಾಟಕ ಎಗ್ಸಿಬಿಷನ್ ಆಫ್ ಆರ್ಟ್ ಇನ್ ಪ್ರೆಸ್' ಸಂದರ್ಭದ ಸಂಚಿಕೆಯಲ್ಲಿ ಪ್ರಕಟವಾದುದ್ದು)*





# ಆರ್.ಎಸ್. ನಾಯ್ಡು

**ಕ್ರಾಂ**ತಿಯ ಕಾವಿನಿಂದ ಕೂಡಿದ ಕಲಾವಿದ, ಸ್ವಾತಂತ್ರ್ಯ ಯೋಧ, ಶಿಲ್ಪಿ, ವಿಚಾರವಾದಿ, ಜ್ಞಾನಿ, ಬುದ್ಧಿಜೀವಿ– ಇದು ಸೀತಾಪತಿ ನಾಯ್ಡು ಅವರ ಸ್ಥೂಲ ಪರಿಚಯ.

ರಂಗಸ್ವಾಮಿ ನಾಯ್ಡು ಸೀತಾಪತಿ ನಾಯ್ಡು ಹುಟ್ಟಿದುದು ಬೆಂಗಳೂರಿನಲ್ಲಿ ೬೯ ವರುಷಗಳ ಹಿಂದೆ. ವಿದ್ಯಾಭ್ಯಾಸವೆಲ್ಲಾ ತಿರುಚನಾಪಳ್ಳಿ, ಬೆಂಗಳೂರು, ಧಾರವಾಡದ ಕರ್ನಾಟಕ ಕಾಲೇಜು ಮತ್ತು ಪುಣೆಯ ಫರ್ಗ್ಯೂಸನ್ ಕಾಲೇಜುಗಳಲ್ಲಿ. ಆಗ ಉತ್ತಮ ವಾಗ್ಮಿ, ಕ್ರೀಡಾಪಟು ಮತ್ತು ಉತ್ಸಾಹಿ ವಿದ್ಯಾರ್ಥಿ ನಾಯಕ.

೧೯೩೧ರಲ್ಲಿ ಸ್ವಾತಂತ್ರ್ಯ ಸಮರಕ್ಕೆ ಯೋಧನಾಗಿ ಪ್ರವೇಶಿಸಿದ ಸೀತಾಪತಿಯವರಿಗೆ ೧೫ ತಿಂಗಳ ಜೈಲುವಾಸ. ಅಲ್ಲೆ ದೀನ ದಲಿತರ ಪರವಾಗಿ ದಂಗೆ, ಬಿಡುಗಡೆಯ ನಂತರ ವಾಮಪಂಥದ ಪತ್ರಿಕೆಗಳಲ್ಲಿ ಆರ್.ಎಸ್.ಎನ್. ರಚಿತವಾದ ವ್ಯಂಗ್ಯಚಿತ್ರಗಳ ಹೊಳೆ ಮತ್ತು ವಿದೇಶಗಳಲ್ಲಿ ಪ್ರಶಂಸೆ ಗಳಿಸಿದ 'ಚಿತ್ರಮಯ ಅರ್ಥಶಾಸ್ತ್ರ'ದ ಪ್ರಕಟಣೆ. ಪುನಃ ೬ ವರ್ಷಗಳ ಕಾಲ ಬಂಧನ. ಬಿಡುಗಡೆಯ ನಂತರ ಕಲಾವಿದನಿಗೆ ಸಹಜವಾದ ಏಕಾಂತ ಜೀವನ. ಏಕ ಪ್ರಕಾರ ಕೃತಿ ರಚನೆ–ಇವು ಸೀತಾಪತಿ ನಾಯ್ಡು ಅವರ ಜೀವನದ ಮೈಲಿಗಲ್ಲು.

ವಾಮ ಪಂಥದವರ ನಿಕಟ ಸಂಪರ್ಕ ಮತ್ತು ದೀನದಲಿತರ ಬಗೆಗೆ ಅನುಕಂಪ ಇವುಗಳಿಂದ ಹುಟ್ಟಿದ ಅನುಭೂತಿಯು ಶಿಲ್ಪ ಮತ್ತು ಚಿತ್ರಗಳ ಮೂಲಕ ಅರಳಲು ಆರಂಭವಾಯಿತು. ನಾಸಿಕದ ಬಂದಿಖಾನೆಯಲ್ಲಿ ಆರ್.ಎಸ್.ಎನ್. ರಚಿಸಿದ ಲೆನಿನ್ ಪ್ರತಿಮೆಯಿಂದ ಅಂಕುರಾರ್ಪಣವಾಗಿ ಅವರಲ್ಲಿ ಸುಪ್ತವಾಗಿದ್ದ ಕಲಾ ಪ್ರತಿಭೆಯ ನೂರಾರು ಶಿಲ್ಪ ಸಾವಿರಾರು ರೇಖಾಚಿತ್ರ ಹಾಗೂ ವರ್ಣಚಿತ್ರಗಳಲ್ಲಿ ಮೂರ್ತೀಭವಿಸಿವೆ. ನಾಯ್ಡು ಅವರ ಕೃತಿಗಳಲ್ಲಿ ತೀಕ್ಷ್ಣತೆಯಿದೆ. ಶೈಲಿಯಲ್ಲಿ ಬಾಹುಳ್ಯವಿದೆ. ಅವು ವೀರ್ಯವತ್ತಾಗಿವೆ. ಸತ್ಯದಿಂದ ಕೂಡಿವೆ. ಲಂಡನ್ನಿಗೆ ತೆರಳಿದ್ದ ನಾಯ್ಡು ರಷ್ಯಾ ದೇಶಕ್ಕೂ ಪ್ರಯಾಣ ಬೆಳೆಸಬೇಕೆಂಬ ಇವರ ಬಯಕೆ ಅಲ್ಲಿಯ ಗೂಢಾಚಾರ ಪೊಲೀಸರಿಂದ ಆಗಲಿಲ್ಲ.

ಆರ್.ಎಸ್.ಎನ್. ರಚಿಸಿದ ಕೃತಿಗಳು ಬಹುತೇಕ ಕವಿ ಕಲಾವಿದ ಸಾಹಿತಿ ಜನತೆಯ ಉದ್ಧಾರಕ್ಕಾಗಿ ಶ್ರಮಿಸಿದ ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ನಾಯಕರು. ಆ ಕೃತಿಗಳು ಆರ್.ಎಸ್. ನಾಯ್ಡು ಅವರ ದೃಢವಾದ ರಾಷ್ಟ್ರ ಪ್ರೇಮ ಸಂಸ್ಕೃತಿಯ ಅಭಿಮಾನ, ಪ್ರಗತಿಶೀಲ ದೃಷ್ಟಿ ಮಿಗಿಲಾಗಿ ಸಾಮಾನ್ಯ ಅದರಲ್ಲಿಯೂ ದಲಿತ ವರ್ಗದ ಬಗೆಗೆ ಅವರ ಅನುಕಂಪ ಮುಂತಾದವುಗಳ ಪ್ರತೀಕದಂತಿವೆ. ನಾಯ್ಡು ರಚಿಸಿರುವ ಒಂದೊಂದು ಪ್ಲಾಸ್ಟರ್ ಶಿಲ್ಪವಾಗಲೀ, ಮಿತ್ರರಿಗೆ ಬರೆದ ಕಾರ್ಡಿನ ಮೇಲಿನ ರೇಖಾಚಿತ್ರವಾಗಲಿ ಶ್ರೀಯುತರ ಬಹುಮುಖ ಕಲಾಸಿದ್ಧಿಯನ್ನು ಮೆರೆಯುತ್ತವೆ.

*(ಲಲಿತಕಲಾ ಅಕಾಡೆಮಿ ಆರ್.ಎಸ್.ಎನ್. ಅವರಿಗೆ ಗೌರವ ಪ್ರಶಸ್ತಿ ನೀಡಿದಾಗ ಪ್ರಕಟಿಸಿದ ಪ್ರಶಸ್ತಿ ವಾಚಿಕೆ)*





# ಕಲೆಗಾರ ಆರ್. ಸೀತಾಪತಿನಾಯ್ಡು

**ಕ**ನ್ನಡ ನಾಡಿನೊಡನೆ ಆತ್ಮೀಯ ಬಾಂಧವ್ಯವನ್ನು ಕಟ್ಟಿಕೊಂಡು ಆಂಧ್ರ ಚೈತನ್ಯವನ್ನು ಕನ್ನಡದ ನೆಲದಲ್ಲಿ ನೆಟ್ಟು ಬೆಳೆಸಿದ ಕಲೆಗಾರ ಶ್ರೀ ಆರ್. ಸೀತಾಪತಿ ನಾಯ್ಡು ಅವರು ಕನ್ನಡ ದೇಶದ ಬೇರೆ ಬೇರೆ ಭಾಗಗಳಲ್ಲಿ ಶಿಕ್ಷಣ ಪಡೆದ ಇವರು ರಾಷ್ಟ್ರದ ಆಂದೋಲನದ ಸಮಯದಲ್ಲಿ ಮಹಾ ನಾಯಕರ ಸಾನಿಧ್ಯದ ಪರಿಚಯವನ್ನು ಪಡೆದು ಭಾರತದಲ್ಲೆಲ್ಲಾ ಸುತ್ತಾಡಿದರು. ಎರಡನೆಯ ಮಹಾಯುದ್ಧಕ್ಕೆ ಮುಂಚೆ ಇಂಗ್ಲೆಂಡಿನ ಪ್ರವಾಸ ಮಾಡಿದರು. ಮಾರ್ಕ್ಸ್‌ವಾದವೇ ಜೀವನದ ನಂಬಿಕೆಯಾಗಿರುವ ಇವರು ಚಳವಳಿ, ಪತ್ರಿಕಾ ವ್ಯವಸಾಯ, ಸಂಘಟನೆಗಳಲ್ಲಿ ನಿರತರಾಗಿದ್ದಾರೆ.

ಕನ್ನಡದ ಮುದ್ರಣ ವಿನ್ಯಾಸದಲ್ಲಿ ಇವರ ಪ್ರಭಾವ ಹಿರಿದಾಗಿದೆ. ಬಹು ಗ್ರಂಥಗಳ ಮುಖಪುಟ ಇವರ ಹಸ್ತಕೌಶಲ್ಯದ ಪ್ರಯೋಜನ ಪಡೆದಿದೆ. ಪತ್ರಿಕೆಗಳಲ್ಲಿ ಸಮಯಾನುಸಾರ ವ್ಯಂಗ್ಯಚಿತ್ರಗಳನ್ನು ಪ್ರಕಟಿಸುತ್ತಿದ್ದರೆ, ಬುದ್ಧ, ಶಿವ, ಕ್ರಿಸ್ತ, ಗಾರ್ಕಿ, ಲೆನಿನ್, ಸ್ಟಾಲಿನ್, ಗಾಂಧೀಜಿ, ಕುವೆಂಪು, ಬೇಂದ್ರೆ ಮುಂತಾದ ಹಿರಿಯರ ವ್ಯಕ್ತಿತ್ವ–ವ್ಯಂಜಕ ರೇಖಾಚಿತ್ರಗಳು ಬಹು ಪ್ರಸಿದ್ಧವಾಗಿವೆ. ಗಾಂಧೀಜಿ, ಮೆಯ್‌ಕೊವ್‌ಸ್ಕಿ, ಬಿಎಂಶ್ರೀ, ಪ್ರೇಮಚಂದ್ ಮುಂತಾದವರ ಫಲಕಮುಖ ಶಿಲ್ಪಗಳು ಎಲ್ಲರ ಮೆಚ್ಚುಗೆ ಗಳಿಸಿವೆ. ಜನಪದ ಗೀತೆಗಳ ಭಾವಗಳಿಗೆ ಚಿತ್ರರೂಪಗಳನ್ನು ಒದಗಿಸುವುದರಲ್ಲಿ ಸಿದ್ಧಹಸ್ತರು ಇವರು. ಕಾವ್ಯ ಸಂಗೀತಾಸಕ್ತರು. ಸರಸಿಗಳು, ವಾಕ್ಪಟುಗಳು ಆದ ಕಲಾತಪಸ್ವಿ ಆರ್.ಎಸ್. ನಾಯ್ಡು.

*(ತಾ॥ ೨೫ ರಿಂದ ೨೮ರವರೆಗೆ ನಡೆದ ಸುವರ್ಣ ಮಹೋತ್ಸವ ಮತ್ತು ೪೭ನೆಯ ಕನ್ನಡ ಸಾಹಿತ್ಯ ಸಮ್ಮೇಳನ–೧೯೭೦–
'ಸನ್ಮಾನಿತರ ಪರಿಚಯ', ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು)*





# ಕ್ರಾಂತಿಕಾರಿಯ ಒಡಲಾಳ: ಆರ್.ಎಸ್. ನಾಯ್ಡು

■ *ಕೆ.ವಿ. ಸುಬ್ರಹ್ಮಣ್ಯಂ*

**ಕ್ರಾಂ**ತಿಕಾರಿ ಮನಸ್ಥಿತಿ ಕಲಾದೃಷ್ಟಿಗೂ ಕಾರಣವಾಗಬಲ್ಲದು ಎಂಬುದಕ್ಕೆ ಉತ್ತಮ ಉದಾಹರಣೆ ಆರ್.ಎಸ್. ನಾಯ್ಡು. ಅಸಾಧಾರಣ ಪ್ರತಿಭಾಶಾಲಿ, ಕಲಾಸಾಧಕ ಕ್ರಾಂತಿಯ ಕಾವಿನಿಂದ ಕೂಡಿದ ಕಲಾವಿದ. ಸ್ವಾತಂತ್ರ್ಯ ಯೋಧ, ಬುದ್ಧಿಜೀವಿ ಎಂಬ ಹಲವಾರು ವಿಶೇಷಣಗಳಿಗೆ ಸಾರ್ಥಕ ಉದಾಹರಣೆ ಆರ್.ಎಸ್. ನಾಯ್ಡು. ಅವರ ವಿಶಿಷ್ಟ ಶಿಲ್ಪಗಳು ಕಲೆಯ ಅಭಿಮಾನಿಗಳಿಗೆಲ್ಲಾ ಬಹು ಹತ್ತಿರವಾಗಿವೆ. ಚಿತ್ರ ಮತ್ತು ಶಿಲ್ಪಕಲೆಗಳ ಸಂಗಮ ನಾಯ್ಡು, ಅವರದೇ ಆದ ಐಡೆಂಟಿಟಿಯನ್ನು ತಮ್ಮ ರೇಖೆ-ಸಹಿಗಳ ಮೂಲಕ ಸಾಧಿಸಿದವರು. ಆರ್.ಎಸ್. ನಾಯ್ಡು ಎಂಬ ವಿಶಿಷ್ಟ ಇಂಗ್ಲಿಷ್, ಕೆಲವೊಮ್ಮೆ ಕನ್ನಡ ಸಹಿಯ ಮೂಲಕ ಖ್ಯಾತರಾಗಿರುವ ರಂಗಸ್ವಾಮಿ ಸೀತಾಪತಿ ನಾಯ್ಡು ೧೯೦೬ರಲ್ಲಿ ಬೆಂಗಳೂರಿನಲ್ಲಿ ಹುಟ್ಟಿದರು. ವೇಲೂರು, ತಿರುಚನಾಪಳ್ಳಿ, ಧಾರವಾಡ, ಪೂನಾ ನಗರಗಳ ಜೊತೆಜೊತೆಗೆ ಬೆಂಗಳೂರಿನಲ್ಲೂ ವಿದ್ಯಾಭ್ಯಾಸ ಮಾಡಿದರು. ಅಂತಿಮವಾಗಿ ಮೈಸೂರಿನಲ್ಲಿ ನೆಲೆಸಿದರು.

ವಿದ್ಯಾರ್ಥಿ ಜೀವನದಲ್ಲಿ ಉತ್ತಮವಾಗ್ಮಿ ಕ್ರೀಡಾಪಟು ಮತ್ತು ಉತ್ಸಾಹಿ ವಿದ್ಯಾರ್ಥಿ ನಾಯಕರೂ ಆಗಿದ್ದರು. ಪೂನಾ ಫರ್ಗ್ಯೂಸನ್ ಕಾಲೇಜಿನ ವ್ಯಾಸಂಗದ ಅವಧಿಯಲ್ಲಿ ಯುವ ಕಾಂಗ್ರೆಸ್ ಸಂಸ್ಥೆ ಕಟ್ಟಿದರಲ್ಲದೆ ೧೯೩೧ರಲ್ಲಿ ಸ್ವಾತಂತ್ರ್ಯ ಸಮರದಲ್ಲಿ ಯೋಧನಾಗಿ ಪ್ರವೇಶಿಸಿ ೧೫ ತಿಂಗಳ ಜೈಲುವಾಸ ಅನುಭವಿಸಿದರು. ಗಾಂಧಿಯವರೊಂದಿಗೆ ಮಹದೇವ ದೇಸಾಯಿ, ಜಮ್ನಾಲಾಲ್ ಬಜಾಜ್, ಅಚ್ಯುತ ಪಟವರ್ಧನ್‌ರವರುಗಳು ಅಲ್ಲಿದ್ದರು. ಮತ್ತೆರಡು ಬಾರಿ ಅದೇ ಶಿಕ್ಷೆ ಅನುಭವಿಸಬೇಕಾಯಿತು. ೧೯೩೪ರಲ್ಲಿ ಯರವಾಡ ಜೈಲಿನಲ್ಲಿದ್ದ ನಾಯ್ಡು ಅಲ್ಲಿನ ಪಕ್ಷಪಾತಗಳನ್ನು ಪ್ರತಿಭಟಿಸಿ, ಜೈಲಿನಲ್ಲಿದ್ದ ಗಾಂಧೀಜಿಯವರಿಂದ ಶಾಂತಿ ಉಪದೇಶ ಪಡೆದಿದ್ದೂ ಉಂಟು. ಅಲ್ಲಿ ಜರ್ಮನ್ ಪತ್ರಿಕೋದ್ಯಮ ಮಿತ್ರರ ಸಹವಾಸ ನಂತರದ ವಾಮಪಥದವರ ನಿಕಟ ಸಂಪರ್ಕ ದೀನದಲಿತರ ಬಗೆಗೆ ಅನುಕಂಪ ಈ ಎರಡೂ ಕಾರಣಗಳ ಹಿನ್ನೆಲೆಗಳಲ್ಲಿ ಅವರೊಳಗಿನ ಕಲಾವಿದ ಎಚ್ಚರಗೊಂಡ. ಶಿಲ್ಪ ಮತ್ತು ಚಿತ್ರಗಳು ಮೂಡಿಬರಲಾರಂಭಿಸಿದವು. ಜೈಲುವಾಸದಿಂದ ಬಿಡುಗಡೆಗೊಂಡು ಬದಲಾಗಿದ್ದ ನಾಯ್ಡು ಹೊರಬಂದರು. ಮುಂಬಯಿಯಲ್ಲಿ ಭಗ್ನಪ್ರೇಮದ ಅನುಭವವೂ ಆಯಿತು. ಮನದ ತಳಮಳಗಳನ್ನು ಮರೆಯಲು ಪುಸ್ತಕಗಳ ಮೊರೆಹೊಕ್ಕರು. ಮಾರ್ಕ್ಸ್‌ವಾದಿ ಪಿ.ಸಿ. ಜೋಶಿ ಅಧಿಕಾರಿ. ರಣದಿವೆ, ಚಾರಿ ಮೊದಲಾದ ಕ್ರಾಂತಿಕಾರಿಗಳ ಸಹವಾಸ ನಡವಳಿಕೆಗಳಿಂದ ಭೂಗತ ಚಳವಳಿಗಳಲ್ಲಿ ಸೇರಿ ಕ್ರಾಂತಿವೀರರ ಬದುಕಿನ ಅಧ್ಯಯನವೂ ನಡೆಯಿತು. ಅದರ ಪ್ರಭಾವ ತೀವ್ರವಾಗಿಯೇ ಆಯಿತು. ಇವೆಲ್ಲದರ ಜೊತೆಜೊತೆಗೆ ಏಕಾಂತಜೀವನ; ಕಲಾಕೃತಿಗಳು ಕಾಣಿಸಿಕೊಂಡವು.

ನಾಸಿಕದ ಬಂದೀಖಾನೆಯಲ್ಲಿ ನಾಯ್ಡು ಆಳೆತ್ತರದ ಲೆನಿನ್ ಮೂರ್ತಿಯನ್ನು ಜೇಡಿಮಣ್ಣಿನಲ್ಲಿ ರಾತ್ರಿಯೆಲ್ಲಾ ನಿದ್ದೆಗೆಟ್ಟು ಸೃಷ್ಟಿಸಿದಾಗ ಬಿಡುಗಡೆಗೊಂಡ ಮಾನಸಿಕ ಒತ್ತಡ ಕಳೆಯಿತು ಎಂದು ಹೇಳಲಾಗದು. ಏಕೆಂದರೆ ನೂರಾರು ಶಿಲ್ಪ, ಸಾವಿರಾರು ರೇಖಾಚಿತ್ರ ಹಾಗೂ ವರ್ಣಚಿತ್ರಗಳು ಅನಂತರ ಮೂಡಿಬಂದವು. ಸೋವಿಯತ್ ಕಲಾವಿದರ ಶಿಲ್ಪಚಿತ್ರ ಕ್ಯಾರಿಕೇಚರ್‌ಗಳು ಅವರನ್ನು ಹೆಚ್ಚು ಪ್ರಭಾವಿಸಿದವು. ಅಂದಿನ ಸಂದರ್ಭದ ಸಾಂಪ್ರದಾಯಿಕ ಚಿತ್ರಶಿಲ್ಪಗಳ ನಡುವೆ ನಡೆದಾಡುವ ಸಂದರ್ಭ, ಕಲೆಯ ರಾಜಕಾರಣ ಕುರಿತು, ಬೇಸರವೂ ಆಗಿದ್ದುಂಟು. ಆದರೂ ಅಂದಿನ ಕಲಾವಿದರೊಂದಿಗೆ ಸಂಪರ್ಕವಿದ್ದಿತು. ಭಾರತೀಯ ಪರಂಪರೆಯ ಶಿಲ್ಪಚಿತ್ರಗಳ ಅಧ್ಯಯನ ಆದರೂ ನಿಯಮಗಳನ್ನು ಮೀರಿ ತಮಗಿಷ್ಟ ಬಂದ ಹಾಗೆ ಸೃಷ್ಟಿಸುವ ಆಟ ಅವರಿಗಿಷ್ಟ. ರಷ್ಯಾದ ಎಸ್. ಅಲ್ಲೋಶಿನ್, ಸೆರ್ಗ್ಯೆಕೊನ್‌ಯೋನ್ ಕಾಯ್, ಮಿಖೇಲ್ ಅನಿಕುಷಿನ್ ಲೆವ್‌ಕೆರ್ಬೆಲ್, ಮೊದಲಾದವರ ಶಿಲ್ಪಗಳು, ಕುಕ್ರಿನಿಸ್ಕಿಯವರ ಕಾರ್ಟೂನ್‌ಗಳು, ವಿಡಂಬನಾತ್ಮಕ ರೇಖಾಚಿತ್ರಗಳನ್ನು ಅವರು ಗಮನಿಸಿದಂತಿದೆ. ಕಲೆಯ ವ್ಯಾಕರಣನ್ನು ಕಲಾಶಾಲೆಗಳಲ್ಲಿ ಕಲಿಯದೆಯೂ ಅವರೇ ರೂಢಿಸಿಕೊಂಡ ಶೈಲಿಯು ತೀಕ್ಷ್ಣತೆಯಿಂದ ಅವರ ರೇಖಾಚಿತ್ರಗಳಲ್ಲಿ ಬಹುತೇಕವಾಗಿ ಕ್ಯಾರಿಕೇಚರ್‌ಗಳಲ್ಲಿ ಕಾಣಿಸಿಕೊಂಡಿದೆ. ಸುತ್ತಲಿನ ಬದುಕಿನ ವಿಡಂಬನೆ, ತಲ್ಲಣಗಳ ಅನುರಣ, ಅವರ ರೇಖೆಗಳಲ್ಲಿವೆ; ಅವರ ಒಡಲಾಳದ ಪ್ರತಿರೂಪದಂತೆ ಕ್ರಾಂತಿಗಾಗಿ ಬರೆಸಿದ ಚಂಡೆ-ಮದ್ದಳೆಗಳ ಬಡಿತದ ವೀರ್ಯವಂತಿಕೆಯನ್ನು ಹೊಂದಿವೆ. ಕೆಲವೊಮ್ಮೆ ತಲ್ಲಣಗೊಂಡ ಕವಿಯೊಬ್ಬನ ಕಾವ್ಯಮಯ ಭಾವವನ್ನು ಒಳಗೊಂಡಿವೆ. ಅದ್ಭುತ ನಿರೂಪಣೆ, ಗತಿ ವಿನ್ಯಾಸಗಳನ್ನು ಸೂಚಿಸುವ ಮಿತವ್ಯಯದ ನೂತನ ಶೈಲಿ, ಸಾಮರಸ್ಯ ಕಂಡುಬರುತ್ತದೆ. ಅವರ ವ್ಯಂಗ್ಯ, ವಿಡಂಬನೆ ಅಪರೂಪ. ಸಮಾಜದ ಪ್ರೀತಿಯಿಂದ ಸರ್ಕಾರವನ್ನು ಟೀಕಿಸಲು ದೃಶ್ಯ ಮಾಧ್ಯಮವನ್ನವರು ಯಶಸ್ವಿಯಾಗಿ ದುಡಿಸಿಕೊಂಡರು. ಕೆಲವೇ ರೇಖೆಗಳಲ್ಲಿ ತುಟಿ ಹಾಗೂ ಕಣ್ಣಂಚಿನಲ್ಲಿ ಹಣೆಯ ನಿರಿಗೆಯಲ್ಲಿ ರೇಖಿಸುತ್ತಿದ್ದ ಒಂದೆರಡು ಕೊಂಕುಗಳು ಬಿಂದು ಬೀಸುಗಳು ಇಡೀ ರೂಪಕ್ಕೆ ಒಂದು ವಿಶಿಷ್ಟ ದನಿಯನ್ನು ನೀಡಿವೆ. ವಿದೇಶಗಳಲ್ಲೂ ಪ್ರಕಟವಾದ ಅವರ ರೇಖಾಚಿತ್ರಗಳು ಮನ್ನಣೆಗೆ ಪಾತ್ರವಾಗಿದ್ದವು. "ಪಿಕ್ಟೋರಿಯಲ್ ಎಕನಾಮಿಕ್ಸ್"ನಲ್ಲಿ ನಾಯ್ಡು ಅವರ ವ್ಯಂಗ್ಯಚಿತ್ರಗಳ ಪಾತ್ರ ಗಣನೀಯ. ಅವರ ಕ್ರಾಂತಿಕಾರಿ ಚಿತ್ರಗಳು ಭಾರತದ ಜ್ಯೋತಿ, "ಹಿಂದೂ" ಮೊದಲಾದ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾದ ನಂತರ ಅವು ವಿದೇಶಿ "ಮ್ಯಾಂಚೆಸ್ಟರ್ ಗಾರ್ಡಿಯನ್"ನಲ್ಲಿ ಹಾಗೂ ನಮ್ಮ ದೇಶದ ಇನ್ನಿತರ ಭಾಷಾ ಪತ್ರಿಕೆಗಳಲ್ಲೂ ಪ್ರಕಟವಾಗುವಷ್ಟು ಪ್ರಭಾವಶಾಲಿ. ಅವರು ಬೆಂಗಳೂರಿನಲ್ಲಿದ್ದಾಗ ಪ್ರಜಾವಾಣಿ, ಡೆಕ್ಕನ್ ಹೆರಾಲ್ಡ್‌ಗಳಲ್ಲಿಯೂ ಅವರ ರೇಖಾಚಿತ್ರಗಳು ಕಾಣಿಸಿಕೊಳ್ಳುತ್ತಿದ್ದವು. ಅವುಗಳ ಲವಲವಿಕೆ ಸಂತಸ ಉಂಟುಮಾಡುತ್ತದೆ. ಕೈಲಾಸಂರವರು ಅಕ್ಷರ ಸಾಹಿತ್ಯವನ್ನು ದುಡಿಸಿಕೊಂಡಂತೆ ನಾಯ್ಡುರವರು ರೇಖೆಗಳನ್ನು ದುಡಿಸಿಕೊಂಡರು.

ಈ ಮೊದಲು ಹೇಳಿರುವಂತೆ, ನಾಸಿಕದ ಜೈಲಿನಲ್ಲಿ ೪ ಅಡಿ ಎತ್ತರದ ಲೆನಿಲ್ ಮಣ್ಣಿನ ಮೂರ್ತಿಯನ್ನು ನಾಯ್ಡು ಸೃಷ್ಟಿಸಿದರಷ್ಟೆ. ಅದನ್ನು ಅಧಿಕಾರಿಗಳು ಎತ್ತಿಕೊಂಡು ಹೋಗಿ ಭೂಗತಮಾಡಿದರು. ಈ ಮನೋವೃತ್ತಿಯಲ್ಲಿ ಮುಂದೆ ಅವರು ಬೆಂಗಳೂರಿನಲ್ಲಿ ವಾದಿರಾಜರು, ಇ.ಆರ್. ಸೇತುರಾಂ, ಬಿ.ವಿ.ಕೆ. ಶಾಸ್ತ್ರಿಯವರ ಸಹವಾಸದ ನಡುವೆ ಮ್ಯಾಕ್ಸಿಂ ಗಾರ್ಕಿಯ ಪ್ಲಾಸ್ಟರ್ ಶಿಲ್ಪವನ್ನು ಸೃಷ್ಟಿಸಿದರು. ಕ್ಯುಬಿಸ್ಟ್ ಶೈಲಿಯ ಬರ್ನಾರ್ಡ್‌ಷಾ ಶಿಲ್ಪವೂ ಇಲ್ಲಿ ನೆನಪಾಗುತ್ತದೆ. ಅವರ ಪ್ಲಾಸ್ಟರ್ ಆಫ್ ಪ್ಯಾರಿಸ್ ಉಬ್ಬುಶಿಲ್ಪಗಳು ಭಾವಶಿಲ್ಪಗಳು ಜೀವಂತ, ಶಕ್ತಿಯುತವಾಗಿದೆ. ಈಗಾಗಲೇ ಹೇಳಿರುವ ಶಿಲ್ಪಗಳ ಜೊತೆಜೊತೆಗೆ ಮುಸಲೋನಿ, ಗಾಂಧಿ, ಬುದ್ಧ, ಶಿವ, ಕ್ರಿಸ್ತ, ಬೇಂದ್ರೆ, ಕುವೆಂಪು, ಕೈಲಾಸಂ, ಬರ್ನಾರ್ಡ್‌ಷಾ ಮೊದಲಾದವರ ಭಾವಶಿಲ್ಪಗಳು ನೋಡುಗರನ್ನು ಬಹುಕಾಲ ಕಾಡುವಂತಿವೆ.

೧೯೫೪ರ ನಂತರ ನಾಯ್ಡು ಅವರು ಮೈಸೂರಿನಲ್ಲಿ ಅಲ್ಲಿಯ ಕಾರ್ಮಿಕರ ನಡುವೆ ಸರಳಬದುಕು ನಡೆಸಲಾರಂಭಿಸಿದರು. ೬.೧೦.೧೯೮೫ರಲ್ಲಿ ಇಹಲೋಕ ತ್ಯಜಿಸುವವರೆಗೂ ತಮ್ಮ ೮೦ ವರ್ಷಗಳ ಬ್ರಹ್ಮಚಾರಿ ಜೀವನದಲ್ಲಿ ಯಾರೊಬ್ಬರ ಹಂಗನ್ನೂ ಅವಲಂಬಿಸದೆ ಸರಳವಾಗಿ ತಮಗಿಷ್ಟ ಬಂದಂತೆ ಬದುಕಿದರು. ನಾಯ್ಡು ಅವರ ಕೃತಿಗಳು ಅವರ ಗಾಢ ರಾಷ್ಟ್ರಪ್ರೇಮ, ವಾಮಪಂಥೀಯ ಒಲವು, ನೆಲದ ಜೀವಧ್ವನಿಯ ಅಭಿಮಾನ, ಪ್ರಗತಿಶೀಲ ದೃಷ್ಟಿ, ಮಿಗಿಲಾಗಿ ಸಾಮಾನ್ಯರು, ಅದರಲ್ಲಿಯೂ ಮಣ್ಣಿಗೆ ಹತ್ತಿರವಾದವರ ಬಗೆಗಿನ ಅನುಕಂಪ ಮೊದಲಾದವುಗಳ ಪ್ರತೀಕದಂತಿವೆ.

*(ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಆರ್.ಎಸ್.ಎನ್. ಶತಮಾನೋತ್ಸವ ಸಂದರ್ಭದಲ್ಲಿ ಪ್ರಕಟಿಸಿದ ಪರಿಚಯ ಪತ್ರದಿಂದ)*



R.S. Naidu
Freedom Fighter,
Sculptor & Artist

Roopena Agrahara,
Madivala Post office,
Bangalore South Taluk

Thursday 23rd January, 1947

*My dear Reddigaru,*

I trust this letter finds you in sound health and fine spirits.

You have not called at my place for over a month now. It looks like ages for me, since I was anxiously looking forward to our meeting. I wanted to discuss a number of personal matters also with you. Kindly make it convenient to come to my place at the earliest.

In the meanwhile, I am glad to inform you that Mr. Hariharan, General Manager of the Government Porcelain Factory, kindly extended whole-hearted co-operation to me. It is pleasure to remember all the accommodation he showed. Thanks to his assistance, I have been able to complete the Great Budha's Bust desired by you. I have moulded this Bust in plaster of paris specially for you, keeping in view of your love, admiration and devotion to Gautham Budha. I hope you will appreciate the art and keep it as a memento to remind you always the intimacy we had for over a decade now, when we shared our joys and sorrows. I shall ever remember the kind help you rendered me at a difficult time. Please come and collect the BUST. I want to present it as a token of my keen sense of gratitude for all that you have done to me after my return from England. I cannot forget how you and your parents looked after me when I was arrested at Bangalore and taken to Yerawada Jail. Please feel free to deal with the Bust in any manner your think appropriate.

The Bust has won the appreciation and admiration of many friends who have had a look at it. I want you to hurry up and collect the same. More in person.

Please convey my Namskarams to your parents and love and blessings to your brothers.

Yours affectionately
Sd/-
***R.S. Naidu***
(R. Seethapati Naidu)

# ಆರ್‌ಎಸ್‌ಎನ್ ಹಸ್ತಾಕ್ಷರ



Camp Bilva 2
12/8/73

My dear K'swamy,

I thank you bro-i-law for taking the trouble to come all the way to the Hospital to hand over the Philips Transistor. Kind of him. I have promised him that I will raid his place near Belur some day & wander about the rural surroundings, tire myself out & lay down & sleep & sleep & sleep.

But why do you people do things in this slip-shod, so-stupidly inefficient manner? Why have you not sent the ~~Radio~~ Licence along with the Transistor? Please send it (Licence) at once by return of book-post. Please do not fail to. Thank you

I am very tired; physically and mentally exhausted. I do hope I respond somewhat vigorously to our very kind & thoughtful efforts of Doctors. "Drops", injections are often → PTO

Do please, in God's name, be sincere. That will make an infinite difference as will see for yourself. Thank you,

Yours [illegible] RSN

2

forbiddingly expensive, as much as 30/- to 40/- in a day!
Fantastic. Thank God, things have a way of coming
to the rescue. Else all my worldly resources together could
not have paid for just a fortnight's (or less) of. Course,
chemical props for ~~reviving~~ & sustaining the old b...
& pass on ~~to~~ a therapeutic phase.

The trip to Madras Cancer Centre
mostly likely to come off in a about three weeks time.
I sincerely hope you will drop in at the Hospital soon
~~with~~ to fulfill finally your promise. That will make
me

free the Madras Cancer Hospital in tentative







ಕಾಳಿದಾಸ ಮತ್ತು ಷೇಕ್‌ಸ್ಪಿಯರ್
ಆರ್.ಎಸ್.ಎನ್. ಅವರ ಕಲ್ಪನೆಯಲ್ಲಿ

# ರೇಖಾಚಿತ್ರಗಳು

## ಬ್ಯಾಲೆ ರೇಖಾಚಿತ್ರಗಳು



ಚಿತ್ರ : ಒಂದು



ಚಿತ್ರ : ಎರಡು



ಚಿತ್ರ : ಹನ್ನೊಂದು



ಚಿತ್ರ : ಹನ್ನೆರಡು



ಚಿತ್ರ : ಹದಿಮೂರು

# ವ್ಯಕ್ತಿ ಚಿತ್ರಗಳು



ಜವಹರಲಾಲ್ ನೆಹರು



ಥಾಮಸ್ ಹಾರ್ಡಿ



ಚಾರ್ಲ್ಸ್ ಡಿಕೆನ್ಸ್



ಡಬ್ಲ್ಯೂ. ಬಿ. ಏಟ್ಸ್




ಷೇಕ್ಸ್‌ಪಿಯರ್




ರವೀಂದ್ರರು




ಮೋತಿಲಾಲ್ ನೆಹರು



ಲೆನಿನ್



ಆನಂದ ಕುಮಾರಸ್ವಾಮಿ



ತಾಯಿ ಎಲಿಜ಼ಬೆತ್ ಕ್ಲೇ



ತಾಯಿ ಎಲಿಜ಼ಬತ್ ಕ್ಲೇ ಮತ್ತು ತಂದೆ ಮುತ್ತು ಕುಮಾರಸ್ವಾಮಿ



ತಂದೆ ಮುತ್ತು ಕುಮಾರಸ್ವಾಮಿ



ಪುಷ್ಕಿನ್




ಬರ್ಟ್ರಾಂಡ್ ರಸೆಲ್




ಐಸೆನ್‌ಸ್ಟೀನ್










Bose walking off with Gandhi's lamb (Unmasked Parties and Politics, 1940)





ಎಂ.ಎಸ್. ಚಂದ್ರಶೇಖರ್ ರಚಿತ ಆರ್.ಎಸ್.ಎನ್. ಮನೆಯ ಚಿತ್ರ



ಮಾತೆ ಮೇರಿ ಮಗು ಯೇಸು



ಜರ್ಮನ್ ಸಂಗೀತಗಾರ



ರವೀಂದ್ರರು



ತಂಗಿ ಮತ್ತು ಭಾವ



ಚಂದ್ರನಾಥ ಆಚಾರ್ಯ ಅವರು  ರಚಿಸಿದ ಜಲವರ್ಣ ಚಿತ್ರ



ಮುಖ್ಯಮಂತ್ರಿ ದೇವರಾಜ ಅರಸ್ ಅವರು ಆರ್.ಎಸ್.ಎನ್. ಅವರಿಗೆ ಪ್ರಶಸ್ತಿ ನೀಡುತ್ತಿರುವುದು



ಜಮನಾಲಾಲ್ ಬಜಾಜರವರ ಕುಟುಂಬದೊಂದಿಗೆ ಆರ್.ಎಸ್.ಎನ್. ತಂಗಿ ಸುಲೋಚನಮ್ಮ ಮತ್ತು ಭಾವ ಕೇಶವ ಗೋಪಾಲನಾಯ್ಡು



(ಎಡದಿಂದ ಬಲಕ್ಕೆ) ಎಸ್.ಎನ್. ಚಂದ್ರಶೇಖರ್ (2ನೆಯವರು), ಎಂ.ಎಸ್. ನಂಜುಂಡರಾವ್,
ಶ್ರೀಮತಿ ಸುಧಾ ವಿ. ರೆಡ್ಡಿ, ಆರ್.ಎಸ್.ಎನ್. (6ನೆಯವರು), ಪಿ.ಆರ್. ತಿಪ್ಪೇಸ್ವಾಮಿ (8ನೆಯವರು),
ಎಸ್. ಕಾಳಪ್ಪ, ಇನಾಮತಿಯವರು



ಮೈಸೂರಿನಲ್ಲಿ ಆರ್.ಎಸ್.ಎನ್. ಅವರಿಗೆ ಔತಣಕೂಟ ಏರ್ಪಡಿಸಿದ್ದ ಸಂದರ್ಭ
(ಎಡದಿಂದ ಬಲಕ್ಕೆ) ಜೀ.ಶಂ. ಪರಮಶಿವಯ್ಯ, ಹಾ.ಮಾ. ನಾಯಕ, ಎಚ್.ಎಲ್. ನಾಗೇಗೌಡ,
ಆರ್.ಎಸ್.ಎನ್., ದೇಜಗೌ, ಕಾ.ರಾ.ಕೃ.

